## ದಯವಿಟ್ಟು ಗಮನಿಸಿ

ಪ್ರತಿ ಪುಸ್ತಕಕ್ಕೂ ಮುಖ ಬೆಲೆಯ ಶೇ. ೨೦ರಷ್ಟು ರಿಯಾಯಿತಿ ನೀಡಲಾಗುವುದು.



ಶೇ. ೩೩ರಷ್ಟು ರಿಯಾಯಿತಿದೆ. ಒಂದು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಬೇಕು.



ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ಕ್ಕೆ ಚಂದಾದಾರರಾಗಿರಿ.

| | | |
|---|---|---|
| ಬಿಡಿ ಪ್ರತಿ | – | ೩೦–೦೦ |
| ವಾರ್ಷಿಕ ಚಂದಾ | – | ೧೦೦–೦೦ |
| ಆಜೀವ ಚಂದಾ | – | ೩೦೦–೦೦ |

## ಕರ್ನಾಟಕ ಸಾಹಿತ್ಯ ಅಕಾಡೆಮಿಯ ಹೊಸ ಪ್ರಕಟಣೆಗಳು

### ಕವಿ–ಕೃತಿ ಆಧುನಿಕ ಚಿಂತನ ಮಾಲೆ

| | | | |
|---|---|---|---|
| ೧. | ಬೇಂದ್ರೆ ಕಾವ್ಯ | ಜಿ.ಎಸ್. ಆಮೂರ | ೧೫೦.೦೦ |
| ೨. | ಕುವೆಂಪು ಕಾದಂಬರಿಗಳು | ಗುರುಪಾದ ಮರಿಗುದ್ದಿ | ೧೫೦.೦೦ |
| ೩. | ಬಸವ ಸಾಹಿತ್ಯ | ಮೃತ್ಯುಂಜಯ ರುಮಾಲೆ | ೧೨೫.೦೦ |
| ೪. | ಕುಮಾರವ್ಯಾಸನ ಕನ್ನಡ ಭಾರತ | ಶ್ಯಾಮಸುಂದರ ಬಿದರಕುಂದಿ | ೧೨೫.೦೦ |
| ೫. | ಅಲ್ಲಮಪ್ರಭು – ಚಿಂತನ | ಡಾ. ಎಸ್.ಕೆ. ಕೊಪ್ಪಾ | ೧೨೫.೦೦ |
| ೬. | ಪುರಂದರದಾಸ–ಕೀರ್ತನ | ಮಧುಕರ ಯಕ್ಕುಂಡಿ | ೬೫.೦೦ |
| | | ಒಟ್ಟು | ೭೪೦.೦೦ |

ಎಂದಿನಂತೆಯೇ ಶೇ. ೨೦ರ ರಿಯಾಯಿತಿ ಉಂಟು.

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಜನವರಿ – ಮಾರ್ಚ್ – ೨೦೦೬

*ಸಂಪಾದಕ*

**ಡಾ. ಎಂ.ಎಸ್. ಶೇಖರ್**



ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ

ಬೆಂಗಳೂರು – ೫೬೦ ೦೦೨

ದೂರವಾಣಿ : ೨೨೨೧ ೧೮೩೦

ANIKETHANA : A Literary Journal (Quarterly)
Edited by : **Dr. M.S. Shekar,** HOD, Dept of Kannada, Mysore University, P.G. Centre, Hemagangothri, Hassan - 573 201
Published by : **V.N. Mallikarjunaswamy,** Registrar, Karnataka Sahithya Academy, Kannada Bhavana, J.C. Road, Bangalore - 02

Pages : xii + 148

Registration No. 45646/88

ಸಂಪುಟ : ೧೭

ಸಂಚಿಕೆ : ೩

ಪ್ರತಿಗಳು : ೧೨೦೦

ಪುಟಗಳು : xii + ೧೪೮

ಪ್ರಧಾನ ಸಂಪಾದಕರು
ಗೀತಾ ನಾಗಭೂಷಣ
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರಕಾಶಕರು
ವಿ.ಎನ್. ಮಲ್ಲಿಕಾರ್ಜುನಸ್ವಾಮಿ
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು – ೫೬೦ ೦೦೨

ಬಿಡಿ ಪ್ರತಿ : ರೂ. ೫೦/–
ವಾರ್ಷಿಕ ಚಂದಾ : ರೂ. ೧೦೦/–
ಆಜೀವ ಚಂದಾ : ರೂ. ೫೦೦/–

ಮುಖಪುಟ ಕಲೆ : ಕೆ.ಟಿ. ಶಿವಪ್ರಸಾದ್
ರಕ್ಷಾಪುಟ ವಿನ್ಯಾಸ : ಅನಿತಾ

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು–೧೮
ದೂರವಾಣಿ : ೨೬೬೧ ೫೧೨೫, ೨೬೬೧ ೮೭೫೨

## ಸಂಚಿಕೆಯ ಮುನ್ನ...

ಗುಣಾತ್ಮಕವಾದ ಸಾಹಿತ್ಯ ಸಂಚಿಕೆಯನ್ನು ರೂಪಿಸಬೇಕಾದರೆ; ಮೌಲಿಕವಾದ ಬರಹಗಳನ್ನು ಕಲೆ ಹಾಕಬೇಕಾಗುತ್ತದೆ. ಇದು ಕೊಂಚ ತ್ರಾಸದ ಕೆಲಸವೆ ಆಗಿರುವುದರಿಂದ, ಈ ಸಂಚಿಕೆ ನಿಮ್ಮ ಕೈ ಸೇರುತ್ತಿರುವುದು ಸ್ವಲ್ಪ ತಡವೆ ಆಗಿದೆ. ಇದಕ್ಕಾಗಿ ಅನಿಕೇತನ ಓದುಗ ಬಳಗದ ಕ್ಷಮೆ ಇರಲಿ. ನನ್ನ ಸಂಪಾದಕತ್ವದಲ್ಲಿ ಐದನೆಯ ಸಂಚಿಕೆಯಾಗಿ ಇದು ಹೊರಬರುತ್ತಿದೆ. ನಮ್ಮ ಅಕಾಡೆಮಿಯ ಅಧ್ಯಕ್ಷರು, ಸದಸ್ಯರುಗಳು ಹಾಗೂ ಆಡಳಿತ ವರ್ಗದವರೆಲ್ಲರೂ ಸಹ ಇದುವರೆಗೂ ಬಂದಿರುವ ಅನಿಕೇತನ ಸಂಚಿಕೆಗಳ ಬಗ್ಗೆ ಪತ್ರಗಳ ಮುಖಾಂತರ ಬಂದಿರುವ ಅಭಿಪ್ರಾಯಗಳನ್ನು ನನಗೆ ತಿಳಿಸುತ್ತಲೆ ಮೆಚ್ಚುಗೆಯ ಮಾತುಗಳನ್ನಾಡಿ ಪ್ರೋತ್ಸಾಹಿಸಿದ್ದಾರೆ. ಹಾಗಾಗಿ ಅವರುಗಳಿಗೆಲ್ಲ ನಾನು ಕೃತಜ್ಞ. ಸಂಚಿಕೆಗಳು ಇನ್ನಷ್ಟು ಗುಣಾತ್ಮಕವಾಗಿ ಬರಬೇಕು ಎಂಬ ವಿಷಯದಲ್ಲಿ ನಾನು ಅತೃಪ್ತನೆ. ಬಹುಶಃ ಈ ನನ್ನ ಅತೃಪ್ತಿಯೆ ಸಂಚಿಕೆಗಳು ಮೌಲಿಕವಾದ ಬರಹಗಳಿಗೆ ಕಾರಣವಾಗುತ್ತಿದೆ ಅನ್ನಿಸುತ್ತಿದೆ.

೨೦೦೬ರ ಸಾಲಿನ ಮೊದಲನೆಯದಾದ ಈ ಸಂಚಿಕೆ ಹಲವು ವಿಶಿಷ್ಟ ಗಟ್ಟಿ ಬರಹಗಳನ್ನೊಳಗೊಂಡಿದೆ. ಜಗತ್ತಿನ ಬೇರೆ ಬೇರೆ ಭಾಷೆಯ ಕತೆ, ಕವಿತೆ ಹಾಗೂ ಲೇಖನಗಳ ಅನುವಾದಗಳನ್ನೊಳಗೊಂಡ ಈ ಸಂಚಿಕೆ; ಪ್ರಖ್ಯಾತ ಚಿತ್ರಕಲಾವಿದರೊಬ್ಬರ ಸಂದರ್ಶನವನ್ನು ಒಳಗೊಂಡಿದೆ. ಜೊತೆಗೆ ಕನ್ನಡ ಸಾಹಿತ್ಯದ ವೈವಿಧ್ಯತೆಯ ಸೂಕ್ಷ್ಮ ಬರಹಗಳನ್ನೊಳಗೊಂಡ ಈ ಸಂಚಿಕೆ ಅನಿಕೇತನ ಓದುಗರಿಗೆ ಸದಭಿರುಚಿಯನ್ನುಂಟು ಮಾಡಬಲ್ಲುದುದ್ದಾಗಿದೆ.

ಅನುವಾದ ಭಾಗದಲ್ಲಿ ಬದುಕಿನ ಸಂಕೀರ್ಣತೆಗಳನ್ನೊಳಗೊಂಡ, ತಣ್ಣನೆಯ ವಿಷಾದವನ್ನುಂಟು ಮಾಡುವ ತುಂಬು ಮಹತ್ವದ ಬರಹಗಳಿವೆ. ರವೀಂದ್ರನಾಥಠಾಕೂರ್ ಅವರ 'ಒಂದು ಮುಸಲ್ಮಾನಳ ಕಥೆ' ಎಂಬ ಕಥೆಯು ನಿಜವಾದ ಮನುಷ್ಯ ಸಂಬಂಧದ ಮೂಲನೆಲೆಯ ಬೇರುಗಳತ್ತ ಕೊಂಡೊಯ್ಯುತ್ತದೆ. ರಜಪೂತ ಮೂಲದ ತಾಯಿಯ ಮಗನಾದ ಹಬೀರಖಾನನು, ಅಸಹಾಯಕ ಹಿನ್ನೆಲೆಯ ಕಮಲಾಳನ್ನು ದೊಡ್ಡ

ದುರಂತದಿಂದ ಪಾರು ಮಾಡಿ ಅವಳ ಜೀವನಕ್ಕೆ ಆಸರೆಯಾಗುತ್ತಾನೆ. ನಿಜವಾದ ಮನುಷ್ಯ ಸಂಬಂಧ ಗಟ್ಟಿಗೊಳ್ಳುವುದು ಪ್ರೀತಿ–ಪ್ರೇಮ ಹಾಗೂ ಮಾನವೀಯವಾದ ಗುಣ ನಡತೆಗಳಿಂದಲೆ ಹೊರತು; ಅರ್ಥವಿಲ್ಲದ ಜಾತಿ, ಮತ–ಧರ್ಮಗಳಿಂದಲ್ಲ; ಎಂಬ ಅರ್ಥವನ್ನು ಧ್ವನಿಸುವ ರವೀಂದ್ರನಾಥ ಠಾಕೂರರ ತುಂಬು ಮಹತ್ವದ ಈ ಕಥೆಯನ್ನು ಶ್ರೀನಿವಾಸ ವಿ. ಸುತ್ರಾವೆ ಅವರು ಅನುವಾದಿಸಿಕೊಟ್ಟಿದ್ದಾರೆ. ತುಂಬ ಕ್ರೂರವಾದ ವರ್ಣಭೇದ ನೀತಿಯ ವಿರುದ್ಧ, ಅಹಿಂಸಾತ್ಮಕವಾದ ಹೋರಾಟವನ್ನು ಮಾಡುತ್ತಲೆ; ಮಹಿಳಾವಾದವನ್ನು ಅರ್ಥಪೂರ್ಣವಾದ ಹಿನ್ನೆಲೆಯಲ್ಲಿ ಹುಟ್ಟುಹಾಕಿದ ಅಮೇರಿಕಾದ ಪ್ರಸಿದ್ಧ ಲೇಖಕಿ ಆ್ಯಲಿಸ್ ವಾಕರ್ ಅವರ 'ಕಪ್ಪು ಲೇಖಕರು ಮತ್ತು ದಕ್ಷಿಣ ಭಾಗದ ಅನುಭವ' ಎಂಬ ಲೇಖನ ತುಂಬು ಮಹತ್ವದ್ದಾಗಿದೆ. ಕಡುಬಡವರಿಗೆ ಸಂಸ್ಥೆಯೊಂದು ನೀಡುವ ಆಹಾರ ಧಾನ್ಯವನ್ನು ಪಡೆಯಲು; ಹೃದಯವಂತ ಧನಿಕರೊಬ್ಬರು ಕೊಟ್ಟಿದ್ದ ಹಳೆಯ ಬಟ್ಟೆಯನ್ನು ಸ್ವಚ್ಛ ಮಾಡಿಕೊಂಡು ಧರಿಸಿ ಹೋಗಿದ್ದ ಕಪ್ಪು ಮಹಿಳೆಯನ್ನು, ಧಾನ್ಯವನ್ನು ವಿತರಿಸುತ್ತಿದ್ದ ಬಿಳಿಯ ಹೆಂಗಸು ದಿಟ್ಟಿಸಿ ನೋಡುತ್ತ ತನ್ನ ಅಸಹನೆಯನ್ನು ಹೀಗೆ ತೋರಿಸುತ್ತಾಳೆ. "ಹ್ಞೂಂ, ಇಷ್ಟು ಒಳ್ಳೆಯ ಬಟ್ಟೆ ತೊಟ್ಟ ಯಾರೇ ಆದರೂ ಇಲ್ಲಿ ಬಂದು ತುತ್ತು ಕೂಳಿಗಾಗಿ ಭಿಕ್ಷೆ ಬೇಡುವ ಅಗತ್ಯವಿಲ್ಲ" ಎಂದಳು. "ನಾನು ಭಿಕ್ಷೆ ಬೇಡುತ್ತಿಲ್ಲ" ಎಂದ ನನ್ನ ತಾಯಿ "ಯಾರಿಗೆ ಅಗತ್ಯವಿದೆಯೋ ಅವರಿಗೆ ಸರ್ಕಾರವು ಹಿಟ್ಟನ್ನು ವಿತರಿಸುತ್ತಿದೆ ಮತ್ತು ಅದರ ಅಗತ್ಯವಿದೆ. ಒಂದು ವೇಳೆ ನನಗೆ ಇದರ ಅಗತ್ಯವಿಲ್ಲದಿದ್ದಲ್ಲಿ ಇಲ್ಲಿಗೆ ಬರುತ್ತಿರಲಿಲ್ಲ. ಇಷ್ಟಕ್ಕೂ ನಾನು ತೊಟ್ಟಿರುವ ಈ ಬಟ್ಟೆಯನ್ನು ನನಗೆ ಯಾರೋ ಕೊಟ್ಟಿದ್ದಾರೆ" ಎಂದಳು. ಆಹಾರ ವಿತರಿಸುತ್ತಿದ್ದ ಬಿಳಿಯ ಹೆಂಗಸು ಕೌಂಟರಿನಲ್ಲಿದ್ದ ಇನ್ನೊಬ್ಬ ಬಿಳಿಯನ ಜೊತೆಗೆ "ಇಲ್ಲಿಗೆ ಬಂದಿರುವ ನೀಗ್ರೋ ಹುಡ್ಗಿ ನನಗಿಂತ ಒಳ್ಳೆ ಬಟ್ಟೆ ಧರಿಸಿದ್ದಾಳೆ ಎಂದಳು." ಆಗ ಅಪಮಾನಿತಳಾದ ಕಪ್ಪು ಮಹಿಳೆ ದುಃಖವನ್ನು ತಾಳಲಾರದೆ ತನ್ನ ಚಿಕ್ಕಮಕ್ಕಳನ್ನು ಎಳೆದುಕೊಂಡು ಹೊರನಡೆಯುತ್ತಾಳೆ. ಈ ಘಟನೆಯಂತೂ ಹೃದಯ ಕಲಕುವಂತಿದೆ. ಜಾತಿ–ವರ್ಣಭೇದದ ಅಪಮಾನವನ್ನು ಅನುಭವಿಸಿದವರಿಗೆ ಗೊತ್ತು ಅದರ ಸಂಕಟ. ಇಂಥ ತಣ್ಣನೆಯ ವಿಷಾದವನ್ನುಟ್ಟಿಸುವ ಆ್ಯಲಿಸ್ ವಾಕರ್ ಅವರ ಲೇಖನವನ್ನು ತುಂಬು ಶ್ರದ್ಧೆಯಿಂದ ನಿಶಾಂತ್ ನಾಗವಾರ್ ಅವರು ಅನುವಾದಿಸಿ ಕೊಟ್ಟಿರುವುದು ತುಂಬ ಉಪಯುಕ್ತವಾದುದ್ದಾಗಿದೆ. ಇಂಥದ್ದೆ ಹಿನ್ನೆಲೆಯ ಚಿನುವಾ ಅಚಿಬೆ ಅವರ 'ಯುರೋಪು ಆಫ್ರಿಕಾಗಳ ನಡುವಿನ ಕೊಡಕೊಳೆ. ಒಂದು ದೃಷ್ಟಿಕೋನ ಲೇಖನವನ್ನು ಎಸ್. ಸಿರಾಜ್ ಅಹಮದ್ ಅವರು ಅನುವಾದಿಸಿದ್ದಾರೆ. ಪ್ರಸಿದ್ಧ ಮರಾಠಿ ಕವಿ ವಿಂದಾಕರಂದೀಕರ್ ಅವರ 'ಅರವತ್ತರ ಪಲುಕು' ಕವಿತೆಯನ್ನು ಡಾ. ತಾಳ್ತಜೆ ವಸಂತಕುಮಾರ್, ತಮಿಳಿನ ಪಾಂಬಟ್ಟಸಿದ್ದರು ಕವಿತೆಯನ್ನು ಡಾ. ಚೆ. ರಾಮಸ್ವಾಮಿ ಅವರುಗಳು ಅನುವಾದಿಸಿದ್ದಾರೆ. ತೆಲುಗಿನ ಜೆ.ಆರ್. ಮಹರ್ಷಿ ಅವರ ಕತೆಯನ್ನು ಬಿ. ಸುಜ್ಞಾನಮೂರ್ತಿ, ಹಿಂದಿಯ ಮೃದುಲಗರ್ಗ್ ಅವರ ಕತೆಯನ್ನು ಡಾ. ವಿಮಲ ಅವರುಗಳು ಅನುವಾದಿಸಿದ್ದಾರೆ. ಮಲೆಯಾಳಂ ಭಾಷೆಯ ಎಂ.ಟಿ. ವಾಸುದೇವನ್ ನಾಯರ್ ಅವರ 'ಕಡುಗಣ್ಣಾವ' ಎಂಬ ವಿಶಿಷ್ಟ ಕತೆಯನ್ನು ಡಾ. ಕಮಲಾಕ್ಷ ಅವರು ಅನುವಾದಿಸಿದ್ದಾರೆ. ಕೆರೆಬ್ಬಿಯನ್ ಮೂಲದ ಶ್ರೀಮತಿ

ಲೋರ್ನಾಗೂಡಿಸನ್ ಅವರ ಕವಿತೆಯನ್ನು ಕೃಷ್ಣಮೂರ್ತಿ ಚಂದರ್, ಒರಿಯಾ ಮೂಲದ ದಲಿತ ಕವಿ ಜೆ.ಪಿ. ದಾಸ್ ಅವರ ಕವಿತೆಯನ್ನು ಹೆಚ್. ನಾಗರಾಜಪ್ಪ ಅವರುಗಳು ಅನುವಾದಿಸಿದ್ದಾರೆ. ಈ ಬಗೆಯ ಮನುಷ್ಯ ತಲ್ಲಣದ ಅನುವಾದ ಬರಹಗಳು ಈ ಸಂಚಿಕೆಗೆ ಸೇರ್ಪಡೆಯಾಗಿರುವುದು ತುಂಬು ಮಹತ್ವದ ಸಂಗತಿಯೆ ಆಗಿದೆ.

ಸಂಚಿಕೆಯ ಎರಡನೆಯ ಭಾಗದಲ್ಲಿ : ಕನ್ನಡ ನಾಡು, ನುಡಿ ಹಾಗೂ ಅದರ ಏಳಿಗೆಗೆ ಟೊಂಕ ಕಟ್ಟಿ ದುಡಿದ ಬಿ.ಎಂ.ಶ್ರೀ. ಅವರು, ತೌಲನಿಕ ಸಾಹಿತ್ಯಕ್ಕೆ ನೀಡಿರುವ ಮಹತ್ವದ ಕೊಡುಗೆಯನ್ನು ಪ್ರೊ. ಎನ್.ಎಸ್. ತಾರಾನಾಥ್ ಅವರು ಅರ್ಥಪೂರ್ಣವಾಗಿ ಪರಿಚಯಿಸಿದ್ದಾರೆ. ತುಂಬು ಸೂಕ್ಷ್ಮ ಸಂವೇದನೆಯ ಪ್ರಖ್ಯಾತ ಚಿತ್ರಕಲಾವಿದರಾದ ಕೆ.ಟಿ. ಶಿವಪ್ರಸಾದ್ ಅವರನ್ನು ಜಿ.ವಿ. ಆನಂದಮೂರ್ತಿ ಅವರು ಸಂದರ್ಶನ ಮಾಡಿಕೊಟ್ಟಿದ್ದಾರೆ. ಸಂತ ಕವಿ ಶಿಶುನಾಳ ಷರೀಪರ ಬಗ್ಗೆ ರಾಜಪ್ಪ ದಳವಾಯಿ ಅವರು ಅರ್ಥಪೂರ್ಣವಾಗಿ ಬರೆದಿದ್ದಾರೆ. ಮಹಾತ್ಮ ಗಾಂಧೀಜಿಯವರಿಗೂ ಪ್ರೇರಣೆ ನೀಡಿದ ಮಹಾನ್ ಸಮಾಜಸುಧಾರಕ ಕುದ್ಮುಲ್ ರಂಗರಾಯರ ಕುರಿತಂತೆ ಮುಗುಳುವಳ್ಳಿ ಕೇಶವಧರಣಿಯವರ ಲೇಖನ ಒಳನೋಟದಿಂದ ಕೂಡಿದ್ದಾಗಿದೆ. ಪ್ರಸಿದ್ಧ ಇಂಡಿಯನ್ ಇಂಗ್ಲೀಷ್ ಕಾದಂಬಿರಕಾರ ಹಾಸನದ ರಾಜಾರಾವ್ ಅವರ 'ಕಾಂತಾಪುರ' ಕಾದಂಬರಿಯ ಬಗ್ಗೆ ಇರುವ ಡಾ. ವಸಂತಕುಮಾರ್ ಹ್ಯಾರಾನೆ ಅವರ ಲೇಖನ ಉಪಯುಕ್ತವಾದುದ್ದಾಗಿದೆ. ಸುಭಾಷ್ ಪಾಳೇಕರ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ (ಸ್ವಾಮಿ ಆನಂದ್ ಅವರ ಕೃತಿ), ಕೃತಿಯನ್ನು ಡಾ. ಅಪ್ಪಗೆರೆ ಸೋಮಶೇಖರ್ ಅವರು ತುಂಬ ಉಪಯುಕ್ತ ರೀತಿಯಲ್ಲಿ ಪರಿಚಯಿಸಿದ್ದಾರೆ. ವ್ರೊಲೆಸೊಯೆಂಕಾನನ್ನು ಕುರಿತಂತೆ ಕೆ. ಚಿನ್ನಸ್ವಾಮಿ ಅವರು ಬರೆದಿದ್ದಾರೆ. ಕುಸುಮಬಾಲೆ : ಒಂದು ಹೊಸ ಓದು ಎಂಬ ಬಿ.ಎಸ್. ರಘುನಾಥ್ ಲೇಖನ, ಗೊರೂರರ ಕಥಾಸಂಕಲನವೊಂದನ್ನು ಕುರಿತ ಬಿ. ಶರತ್‌ಕುಮಾರ್ ಅವರುಗಳ ಲೇಖನಗಳು ಕೂಡ ಹೊಸ ಬಗೆಯದವುಗಳಾಗಿವೆ.

ಹಾಗೆಯೆ ನಮ್ಮ ಹಿರಿ–ಕಿರಿಯ ಮಹತ್ವದ ಕವಿಗಳಾದ ಚ. ಸರ್ವಮಂಗಳಾ, ಮುಳ್ಳೂರು ನಾಗರಾಜ, ಮುನಿವೆಂಕಟಪ್ಪ ಶ್ರೀಮತಿ ಅಮ್ಮಯ್ಯ, ಮುಳ್ಳೂರು ಶಿವಮಲ್ಲು ಅವರುಗಳ ಕವಿತೆಗಳು ಈ ಸಂಚಿಕೆಯಲ್ಲಿವೆ.

ಹೀಗೆ; ಈ ಸಂಚಿಕೆಯಲ್ಲಿರುವ ವಿಭಿನ್ನ ಬಗೆಯ ಎಲ್ಲ ಬರಹಗಳು ಕೂಡ ಓದುಗರಿಗೆ ಸದಭಿರುಚಿಯನ್ನುಂಟು ಮಾಡುವಂತಿವೆ. ಹಾಗಾಗಿ ಇದಕ್ಕೆ ಕಾರಣವಾಗಿರುವ ಈ ಸಂಚಿಕೆಯ ಎಲ್ಲ ಹಿರಿ–ಕಿರಿಯ ಲೇಖಕ ಮಿತ್ರರುಗಳಿಗೂ, ಸಂಚಿಕೆಯ ಮುಖಪುಟ ಕಲೆಗಾಗಿ ತಮ್ಮ ಚಿತ್ರಕಲೆಯೊಂದನ್ನು ನೀಡಿರುವ ಬದುಕಿನ ಬಗ್ಗೆ ತಮ್ಮದೇ ಆದ ವಿಶಿಷ್ಟ ಒಳನೋಟಗಳಿರುವ ದಟ್ಟ ಮನುಷ್ಯ ಪ್ರೀತಿಯ ನಾಡಿನ ಪ್ರಖ್ಯಾತ ಚಿತ್ರಕಲಾವಿದರಾದ ಕೆ.ಟಿ. ಶಿವಪ್ರಸಾದ್ ಇವರೆಲ್ಲರಿಗೂ ನನ್ನ ನೆನಕೆಗಳು.

ನನ್ನ ಸಂಪಾದಕತ್ವದಲ್ಲಿ ಒಂದು ಸಂಯುಕ್ತ ಸಂಚಿಕೆಯು ಸೇರಿದಂತೆ; ಇದುವರೆಗೂ ನಾಲ್ಕು ಸಂಚಿಕೆಗಳು ಬಂದಿವೆ. ಇದು ಐದನೆಯ ಮತ್ತು ಕೊನೆಯ ಸಂಚಿಕೆಯಾಗಿದೆ. ೨೦೦೫ರಲ್ಲಿ

ನಾವುಗಳೆಲ್ಲರು ಸಾಹಿತ್ಯ ಅಕಾಡೆಮಿಗೆ ಸದಸ್ಯರಾದಾಗ ಸದಸ್ಯರುಗಳಲ್ಲಿ ಒಬ್ಬರು, ಅನಿಕೇತನ ತ್ರೈಮಾಸಿಕವನ್ನು ಸಂಪಾದಿಸಬೇಕೆಂದು ತೀರ್ಮಾನಿಸಲಾಯಿತು. ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರು, ಎಲ್ಲ ಸದಸ್ಯರುಗಳು ಹಾಗೂ ರಿಜಿಸ್ಟ್ರಾರ್ ಅವರುಗಳೆಲ್ಲರು ಸಹಮತದಿಂದ, ನನ್ನ ಮೇಲೆ ವಿಶ್ವಾಸ ವಿಟ್ಟು ಅನಿಕೇತನ ಸಂಪಾದನೆಯ ಜವಾಬ್ದಾರಿಯನ್ನು ನನಗೆ ವಹಿಸಿದರು. ೨೦೦೫ರ ಸಾಲಿನಲ್ಲಿ ಅಕಾಡೆಮಿಗೆ ಹೊಸ ಅಧ್ಯಕ್ಷರು ಹಾಗೂ ಸದಸ್ಯರುಗಳು ನೇಮಕವಾಗುವುದು ವಿಳಂಬವಾದ ಕಾರಣದಿಂದ ಕೆಲ ತಿಂಗಳುಗಳ ಅನಿಕೇತನದ ಕೆಲಸವು ಹಾಗೆ ಉಳಿದಿತ್ತು. ಹಾಗಾಗಿ ಅನಿವಾರ್ಯ ವಾಗಿ ೨೦೦೬ರ ಸಾಲಿನ ಸಂಚಿಕೆಯು ಸೇರಿದಂತೆ ಮೊದಲಿಗೆ ಒಂದು ಸಂಯುಕ್ತ ಸಂಚಿಕೆಯನ್ನು ರೂಪಿಸಲಾಯಿತು. ನಂತರ ಈ ಸಂಚಿಕೆಯು ಸೇರಿದಂತೆ ಒಟ್ಟು ಐದು ಸಂಚಿಕೆಗಳನ್ನು ನಾನು ಸಂಪಾದಿಸಿದ್ದೇನೆ. ನನ್ನ ಮೇಲೆ ವಿಶ್ವಾಸವಿಟ್ಟು ಈ ಕಾರ್ಯವನ್ನು ನಿರ್ವಹಿಸಲು ಅವಕಾಶವನ್ನಿತ್ತು, ಎಲ್ಲ ಬಗೆಯ ಸಹಕಾರ ನೀಡಿದ, ನಮ್ಮ ಅಕಾಡೆಮಿಯ ಅಧ್ಯಕ್ಷರಾದ ನಾಡೋಜ ಗೀತಾ ನಾಗಭೂಷಣ ಅವರಿಗೂ, ಎಲ್ಲ ಸದಸ್ಯರುಗಳಿಗೂ, ಹಾಗೂ ಅಕಾಡೆಮಿಯ ರಿಜಿಸ್ಟ್ರಾರ್ ಆದ ವಿ.ಎಸ್. ಮಲ್ಲಿಕಾರ್ಜುನಸ್ವಾಮಿ ಮತ್ತು ಎಲ್ಲ ಸಿಬ್ಬಂದಿಗಳಿಗೂ ಕೂಡ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಸಂಚಿಕೆಯನ್ನು ಸಾಧ್ಯವಾದಷ್ಟು ಮೌಲಿಕವಾಗಿ ತರಬೇಕೆನ್ನುವ ಉದ್ದೇಶದಿಂದ ಹಲವಾರು ಹಿರಿ–ಕಿರಿಯ ಮಹತ್ವದ ಲೇಖಕರುಗಳ ಬೆನ್ನಟ್ಟಿ ಬರೆಸುವ ಕೆಲಸವನ್ನು ಮಾಡಿಸಬೇಕಾಯಿತು. ಸಾಹಿತ್ಯ ಅಕಾಡೆಮಿ ಮತ್ತು ನನ್ನ ಮೇಲೆ ಅಭಿಮಾನವಿಟ್ಟು ಸಹಕರಿಸಿದ ಎಲ್ಲ ಲೇಖಕರುಗಳಿಗೂ, ಈ ಐದು ಸಂಚಿಕೆಗಳ ಮುಖಪುಟಕ್ಕೂ ತಮ್ಮ ಚಿತ್ರಕಲೆಗಳನ್ನು ಕೊಟ್ಟು ಸಹಕರಿಸಿದ ಪ್ರಖ್ಯಾತ ಚಿತ್ರಕಲಾವಿದರಾದ ಕೆ.ಟಿ. ಶಿವಪ್ರಸಾದ್ ಅವರಿಗೂ, ಸಂಚಿಕೆಗಳ ಮುಖಪುಟ ವಿನ್ಯಾಸ ಮಾಡಿಕೊಟ್ಟ ಅನಿತಾ ಅವರಿಗೂ, ಸಂಚಿಕೆಗಳನ್ನು ರೂಪಿಸುವಾಗ ಹಲವು ಉಪಯುಕ್ತ ಸಲಹೆ–ಸಹಕಾರಗಳನ್ನು ನೀಡಿದ ಕವಯತ್ರಿಯೂ ಆಗಿರುವ ನನ್ನ ಪ್ರಿಯ ಪತ್ನಿ ಶ್ರೀಮತಿ ಅಮ್ಮಯ್ಯ–ಇವರುಗಳೆಲ್ಲರುಗಳಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಹಾಗೆಯೆ, ಅನಿಕೇತನ ಸಂಚಿಕೆ ಹೊರಬಂದಾಗೆಲ್ಲ ಅದನ್ನು ಗಂಭೀರವಾಗಿ ಓದಿ, ಅನಿಕೇತನ ಸಂಚಿಕೆಗಳು ಚೆನ್ನಾಗಿ ಬರುತ್ತಿವೆ ಎಂದು ಅಕಾಡೆಮಿಗೆ ಮತ್ತು ನನಗೆ ಹಲವಾರು ಲೇಖಕರುಗಳು ಪತ್ರದ ಮುಖೇನ ಬರೆದು ತಿಳಿಸಿದ್ದಾರೆ. ಅವುಗಳಲ್ಲಿ ಎರಡು ಅಭಿಪ್ರಾಯಗಳನ್ನು ಸಂಚಿಕೆಯಲ್ಲಿ ಕೊಡಲಾಗಿದೆ. ಜೊತೆಗೆ ಕೆಲವು ಅನಿಕೇತನ ಓದುಗರು ದೂರವಾಣಿ ಮೂಲಕ ಅನಿಕೇತನ ಸಂಚಿಕೆಯ ಬಗ್ಗೆ ಒಳ್ಳೆಯ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಈ ಬಗೆಯ ಒಳ್ಳೆಯ ಅಭಿಪ್ರಾಯ ಹಾಗೂ ಪ್ರೋತ್ಸಾಹಗಳು ಕೂಡ ನಾನು ಸಂಪಾದಿಸಿರುವ ಸಂಚಿಕೆಗಳು ಮೌಲಿಕವಾಗಿ ಬರಲು ಸಾಧ್ಯವಾಗಿದೆ ಎಂಬುದು ನನ್ನ ನಂಬಿಕೆಯಾಗಿದೆ. ಈ ಬಗೆಯ ಒಳ್ಳೆಯ ಅಭಿರುಚಿಯ ಬರಹಗಳನ್ನು ನಮ್ಮ ಅನಿಕೇತನ ಓದುಗರು ಎಂದಿನ ಸಹೃದಯತೆಯಿಂದ ಸ್ವೀಕರಿಸುತ್ತಾರೆಂಬ ವಿಶ್ವಾಸದಿಂದ ಅನಿಕೇತನ ಓದುಗರು ಮತ್ತು ಲೇಖಕರುಗಳೆಲ್ಲರ ಸಹಕಾರವನ್ನು ನೆನೆಯುತ್ತ ಈ ನನ್ನ ಸಂಚಿಕೆಯ ಮುನ್ನ ಮಾತುಗಳನ್ನು ಮುಗಿಸುವೆ. ನಮಸ್ಕಾರ.

ಡಾ. ಎಂ.ಎಸ್. ಶೇಖರ್
ಸಂಪಾದಕ

# ಪರಿವಿಡಿ

## ಭಾಗ – ೧

# ಒಬ್ಬ ಮುಸಲ್ಮಾನಳ ಕಥೆ

ಬಂಗಾಳಿ ಮೂಲ : ರವೀಂದ್ರನಾಥ ಠಾಕೂರ್
ಅನುವಾದ : ಶ್ರೀನಿವಾಸ್ ವಿ. ಸುತ್ರಾವೆ

ರಾಜ್ಯದಲ್ಲಿ ಎಲ್ಲೆಡೆಯೂ ಅರಾಜಕತೆಯಿದ್ದ ಸಮಯ. ಪ್ರತಿ ದಿನ, ಪ್ರತಿ ರಾತ್ರಿ ಇದ್ದಕ್ಕಿದ್ದಂತೆ ಹಿಂಸಾಕೃತ್ಯಗಳು. ಬದುಕು ಒಂದು ದುಃಸ್ವಪ್ನವಾಗಿತ್ತು. ಮನೆಗಳಲ್ಲಿ ದೇವರಿಗೆ ಪ್ರಾರ್ಥನೆ. ರಕ್ಕಸರು ಬಂದೆರಗುವರೆಂಬ ಭಯ ಭೀತಿ ಜನರಲ್ಲಿ. ಯಾರನ್ನೂ ನಂಬುವ ಹಾಗಿದ್ದಿಲ್ಲ—ದೇವರನ್ನೇ ಆಗಲಿ, ಮನುಷ್ಯರನ್ನೇ ಆಗಲಿ ಕಣ್ಣೀರು ಸುರಿಸುವುದೇ ಕೆಲಸವಾಗಿತ್ತು. ಒಳಿತು ಕೆಡಕು ಎಲ್ಲ ಒಂದೇ ಆಗಿತ್ತು. ಹೆಜ್ಜೆ ಇಟ್ಟೆಡೆ ದೌರ್ಭಾಗ್ಯ.

ಪರಿಸ್ಥಿತಿ ಹೀಗಿರುವಾಗ ಒಬ್ಬರ ಮನೆಯಲ್ಲಿ ಸುಂದರವಾದ ಹುಡುಗಿಯೊಬ್ಬಳಿದ್ದಾಳೆ ಎಂದರೆ ಅದೊಂದು ಶಾಪವೇ ಆಗಿತ್ತು. ಅಂಥ ಹುಡುಗಿಯ ತಂದೆ-ತಾಯಿಗಳಾಗಲೀ ಅಥವಾ ಸಂಬಂಧಿಗಳಾಗಲೀ ಹೇಳುತ್ತಿದ್ದ ಮಾತೆಂದರೆ : "ಇವಳ ಮದುವೆ ಬೇಗ ಆಗಿ ಇವಳು ಹೋದರೆ ಸಾಕಾಗಿದೆ." ಲೇಸ್‌ಮಹಲಾದ ಜಮೀನ್ದಾರ ಬಂಗ್‌ಶಿಬದನ್‌ನ ಮನೆಯಲ್ಲೂ ಇಂತಹದೇ ಒಂದು ಶಾಪ.

ಅವಳೇ ಕಮಲಾ. ಅವಳ ತಂದೆ ತಾಯಿಗಳು ಸತ್ತಿದ್ದರು. ಅವರ ಜೊತೆ ಇವಳೂ ಸತ್ತಿದ್ದರೆ ಚನ್ನಾಗಿತ್ತು ಅಂದುಕೊಂಡರು ಅವಳ ಸಂಬಂಧಿಗಳು. ಆದರೆ ಅವಳು ಸಾಯಲಿಲ್ಲ. ಅವಳ ಚಿಕ್ಕಪ್ಪ ಬಂಗ್‌ಶಿದನ್ ಅವಳನ್ನು ತುಂಬ ಪ್ರೀತಿಯಿಂದ ಸಾಕಿದ. ಆದರೆ ಅವಳ ಚಿಕ್ಕಮ್ಮನಿಗೆ ಇಷ್ಟವಿರಲಿಲ್ಲ. ಅವಳು ನೆರೆಹೊರೆಯವರಿಗೆ ಹೇಳುತ್ತಿದ್ದಳು : "ಇದ್ಯಾವ ನ್ಯಾಯ, ಹೇಳಿ! ಎಲ್ಲಾ ತೊಂದರೇನ ನಮ್ಮ ತಲೇಗೆ ಕಟ್ಟಿ ಇವಳ ತಂದೆ ತಾಯಿಗಳು ಸತ್ತುಹೋದರು. ಯಾವಾಗ

ಏನಾಗುತ್ತೋ ಯಾರಿಗೆ ಗೊತ್ತು? ಅದೂ ಅಲ್ಲದೆ, ನಮಗೆ ನಮ್ಮ ಮಕ್ಕಳೇ ಇವೆ. ಇವಳು ಬೇರೆ ಬಂದು ಸೇರಿಕೊಂಡಿದ್ದಾಳೆ. ಪೀಡೆ. ಜನ ಇವಳನ್ನ ಕೆಟ್ಟ ಕಣ್ಣಿಂದ ನೋಡ್ತಾರೆ. ಇವಳಿಂದಾಗಿ ನಮ್ಮ ಇಡೀ ಕುಟುಂಬವೇ ನಾಶ ಆಗುತ್ತೋ ಏನೋ ಎಂಬ ಭಯ ನನಗೆ. ಹಾಗಾಗಿ ನನಗೆ ರಾತ್ರಿ ಸರಿಯಾಗಿ ನಿದ್ರೇನೇ ಬರಲ್ಲ."

ಹೀಗಿದ್ದೂ, ಕಾಲ ಹೇಗೋ ಹೋಗುತ್ತಿತ್ತು. ಆಮೇಲೆ ಒಂದು ದಿನ ಮದುವೆಯ ಪ್ರಸ್ತಾಪವೂ ಬಂತು. ಕಮಲಾ ಜನರ ಕಣ್ಣು ತಪ್ಪಿಸಿ ಇರಲಿಕ್ಕೆ ಸಾಧ್ಯ ಇರಲಿಲ್ಲ. ಅವಳ ಚಿಕ್ಕಪ್ಪ ಹೇಳುತ್ತಿದ್ದ : "ನಾನು ಅದಕ್ಕೋಸ್ಕರಾನೇ ಇವಳಿಗೆ ಸರಿಯಾದ ಕಡೆ ಸಂಬಂಧ ನೋಡ್ತಾ ಇದ್ದೆ." ಇವರಿಗೆ ಸಿಕ್ಕ ಸಂಬಂಧವೆಂದರೆ ಮೋಚಾಖಾಲಿಯಾದ ಪರಮಾನಂದ ಸೇಠ್‌ನ ಎರಡನೆಯ ಮಗ. ಈ ಹುಡುಗನಿಗೆ ಬೇಕಾದಷ್ಟು ಆಸ್ತಿ ಇತ್ತು. ಆದರೆ ತಂದೆ ಸತ್ತ ಕೂಡಲೇ ಬಹುಶಃ ಎಲ್ಲ ಕಳೆದುಕೊಳ್ಳುವಂಥವನು. ದುಂದುವೆಚ್ಚಕ್ಕೆ ಹೆಸರಾಗಿದ್ದವನು—ಟೇಗೆ ಸಾಕಣೆ, ಜೂಜು, ಬುಲ್ ಬುಲ್ ಕಾಳಗ, ಇತ್ಯಾದಿಗಳಿಗೆ. ತನ್ನ ಅಪಾರ ಸಂಪತ್ತಿನ ಬಗ್ಗೆ ಅವನಿಗೆ ಅಪಾರ ಜಂಬ. ಅವನಿಗೆ ಭೋಜ್‌ಪುರ್‌ನ ಅಂಗರಕ್ಷಕರಿದ್ದರು—ಲಾಠಿ ಕಾಳಗದಲ್ಲಿ ನಿಪುಣರಾಗಿದ್ದಂಥವರು. 'ಯಾರು ನನ್ನನ್ನ ಮುಟ್ತಾರೋ ನೋಡೋಣ' ಎಂದು ಜನರಿಗೆ ಸವಾಲೆಸೆಯುವ ಮನುಷ್ಯ ಈತ. ಹೆಂಗಸರು ಅಂದರೆ ವಿಶೇಷ ಆಸ್ಥೆ. ಅವನಿಗೀಗಾಲೇ ಒಬ್ಬ ಹೆಂಡತಿ ಇದ್ದಳು, ಆದರೆ ಇನ್ನೊಬ್ಬಳಿಗಾಗಿ ಹುಡುಕುತ್ತಿದ್ದ. ಅವನಿಗೆ ಕಮಲಾಳ ಸೌಂದರ್ಯದ ಬಗ್ಗೆ ಗೊತ್ತಾಯಿತು. ಈ ಸೇಠ್‌ಗಳಂತೂ ತುಂಬ ಶ್ರೀಮಂತರು. ಅವರು ಬಯಸಿದ್ದೆಲ್ಲ ಸಿಗುತ್ತಿತ್ತು, ನಡೆಯುತ್ತಿತ್ತು. ಹಾಗಾಗಿ ಅವರು ಈ ಹುಡುಗಿಯನ್ನು ತಮ್ಮ ಮನೆಯ ಸೊಸೆ ಮಾಡಿಕೊಳ್ಳಲು ನಿರ್ಧರಿಸಿದ್ದರು.

ಕಮಲಾ ಬಿಕ್ಕಿ ಬಿಕ್ಕಿ ಅಳುತ್ತಾ ಹೇಳಿದಳು : "ಚಿಕ್ಕಪ್ಪಾ, ನೀನು ನಿಜವಾಗ್ಲೂ ನನ್ನನ್ನ ಈ ನರಕಕ್ಕೆ ತಳ್ತೀರಾ?"

"ನೋಡು ಮಗು, ನಿನ್ನ ರಕ್ಷಣೆ ಮಾಡೋ ಶಕ್ತಿ ನನಗಿದ್ದಿದ್ದರೆ, ನಾನು ನಿನ್ನನ್ನ ಯಾವತ್ತೂ ನನ್ನ ಬಳಿಯೇ ಇಟ್ಟುಕೊಳ್ತಿದ್ದೆ."

ಮದುವೆಯ ಒಪ್ಪಂದದ ನಂತರ, ವರ ತುಂಬ ಡೌಲಿನಿಂದ ಬಂದ. ಬಾಜಾ ಬಜಂತ್ರಿ, ಕಣ್ಕುಕ್ಕುವ ವೈಭವ! ಕಮಲಾಳ ಚಿಕ್ಕಪ್ಪ ವರನಿಗೆ ನಯವಾದ ಧಾಟಿಯಲ್ಲೇ ಹೇಳಿದ : "ಮಗ, ಈ ರೀತಿಯ ಪ್ರದರ್ಶನ ಸರಿಯಲ್ಲ. ಈ ಕಾಲಾನೂ ಅದಕ್ಕೆ ಸರಿಯಾದದ್ದಲ್ಲ."

ಈ ಮಾತು ಕೇಳಿ ವರ ಗುಡುಗಿದ : "ನನ್ನ ತಂಟೆಗೆ ಯಾರು ಬರ್ತಾರೆ ನೋಡೋಣ!"

ಹುಡುಗಿಯ ಚಿಕ್ಕಪ್ಪ ಅವನಿಗೆ ಹೇಳಿದ : "ನೋಡಿಯಪ್ಪ, ಮದುವೆ ಶಾಸ್ತ್ರ ಆಗೋವರೆಗೆ ಈ ಹುಡುಗಿ ನಮ್ಮವಳಾಗಿದ್ದಳು. ಈಗ ಇವಳು ನಿಮ್ಮವಳು. ಇವಳನ್ನ ಸುರಕ್ಷಿತವಾಗಿ ನಿಮ್ಮ ಮನೆಗೆ ಕರಕೊಂಡು ಹೋಗೋದು ಈಗ ನಿಮ್ಮ ಜವಾಬ್ದಾರಿ. ನಾವು ಆ ಕೆಲಸಕ್ಕೆ ಅಶಕ್ತರು.

ವರ ಬಹಳ ದೊಡ್ಡ ಮನುಷ್ಯನ ಹಾಗೆ ಹೇಳಿದ : "ನೀವೇನೂ ಅದರ ಬಗ್ಗೆ ಯೋಚನೆ ಮಾಡಬೇಡಿ."

ಭೋಜ್‌ಪುರದ ಅಂಗರಕ್ಷಕರು ಮೀಸೆ ತಿರುವುತ್ತಾ ಲಾಠಿ ಹಿಡಿದು ನಿಂತಿದ್ದರು. ವರನು ತನ್ನ ನವ ವಧುವಿನೊಡನೆ ತಾಲ್ ತರಿಯ ಪರಿಚಿತ ಬಯಲನ್ನು ದಾಟಿ ಹೋಗುತ್ತಿದ್ದನು. ಮಧ್ಯರಾತ್ರಿಯ ಸುಮಾರಿಗೆ ದರೋಡೆಕೋರರ ನಾಯಕ ಮಧು ಮಲ್ಲಾರನು ತನ್ನ ಸಹಚರರೊಡನೆ ಜೋರಾಗಿ ಕೂಗುತ್ತಾ ಪಂಜುಗಳನ್ನು ಬೀಸುತ್ತಾ ಯಾತ್ರಿಕರ ಮೇಲೆರಗಿದನು. ಭೋಜ್‌ಪುರಿಯ ಬಹುತೇಕ ಎಲ್ಲರೂ ಮಾಯವಾದರು. ಮಧುಮಲ್ಲಾರ್ ಪ್ರಚಂಡ ಡಕಾಯಿತನಾಗಿದ್ದ. ಅವನಿಂದ ಯಾರೂ ತಪ್ಪಿಸಿಕೊಂಡು ಹೋಗುವಂತಿರಲಿಲ್ಲ.

ಕಮಲಾ ಪಲ್ಲಕ್ಕಿಯಿಂದಿಳಿದು ಓಡಿಹೋಗಿ ಪೊದೆಗಳಲ್ಲಿ ಅಡಗಿಕೊಳ್ಳಲು ಪ್ರಯತ್ನಿಸುತ್ತಿರುವಷ್ಟರಲ್ಲಿ ಮುದುಕ ಹಬೀರ್‌ಖಾನನು ಅವಳ ಹಿಂದಿನಿಂದ ಬಂದು ನಿಂತನು. ಎಲ್ಲರೂ ಹಬೀರ್ ಖಾನನನ್ನು ಒಬ್ಬ ಸಂತನಂತೆ ಗೌರವಿಸುತ್ತಿದ್ದರು. ಹಬೀರನು ದೃಢವಾಗಿ ನಿಂತು ಕೂಗಿ ಹೇಳಿದ : "ಹೊರಟುಹೋಗಿ, ಮಕ್ಕಳೆ. ನಾನು ಹಬೀರ್‌ಖಾನ್."

ದರೋಡೆಕೋರರು ಹೇಳಿದರು : "ಖಾನ್ ಸಾಹೇಬರೆ, ನಾವು ನಿಮ್ಮ ಜೊತೆ ವಾದ ಮಾಡಲಾರೆವು, ನಿಜ. ಆದರೆ ನೀವು ನಮ್ಮ ಉದ್ಯೋಗವನ್ನೇಕೆ ಹಾಳು ಮಾಡುತ್ತಿರುವಿರಿ?"

ಏನೇ ಆಗಲಿ, ಅವರು ಹೊರಟು ಹೋಗಲೇಬೇಕಾಯಿತು.

ಹಬೀರನು ಕಮಲಾಗೆ ಹೇಳಿದ : "ನೀನು ನನಗೆ ಮಗಳಿದ್ದ ಹಾಗೆ. ಹೆದರಬೇಡ. ಬಾ, ಈ ಅಪಾಯದ ಜಾಗದಿಂದ ದೂರ ಹೋಗೋಣ. ನಮ್ಮ ಮನೆಗೆ ಹೋಗೋಣ ಬಾ."

ಕಮಲಾಳ ಮುಖ ಬಿಳಿಚಿತು. ಹಬೀರ್ ಹೇಳಿದ : "ನನಗರ್ಥವಾಗುತ್ತೆ. ನೀನೊಬ್ಬ ಹಿಂದೂ ಬ್ರಾಹ್ಮಣರ ಹುಡುಗಿ, ಹಾಗಾಗಿ ನೀನು ಮುಸಲ್ಮಾನರ ಮನೆಗೆ ಹೋಗಲು ಹಿಂದೇಟು ಹಾಕುತ್ತಿದ್ದೀಯೆ. ಆದರೆ ನೆನಪಿರಲಿ—ನಿಜವಾದ ಮುಸಲ್ಮಾನರು ಧರ್ಮನಿಷ್ಠ ಬ್ರಾಹ್ಮಣರನ್ನು ಗೌರವಿಸುತ್ತಾರೆ ಎಂಬುದು. ನೀನು ನಮ್ಮ ಮನೆಯಲ್ಲಿ ಹಿಂದೂ ಕುಟುಂಬದ ಹೆಣ್ಣುಮಗಳಂತೆಯೇ ಇರಬಹುದು. ನನ್ನ ಹೆಸರು ಹಬೀರ್‌ಖಾನ್. ನನ್ನ ಮನೆ ಇಲ್ಲೇ ಹತ್ತಿರದಲ್ಲೇ ಇದೆ. ಬಾ, ನನ್ನ ಜೊತೆ. ಹೆದರಬೇಡ."

ಹಬೀರ್‌ಖಾನ್ ಕಮಲೆಯನ್ನು ತನ್ನ ಮನೆಗೆ ಕರೆದುಕೊಂಡು ಹೋದ. ಆಶ್ಚರ್ಯದ ಮಾತೆಂದರೆ, ಆ ಮನೆಯ ಎಂಟು ಪಾರ್ಶ್ವಗಳೊಂದರಲ್ಲಿ ಶಿವನ ಒಂದು ಪೂಜಾ ಕೋಣೆಯೂ ಇತ್ತು. ಅಲ್ಲಿ ಹಿಂದೂ ಪದ್ಧತಿಯಲ್ಲೇ ಪೂಜೆ ಮಾಡಬಹುದಾಗಿತ್ತು.

ಅಲ್ಲಿಯ ಒಬ್ಬ ಮುದಿ ಹಿಂದೂ ಬ್ರಾಹ್ಮಣ ಕಮಲಾಗೆ ಹೇಳಿದ :

"ಈ ಮನೆ ಹಿಂದುಗಳ ಮನೆಯಂತೆಯೇ ಇದೆ. ನೀನಿಲ್ಲಿ ಜಾತಿಭ್ರಷ್ಟಳಾಗಲಾರೆ."

ಕಮಲಾ ಅಳುತ್ತಾ ಹೇಳಿದಳು : "ದಯವಿಟ್ಟು ನಮ್ಮ ಚಿಕ್ಕಪ್ಪನಿಗೆ ಹೇಳಿ ಕಳಿಸಿ. ಅವರು ಇಲ್ಲಿಗೆ ಬಂದು ನನ್ನನ್ನು ಕರೆದುಕೊಂಡು ಹೋಗಲಿ."

ಹಬೀರ್ ಹೇಳಿದ : "ಇಲ್ಲ, ಮಗಳೆ, ನೀನು ತಪ್ಪು ತಿಳಿದಿದ್ದೀಯೆ. ಹಾಗಾಗುವುದಿಲ್ಲ. ನಿನ್ನ ಜನ ನಿನ್ನನ್ನು ವಾಪಸ್ಸು ಕರೆದುಕೊಳ್ಳುವುದಿಲ್ಲ. ಅವರು ನಿನ್ನನ್ನು ನಡುದಾರಿಯಲ್ಲೇ ಬಿಟ್ಟುಬಿಡುತ್ತಾರೆ. ಬೇಕಾದರೆ ನೀನಿದನ್ನು ಪರೀಕ್ಷೆ ಮಾಡಿ ನೋಡು."

ಹಬೀರ್‌ಖಾನನು ಕಮಲೆಯನ್ನು ಅವಳ ಚಿಕ್ಕಪ್ಪನ ಮನೆಯ ಹಿಂಬಾಗಿಲ ತನಕ ಕರೆತಂದು ಅವಳಿಗೆ ಹೇಳಿದ : "ನಾನಿಲ್ಲಿ ಕಾದಿರುತ್ತೇನೆ."

ಕಮಲಾ ಮನೆಯೊಳಗೆ ಹೋದಳು. ಚಿಕ್ಕಪ್ಪನನ್ನು ಅಪ್ಪಿಕೊಂಡು ಹೇಳಿದಳು :

"ದಯವಿಟ್ಟು ನನ್ನ ಕೈಬಿಡಬೇಡಿ."

ಅವಳ ಚಿಕ್ಕಪ್ಪನ ಕಣ್ಣಲ್ಲಿ ನೀರು ಬಂತು.

ಅವಳ ಚಿಕ್ಕಮ್ಮ ಬಂದು, ಅವಳನ್ನು ನೋಡಿ, ಕೂಗಿದಳು : "ಬಾಗಿಲು ತೋರ್ರಿಸಿ ಅವಳಿಗೆ! ಈ ಅನಿಷ್ಟ ಮುಂಡೇದಕ್ಕೆ ಬಾಗಿಲು ತೋರ್ರಿಸಿ! ಏ, ಕುಲಗೆಟ್ಟವಳೆ, ಬೇರೆ ಜಾತಿಯವರ ಜೊತೆ ಇದ್ದು ಇಲ್ಲಿಗೆ ಬರಲಿಕ್ಕೆ ನಿನಗೆ ನಾಚಿಕೆಯಾಗಲ್ವಾ?"

ಅವಳ ಚಿಕ್ಕಪ್ಪ ಹೇಳಿದ : "ನಾನೇನೂ ಮಾಡಲಾರೆ, ಮಗಳೆ. ಇದು ಹಿಂದೂಗಳ ಮನೆ. ಇಲ್ಲಿ ನಿನ್ನನ್ನು ಯಾರೂ ವಾಪಸ್ಸು ಕರಕೊಳಲ್ಲ. ನಾವು ಹಾಗೇನಾದರೂ ಮಾಡಿದರೆ, ನಾವೇ ನಮ್ಮ ಜಾತಿಯನ್ನು ಕಳಕೊಳ್ತೇವೆ."

ಕಮಲಾ ಸ್ವಲ್ಪ ಹೊತ್ತು ಅಲ್ಲಿ ತಲೆ ತಗ್ಗಿಸಿ ನಿಂತಿದ್ದಳು. ಅನಂತರ, ನಿಧಾನವಾಗಿ ಹಿಂಬಾಗಿಲಿನಿಂದ ಹೊರಹೋಗಿ ಹಬೀರನ ಜೊತೆ ಹೊರಟಳು. ಅಲ್ಲಿಗೆ ಅವಳ ಚಿಕ್ಕಪ್ಪನ ಮನೆ ಬಾಗಿಲು ಅವಳ ಪಾಲಿಗೆ ಶಾಶ್ವತವಾಗಿ ಮುಚ್ಚಿದಂತಾಯಿತು.

ಹಬೀರ್‌ಖಾನನ ಮನೆಯಲ್ಲಿ ಅವಳು ತನ್ನ ಯಾವತ್ತಿನ ಧಾರ್ಮಿಕ ಆಚರಣೆಗಳನ್ನು ಅನುಸರಸಬಹುದಾಗಿತ್ತು. ಹಬೀರ್‌ಖಾನ್ ಹೇಳಿದ : "ನನ್ನ ಮಕ್ಕಳು ಮನೆಯ ಈ ಭಾಗಕ್ಕೆ ಬರುವುದಿಲ್ಲ. ನೀನು ಈ ಬ್ರಾಹ್ಮಣ ವೃದ್ಧರ ಜೊತೆ ನಿನ್ನ ಪೂಜೆ ಪುನಸ್ಕಾರ ಇತ್ಯಾದಿ ಎಲ್ಲವನ್ನೂ ನಡೆಸಿಕೊಂಡು ಹೋಗಬಹುದು."

ಈ ಮನೆಯದೂ ಒಂದು ಇತಿಹಾಸವಿದೆ. ಅವಳಿದ್ದ ಪಾರ್ಶ್ವಕ್ಕೆ 'ರಾಜಪುತಾನಿಯ ಕೋಣೆಗಳು' ಎಂದು ಕರೆಯಲಾಗುತ್ತಿತ್ತು. ಹಿಂದೆ ಯಾವಾಗಲೋ ಒಂದು ಸಲ ಇಲ್ಲಿಯ ನವಾಬನೊಬ್ಬನು ಒಬ್ಬ ರಜಪೂತ ಹೆಂಗಸನ್ನು ಈ ಮನೆಗೆ ಕರೆದುಕೊಂಡು ಬಂದಿದ್ದನು. ಆದರೂ ಅವಳು ತನ್ನ ಜಾತಿಯನ್ನು ಉಳಿಸಿಕೊಳ್ಳಲಿಕ್ಕಾಗಿ ಎಲ್ಲ ವ್ಯವಸ್ಥೆ ಮಾಡಿದ್ದನು. ಅವಳು ಅವನನ್ನು ಆರಾಧಿಸುತ್ತಿದ್ದಳು. ಕೆಲವೊಮ್ಮೆ ಯಾತ್ರಾಸ್ಥಳಗಳಿಗೂ ಹೋಗಿಬರುತ್ತಿದ್ದಳು. ಆ ಕಾಲದ ಶ್ರೀಮಂತ ಮುಸಲ್ಮಾನರು ಧರ್ಮನಿಷ್ಠ ಹಿಂದೂಗಳನ್ನು ಗೌರವಿಸುತ್ತಿದ್ದರು. ಇಲ್ಲಿ ಆ

ರಜಪೂತ ಹೆಂಗಸು ವಾಸವಾಗಿದ್ದು, ಎಲ್ಲಾ ಹಿಂದೂ ಬೇಗಂಗಳಿಗೆ ಆಶ್ರಯ ನೀಡಿದ್ದಳು. ಇವರೆಲ್ಲರೂ ಹಿಂದಿನಂತೆ ತಮ್ಮ ತಮ್ಮ ಧರ್ಮವನ್ನನುಸರಿಸುತ್ತಿದ್ದರು. ಈ ರಜಪೂತ ಹೆಂಗಸಿನ ಮಗನೇ ಈ ಹಬೀರ್‌ಖಾನ್ ಎಂದು ಹೇಳಲಾಗುತ್ತಿತ್ತು. ಅವನು ತನ್ನ ತಾಯಿಯ ಧರ್ಮವನ್ನೇನೂ ಸ್ವೀಕರಿಸಲಿಲ್ಲ, ಆದರೂ ಅವನು ಮನಸ್ಸಿನಲ್ಲೇ ಆ ತನ್ನ ತಾಯಿಯನ್ನು ಆರಾಧಿಸುತ್ತಿದ್ದನು. ಈಗ ಅವಳು ಇಲ್ಲದಿರುವುದರಿಂದ ಅವಳ ನೆನಪಿನಾರ್ಥ ಅವನು ದಮನಕ್ಕೊಳಪಟ್ಟ ಅಥವ ಸಮಾಜದಿಂದ ಹೊರಹಾಕಲ್ಪಟ್ಟ ಹಿಂದೂ ಹೆಂಗಸರಿಗೆ ಆಶ್ರಯ ನೀಡುವಂಥ ಈ ಸೇವೆಯನ್ನು ಕೈಗೊಂಡಿದ್ದ.

ತನ್ನ ಮನೆಯಲ್ಲೇ ಯಾವತ್ತೂ ದೊರೆಯದೇ ಇದ್ದದ್ದನ್ನು ಕಮಲಾ ಇಲ್ಲಿ ಪಡೆದಿದ್ದಳು. ಅಲ್ಲಿಯಾದರೋ ಅವಳ ಚಿಕ್ಕಮ್ಮನಿಂದ ಅವಳಿಗೆ ಯಾವಾಗಲೂ ಬಯ್ಗುಳ. ತಲೆಹರಟೆ, ದರಿದ್ರ ಮುಂಡೇದು, ಶನಿ, ಹಾಗೆ ಹೀಗೆ ಅಂತ. ಈ ಹುಡುಗಿ ಸತ್ತರೆ ಮಾತ್ರ ತನ್ನ ಕುಟುಂಬಕ್ಕೆ ನೆಮ್ಮದಿ ಅಂತ ಯಾವಾಗಲೂ ವಟವಟ ಅನ್ನುವ ಹೆಂಗಸು. ಕಮಲಳ ಚಿಕ್ಕಪ್ಪ ಕೆಲವ್ರೊಮ್ಮೆ ಅವಳಿಗೆ ಬಟ್ಟೆಗಳನ್ನು ತರುತ್ತಿದ್ದ, ಆದರೆ ಅದನ್ನು ಅವನು ತನ್ನ ಹೆಂಡತಿಗೆ ಗೊತ್ತಿಲ್ಲದಂತೆ ಮಾಡಬೇಕಿತ್ತು. ಇಲ್ಲಿ ಈ ರಾಜಪುತಾನಿಯ ಕೋಣೆಗಳಲ್ಲಿ ಅವಳನ್ನು ರಾಣಿಯಂತೆ ಗೌರವ, ಆದರದಿಂದ ಕಾಣಲಾಗುತ್ತಿತ್ತು. ಅವಳಿಗೆ ಅನೇಕ ಜನ ಹಿಂದೂ ಸೇವಕಿಯರಿದ್ದರು.

ಕೊನೆಗೆ ಅವಳ ಮೈಯಲ್ಲಿ ಯೌವನದ, ಅದರ ಪುಳಕದ, ಸಂಚಾರವಾಯಿತು. ಆಗಾಗ್ಗೆ ಅವಳಿದ್ದ ಕೋಣೆಗಳತ್ತ ಆ ಮನೆಯ ಹುಡುಗನೊಬ್ಬ ಸುಳಿಯುತ್ತಿದ್ದ. ಕಮಲಾ ಅವನಲ್ಲಿ ಮೋಹಿತಳಾದಳು. ಒಂದು ದಿನ ಅವಳು ಹಬೀರ್‌ಖಾನ್‌ಗೆ ಹೇಳಿದಳು : "ಅಪ್ಪ, ನನಗೆ ಯಾವ ಧರ್ಮವೂ ಇಲ್ಲ. ನನ್ನ ಧರ್ಮವಿರುವುದು ನಾನು ಪ್ರೀತಿಸುತ್ತಿರುವ ವ್ಯಕ್ತಿಯಲ್ಲಿ. ನನಗೆ ಯಾವ ಪ್ರೀತಿಯನ್ನೂ ಕೊಡದೆ, ನನ್ನನ್ನು ಕಸದಂತೆ ಎಸೆದ ಧರ್ಮದಲ್ಲಿ ನಾನು ಯಾವ ದೇವರನ್ನೂ ಕಂಡಿಲ್ಲ. ಪ್ರತಿದಿನವೂ ಆ ಧರ್ಮದ ದೇವತೆಗಳು ನನ್ನನ್ನು ಹೀನಾಯವಾಗಿ ಕಂಡಿವೆ ಎಂಬುದನ್ನು ನಾನು ಮರೆಯಲಾರೆ. ಅಪ್ಪಾಜಿ, ನಾನು ಪ್ರೀತಿಯನ್ನು ಮೊದಲ ಬಾರಿಗೆ ಸವಿದಿರುವುದು ನಿನ್ನ ಮನೆಯಲ್ಲೇ. ನನ್ನಂತಹ ನತದೃಷ್ಟ ಹೆಣ್ಣಿಗೂ ಬದುಕೆಂದರೆ ಅಮೂಲ್ಯವೆಂದು ಈಗ ನನಗೆ ಗೊತ್ತಾಗುತ್ತಿದೆ. ಆ ಪ್ರೀತಿಯನ್ನು ಗೌರವಿಸುವುದರ ಮೂಲಕ, ನಾನು ನನಗೆ ಆಶ್ರಯ ಕೊಟ್ಟ ದೇವರನ್ನು ಪೂಜಿಸುತ್ತೇನೆ. ಆ ದೇವರೇ ನನ್ನ ದೇವರು. ಅವನು ಹಿಂದುವೂ ಅಲ್ಲ, ಮುಸಲ್ಮಾನನೂ ಅಲ್ಲ. ನಾನು ನಿನ್ನ ಎರಡನೆಯ ಕರೀಮನನ್ನು ಪ್ರೀತಿಸಿದ್ದೇನೆ. ನನ್ನ ಪ್ರಾಣ ಮತ್ತು ಧರ್ಮ ಎಂದರೆ ಅವನೇ. ನೀನು ನನ್ನನ್ನು ಮುಸಲ್ಮಾನಳನ್ನಾಗಿ ಮಾಡು, ನನ್ನ ಅಭ್ಯಂತರವಿಲ್ಲ. ಆಗ ಬಹುಶಃ ನಾನು ಎರಡೂ ಧರ್ಮಗಳನ್ನು ಪಾಲಿಸಬಹುದು."

ಹೀಗೆ ಅವರ ಜೀವನ ಮುಂದುವರೆಯಿತು. ಇನ್ನು ಕಮಲೆಯ ಸಂಬಂಧಿಗಳನ್ನೆಂದೂ ಬಹುಶಃ ಕಾಣುವ ಪ್ರಸಂಗ ಬರುವ ಸಂಭವವಿರಲಿಲ್ಲ. ಹಬೀರ್‌ಖಾನ್ ಕೂಡ ಅವಳು ಅವನ ಜಾತಿಯ ಹೆಂಗಸಲ್ಲ ಎಂಬುದನ್ನು ಮರೆಯುವಂತೆ ಮಾಡಿದ್ದನು. ಅವಳಿಗೆ ಮೆಹರ್‌ಜಾನ್ ಎಂದು ಹೆಸರಿಡಲಾಯಿತು.

ಕಮಲೆಯು ಚಿಕ್ಕಪ್ಪನ ಎರಡನೆಯ ಮಗಳು ಸರಳೆಯ ಮದುವೆ ನಿಶ್ಚಯವಾಯಿತು. ಹಿಂದಿನಂತೆಯೇ ಎಲ್ಲ ವ್ಯವಸ್ಥೆ ಮಾಡಲಾಯಿತು. ಮತ್ತು ಹಿಂದಿನಂತೆಯೇ ಅದೇ ಆಪತ್ತು ಎದುರಾಯಿತು. ದಾರಿಯಲ್ಲಿ ಅದೇ ಆ ದರೋಡೆಕೋರರು ಅವರನ್ನು ಅಡ್ಡಗಟ್ಟಿದರು. ಹಿಂದಿನ ಸಲ ಅವರಿಗೆ ಏನೂ ಸಿಕ್ಕಿರಲಿಲ್ಲ. ಈ ಸಲ ಅವರು ದೋಚಲು ನಿರ್ಧರಿಸಿದ್ದರು.

ಆದರೆ ಅವರ ಬೆನ್ನ ಹಿಂದೆ ಒಂದು ಧ್ವನಿ ಕೇಳಿಸಿತು : "ಜೋಕೆ!"

"ಅಯ್ಯೋ, ಹಬೀರ್‌ಖಾನನ ಜನ ಬಂದ್ರಲ್ಲಪ್ಪ ಎಲ್ಲ ಹಾಳು ಮಾಡಲಿಕ್ಕೆ."

ವಧುವಿನ ಕಡೆಯವರು ಅವಳನ್ನು ಪಲ್ಲಕ್ಕಿಯಲ್ಲೇ ಬಿಟ್ಟು ಓಡಿಹೋಗಲು ಪ್ರಯತ್ನಿಸಿದರು. ಅಷ್ಟರಲ್ಲಿ ಅವರ ನಡುವೆ ಒಂದು ಭಲ್ಲೆ ಕಾಣಿಸಿತು. ಅದರ ತುದಿಯಲ್ಲಿ ಹಬೀರ್‌ಖಾನನ ಇಸ್ಲಾಂ ಧರ್ಮದ ಲಾಂಛನವಿತ್ತು. ಆ ಭಲ್ಲೆಯನ್ನು ಹಿಡಿದು ನಿಂತಿದ್ದುದು ಒಬ್ಬ ನಿರ್ಭೀತ ಹೆಂಗಸು!

ಅವಳು ಸರಳಾಗೆ ಹೇಳಿದಳು : "ಹೆದರಬೇಡ ತಂಗಿ. ಯಾರು ಎಲ್ಲರ ಆಶ್ರಯದಾತನಾಗಿರುವನೋ ಅವನಿಂದ ನಿನಗೆ ಆಶ್ರಯದ ಭರವಸೆಯನ್ನು ತಂದಿದ್ದೇನೆ. ಅವನಿಗೆ ಜಾತಿ ಧರ್ಮದ ಗೊಡವೆಯಿಲ್ಲ.

"ಚಿಕ್ಕಪ್ಪ, ನಿನಗೆ ನನ್ನ ನಮಸ್ಕಾರಗಳು. ಹೆದರಬೇಡಿ, ನಾನು ನಿಮ್ಮ ಕಾಲನ್ನೇನೂ ಮುಟ್ಟುವುದಿಲ್ಲ. ಈಗ ನೀನು ಸರಳಾಳನ್ನು ಮನೆಗೆ ಕರೆದೊಯ್ಯಬಹುದು. ಅವಳು ಯಾರ ಸ್ಪರ್ಶದಿಂದಲೂ ಕಳಂಕಿತಳಾಗಿಲ್ಲ. ಚಿಕ್ಕಮ್ಮನಿಗೆ ಹೇಳಿ—ಆಕೆ ನನಗೆ ಒಲ್ಲದ ಮನಸ್ಸಿನಿಂದ ಕೊಡುತ್ತಿದ್ದ ಊಟ ಬಟ್ಟೆಗಳಿಗಾಗಿ ನಾನು ಈ ರೀತಿಯಲ್ಲಿ ಅವಳ ಋಣವನ್ನು ತೀರಿಸಬಹುದು ಎಂಬ ಕಲ್ಪನೆ ನನಗಿರಲಿಲ್ಲ; ದಯವಿಟ್ಟು ಈ ಕೆಂಪು ರೇಷ್ಮೆಯನ್ನು ತಗೊಳ್ಳಿ. ನಾನು ಇದನ್ನು ಮತ್ತು ಜರತಾರಿ ಬಟ್ಟೆಯ ಮೆತ್ತೆಯನ್ನು ಸರಳೆಗಾಗಿ ತಂದಿದ್ದೇನೆ. ಆಮೇಲೆ, ಅವಳು ಅಕಸ್ಮಾತ್ತಾಗಿ ಯಾವತ್ತಾದರೂ ಕಷ್ಟದಲ್ಲಿದ್ದರೆ, ಅವಳನ್ನು ರಕ್ಷಿಸಲು ಅವಳಿಗೊಬ್ಬ ಮುಸಲ್ಮಾನ ಅಕ್ಕ ಇದ್ದಾಳೆ ಎಂಬುದು ನಿಮಗೆ ನೆನಪಿರಲಿ.

□

ಟಿಪ್ಪಣಿ : "ಮುಸಲ್ಮಾನ ಹೆಂಗಸೊಬ್ಬಳ ಕಥೆ"ಯು ರವೀಂದ್ರನಾಥ ಠಾಕೂರರು ಬದುಕಿದ್ದಾಗ ಪ್ರಕಟವಾಗಿರಲಿಲ್ಲ. ಇದರ ಹಸ್ತಪ್ರತಿ ಅವರ ಕೈಬರಹದಲ್ಲೂ ಇಲ್ಲ. ಅವರು ನಿಧನ ಹೊಂದುವ ಸುಮಾರು ಒಂದೂವರೆ ತಿಂಗಳ ಹಿಂದೆ, ಅಂದರೆ ೨೪–೨೫ ಜೂನ್ ೧೯೪೧ರಲ್ಲಿ, ಅವರು ಈ ಕಥೆಯನ್ನು ಹೇಳಿ ಬರೆಸಿದ್ದು. ಅವರು ಇದನ್ನು ತಮ್ಮ ಕೈಯಿಂದ ತಿದ್ದಿಯೂ ಇಲ್ಲ. ಇದೊಂದು ಕರಡು ಪ್ರತಿಯೆಂಬುದು ಸ್ಪಷ್ಟವಿದೆ. ಆದರೂ ಕೂಡ, ಇದು ರವೀಂದ್ರರ ಕಥಾರಚನೆಯ ಕೊನೆಯ ಕೃತಿ ಎನ್ನುವ ಕಾರಣಕ್ಕಾಗಿ ಇದಕ್ಕೆ ಮಹತ್ವವಿದೆ.

ಶ್ರೀನಿವಾಸ್ ವಿ. ಸುತ್ರಾವೆ
೧೬೪೬/೧೮, ಮಹತಿ, ವಿದ್ಯಾನಗರ, ದಾವಣಗೆರೆ – ೫೭೭೦೦೫

# ಕಪ್ಪು ಲೇಖಕರು ಮತ್ತು ದಕ್ಷಿಣ ಭಾಗದ ಅನುಭವ

ಇಂಗ್ಲಿಷ್ ಮೂಲ : **ಆ್ಯಲಿಸ್ ವಾಕರ್**

ಅನುವಾದ : **ನಿಶಾಂತ್ ನಾಗವಾರ್**

ನನ್ನ ತಾಯಿ ಕಳೆದ ಮೂವತ್ತರ ದಶಕದ ಆರ್ಥಿಕ ಮುಗ್ಗಟ್ಟಿನ ಸಮಯದಲ್ಲಿ ತನಗಾದ ಘಟನೆಯೊಂದನ್ನು ಆಗಾಗ ಕುರಿತು ಹೇಳುತ್ತಿರುತ್ತಾಳೆ. ಆಕೆ ಮತ್ತು ನನ್ನ ತಂದೆ ಅರ್ಧ ಡಜನ್ ಮಕ್ಕಳೊಂದಿಗೆ ಜಾರ್ಜಿಯಾದ ಸಣ್ಣ ಪಟ್ಟಣವೊಂದರಲ್ಲಿ ವಾಸಿಸುತ್ತಿದ್ದರು. ಹೊಲದಲ್ಲಿ ಜೀತಕ್ಕಿದ್ದ ಅವರಿಗೆ ದವಸ ಧಾನ್ಯ, ಅದರಲ್ಲೂ ಅಡುಗೆಗೆ ಬೇಕಾದ ಹಿಟ್ಟು ಸಿಗುವುದಂತೂ ಸಾಧ್ಯವಿರಲಿಲ್ಲ. ರೆಡ್‌ಕ್ರಾಸ್ ಸಂಸ್ಥೆಯವರು ವಿತರಿಸುತ್ತಿದ್ದ ಹಿಟ್ಟನ್ನು ಪಡೆಯಲು ಸ್ಥಳೀಯ ಅಧಿಕಾರಿಯು ಸಹಿ ಮಾಡಿದ ಪರವಾನಗಿ ಚೀಟಿಗಳನ್ನು ಕೊಡಬೇಕಿತ್ತು. ಪೇಟೆಗೆ ಹಿಟ್ಟು ತರಲು ನನ್ನ ತಾಯಿ

---

**ಆ್ಯಲಿಸ್ ವಾಕರ್ (೧೯೪೪–)** ಅಮೇರಿಕಾದ ಪ್ರಮುಖ ಲೇಖಕರಲ್ಲಿ ಒಬ್ಬರು. ದಕ್ಷಿಣ ಯು.ಎಸ್.ಎ.ಯ ಜಾರ್ಜಿಯಾ ಪ್ರಾಂತದ ಸಣ್ಣ ಹಳ್ಳಿಯೊಂದರಲ್ಲಿ ಬಡ ಕೃಷಿಕನ ಮಗಳಾಗಿ ಹುಟ್ಟಿದ ವಾಕರ್ ಚಿಕ್ಕ ವಯಸ್ಸಿನಿಂದಲೇ ಬಿಳಿಯರ ದಬ್ಬಾಳಿಕೆಯನ್ನು ಎದುರಿಸುತ್ತಾ ಬಂದರು. ಮುಂದೆ ಕವಿತೆ, ಕಾದಂಬರಿ, ಪ್ರಬಂಧ ಮತ್ತು ವಿಮರ್ಶಾ ಲೇಖನಗಳನ್ನು ಬರೆಯುತ್ತಲೇ ಪತ್ರಿಕೆಗಳಲ್ಲಿ ತಮ್ಮ ಹೋರಾಟದ ಮನೋಭಾವವನ್ನು ಸತತವಾಗಿ ಅಭಿವ್ಯಕ್ತಿಗೊಳಿಸಿದರು. ಇದರಿಂದಾಗಿ ಬಿಳಿಯರು ಮತ್ತು ಸಂಪ್ರದಾಯಸ್ಥ ಕರಿಯ ಪುರುಷರಿಂದ ಉದ್ದಕ್ಕೂ ಪ್ರತಿರೋಧವನ್ನು ಎದುರಿಸಬೇಕಾಯಿತು. ಸ್ತ್ರೀವಾದಕ್ಕೆ ಪರ್ಯಾಯವಾಗಿ ಒಟ್ಟು ಸಮಾಜದ ಎಲ್ಲರನ್ನೂ ತನ್ನ ತೆಕ್ಕೆಯಲ್ಲಿ ಕೊಂಡೊಯ್ಯುವ ಮಹಿಳಾವಾದವನ್ನು (Womanism) ಹುಟ್ಟುಹಾಕಿದ ಆ್ಯಲಿಸ್ ವಾಕರ್ ಅಹಿಂಸಾತ್ಮಕ ಹೋರಾಟಗಳಲ್ಲಿ ಪ್ರಮುಖರಾಗಿದ್ದಾರೆ. ಆಕೆಯ ಕಾದಂಬರಿ 'ದ ಕಲರ್ ಪರ್ಪಲ್' (೧೯೮೨) ಪ್ರತಿಷ್ಠಿತ ಪುಲಿಟ್ಜರ್ ಪ್ರಶಸ್ತಿಯನ್ನು ಪಡೆದಿದೆ. ಪ್ರಸ್ತುತ ಲೇಖನದಲ್ಲಿ ವಾಕರ್ ವರ್ಣಭೇದನೀತಿಯ ತವರು ಮತ್ತು ಬಡ ಕರಿಯರ ನಾಡಾದ ದಕ್ಷಿಣ ಯು.ಎಸ್.ಎಯಿಂದ ಬಂದ ಲೇಖಕರ ಅನುಭವಗಳನ್ನು ದಾಖಲಿಸಿದ್ದಾಳೆ.

ಹೋಗಬೇಕಾದ ದಿನದಂದು ಉತ್ತರ ಭಾಗದಲ್ಲಿ ನೆಲೆಸಿದ್ದ ಆಂಟಿಯೊಬ್ಬರು ಕಳಿಸಿದ್ದ ಬಟ್ಟೆಯ ದೊಡ್ಡ ಪೆಟ್ಟಿಗೆಯೊಂದು ಬಂದಿತ್ತು; ಚೆನ್ನಾಗಿ ಉಪಯೋಗಿಸಿದ್ದರೂ ಅದರಲ್ಲಿದ್ದ ಬಟ್ಟೆಗಳು ಸುಸ್ಥಿತಿಯಲ್ಲಿದ್ದವು. ನನ್ನ ತಾಯಿಗೆ ತೊಟ್ಟುಕೊಳ್ಳಲು ಬಟ್ಟೆ ಬೇಕಾಗಿದ್ದರಿಂದ ತಕ್ಷಣ ಅವುಗಳಲ್ಲಿ ಒಂದನ್ನು ಧರಿಸಿ ಪೇಟೆಗೆ ಹೊರಟಳು. ವಿತರಣಾ ಕೇಂದ್ರ ತಲುಪಿದ ತಾಯಿ ತನ್ನ ಪಡಿತರ ಚೀಟಿಯನ್ನು ನೀಡುತ್ತಿದ್ದಾಗ ಸಿಟ್ಟು ಮತ್ತು ದ್ವೇಷವನ್ನು ತುಂಬಿಕೊಂಡಿದ್ದ ಬಿಳಿಯ ಹೆಂಗಸೊಬ್ಬಳು ಅಡಿಯಿಂದ ಮುಡಿಯವರೆಗೆ ದಿಟ್ಟಿಸಿ ನೋಡತೊಡಗಿದಳು.

"ಇಲ್ಲಿಗೆ ಯಾಕೆ ಬಂದೆ ?" ಎಂದು ಆಕೆ ಕೇಳಿದಳು.

"ಸ್ವಲ್ಪ ಹಿಟ್ಟಿಗಾಗಿ," ಚೀಟಿಯನ್ನು ಮುಂದಿಡುತ್ತಾ ನನ್ನ ತಾಯಿ ಹೇಳಿದಳು.

ತನ್ನ ಸಿಟ್ಟನ್ನು ಬಚ್ಚಿಟ್ಟುಕೊಳ್ಳಲಾಗದ ಆ ಹೆಂಗಸು ಇನ್ನೂ ಕ್ರೂರವಾಗಿ ದಿಟ್ಟಿಸುತ್ತಾ "ಹ್ಞೂಂ, ಇಷ್ಟು ಒಳ್ಳೆಯ ಬಟ್ಟೆ ತೊಟ್ಟ ಯಾರೇ ಆದರೂ ಇಲ್ಲಿ ಬಂದು ತುತ್ತು ಕೂಳಿಗಾಗಿ ಭಿಕ್ಷೆ ಬೇಡುವ ಅಗತ್ಯವಿಲ್ಲ" ಎಂದಳು.

"ನಾನು ಭಿಕ್ಷೆ ಬೇಡುತ್ತಿಲ್ಲ" ಎಂದ ನನ್ನ ತಾಯಿ "ಯಾರಿಗೆ ಅಗತ್ಯವಿದೆಯೋ ಅವರಿಗೆ ಸರ್ಕಾರವು ಹಿಟ್ಟನ್ನು ವಿತರಿಸುತ್ತಿದೆ ಮತ್ತು ನನಗೆ ಅದರ ಅಗತ್ಯವಿದೆ. ಒಂದು ವೇಳೆ ನನಗೆ ಇದರ ಅಗತ್ಯ ಇಲ್ಲದಿದ್ದಲ್ಲಿ ಇಲ್ಲಿಗೆ ಬರುತ್ತಿರಲಿಲ್ಲ. ಇಷ್ಟಕ್ಕೂ ನಾನು ತೊಟ್ಟಿರುವ ಈ ಬಟ್ಟೆಯನ್ನು ನನಗೆ ಯಾರೋ ಕೊಟ್ಟಿದ್ದಾರೆ" ಎಂದಳು.

ಆ ಹೆಂಗಸು ಆಗಲೇ ಸರದಿಯಲ್ಲಿ ನಿಂತಿದ್ದ ಮುಂದಿನ ವ್ಯಕ್ತಿಯ ಕಡೆಗೆ ತಿರುಗಿ ಅದೇ ಕೌಂಟರ್‌ನಲ್ಲಿ ತನ್ನೊಂದಿಗಿದ್ದ ಬಿಳಿಯನ ಜೊತೆಗೆ ಗೊಣಗುಟ್ಟುತ್ತಾ "ಇಲ್ಲಿಗೆ ಬಂದಿರುವ ಈ ನೀಗ್ರೋ ಹುಡ್ಗಿ ನನಗಿಂತ ಒಳ್ಳೇ ಬಟ್ಟೆ ಧರಿಸಿದ್ದಾಳೆ !" ಎಂದಳು. ಈ ವಿಚಾರ ಅವಳನ್ನು ಇನ್ನೂ ಸಿಟ್ಟುಗೊಳಿಸಿರುವಂತೆ ಕಂಡಿತು. ಅಪಮಾನದ ಈ ದುಃಖವನ್ನು ತಾಳಲಾರದೆ ಅಳುತ್ತಾ, ತನ್ನ ಮೂರು ಚಿಕ್ಕ ಮಕ್ಕಳನ್ನು ಎಳೆದುಕೊಂಡು ನನ್ನ ತಾಯಿ ಮತ್ತೆ ರಸ್ತೆಗೆ ಇಳಿದಳು.

"ನೀನೂ ಅಪ್ಪನೂ ಆ ಚಳಿಗಾಲದಲ್ಲಿ ಹಿಟ್ಟಿಗಾಗಿ ಕೊನೆಗೆ ಏನು ಮಾಡಿದಿರಿ?" ಎಂದು ಅಮ್ಮನನ್ನು ನಾನು ಕೇಳಿದೆ.

"ನಮ್ಮ ರಸ್ತೆಯ ಕೊನೆಯಲ್ಲಿದ್ದ ಆಂಟ್ ಮ್ಯಾಂಡಿ ಆಯ್‌ಕೆನ್ಸ್ ಹತ್ತಿರ ಸಾಕಷ್ಟು ಹಿಟ್ಟಿತ್ತು. ನಮ್ಮಲ್ಲಿ ಅಳಿದುಳಿದ ಧಾನ್ಯ ಸಾಕಷ್ಟಿತ್ತು. ಆಂಟ್ ಮ್ಯಾಡಿ, ನಮ್ಮ ಬಕೆಟ್ ಧಾನ್ಯಕ್ಕೆ ಬದಲಾಗಿ ನಮಗೆ ಊಟಕ್ಕೆ ಹಿಟ್ಟು ನೀಡಿದಳು. ಹೇಗೋ ಕಾಲ ಕಳೆದವು" ಎಂದಳು.

ನಿಧಾನಕ್ಕೆ ಆಲೋಚಿಸುತ್ತಾ ಅಮ್ಮ ಹೇಳಿದಳು : "ನಮ್ಮನ್ನು ಆದಿನ ಹಿಂದಕ್ಕೆ ಕಳುಹಿಸಿದ ಆ ಮುದುಕಿ ತನ್ನ ಕೊನೆಗಾಲದಲ್ಲಿ ಎಷ್ಟು ಕಷ್ಟಪಟ್ಟವಳೆಂದರೆ, ಎರಡು ಊರುಗೋಲಿನ ಆಸರೆಯಿಂದ ನಡೆಯುತ್ತಿದ್ದಳು." ಅಮ್ಮ ಹೇಳದಿದ್ದರೂ, ಏನು ಯೋಚಿಸುತ್ತಿದ್ದಳೆಂದು ನನಗೆ

ಗೊತ್ತಿತ್ತು : ಇವತ್ತು ನಾನಿಲ್ಲಿ ಗಟ್ಟಿಯಾಗಿದ್ದೇನೆ. ನನ್ನ ಎಂಟು ಆರೋಗ್ಯವಂತ ಮಕ್ಕಳು ಬೆಳೆದು ದೊಡ್ಡವರಾಗಿದ್ದಾರೆ; ಅವರಲ್ಲಿ ಮೂವರು ಕಾಲೇಜ್ ಸೇರಿದ್ದಾರೆ. ನನಗೋ ವರ್ಷಾನುಗಟ್ಟಲೆ ಒಂದು ದಿನವೂ ಆರೋಗ್ಯ ಕೆಟ್ಟಿರುವ ನೆನಪಿಲ್ಲ. ದೇವರು ನಿಜಕ್ಕೂ ದೊಡ್ಡವನಲ್ಲವೇ?

ಮೇಲಿನ ಈ ಸಣ್ಣಕತೆಯು ಒಂದು ಜನಸಮುದಾಯದ ಸ್ಥಿತಿ ಮತ್ತು ಶಕ್ತಿಯನ್ನು ಒಟ್ಟಿಗೆ ವಿವರಿಸುತ್ತದೆ. ಬಹುಸಂಖ್ಯಾತರ ಸೇವೆ ಮಾಡುತ್ತಲೇ ಅವರಿಂದ ವಿಪರೀತ ಅಪಮಾನಕ್ಕೆ ಒಳಗಾಗಿದ್ದ ದಕ್ಷಿಣ ಭಾಗದ ಈ ಕೃಷಿ ಕಾರ್ಮಿಕ ಮತ್ತು ಬಡ ರೈತ ಕುಟುಂಬವು ಧರ್ಮಕ್ಕೆ ಜೋತುಬಿದ್ದಿತ್ತು. ಸಮಾಧಾನಿಸಿ ಗುಲಾಮರನ್ನಾಗಿ ಮಾಡಲು ಕೊಡಲಾಗಿದ್ದ ಈ ಧರ್ಮವನ್ನು ಅವರು ತಮ್ಮಲ್ಲಿನ ವ್ಯಥೆಗೆ ಮದ್ದಾಗಿ ಬಹುಬೇಗ ಪರಿವರ್ತಿಸಿಕೊಂಡಿದ್ದರು. ಬೇರೇನೂ ಮತ್ತು ಯಾರೂ ನೆರವಿಗೆ ಇಲ್ಲದ್ದರಿಂದ, ಒಬ್ಬರಿಗೊಬ್ಬರು ತಾವೇ ಆಸರೆಯಾಗಿ, ಬಹುಪಾಲು ಸಮಯವನ್ನು "ಚೆನ್ನಾಗಿ" ಕಳೆದು, ಅಂತಹ ಪರಿಸ್ಥಿತಿಯಿಂದ ಈ ಜನ ಹೊರಗೆ ಬಂದರು. ನಮ್ಮ ತಾಯಿ ಈ ಕತೆಯನ್ನು ಮತ್ತೆ ಮತ್ತೆ ಹೇಳುವಾಗ, ಆಂಟ್ ಮ್ಯಾಂಡಿಯ ಔದಾರ್ಯ ಮತ್ತು ನನ್ನ ತಾಯಿಯು ಬೆಳೆದ ದವಸಧಾನ್ಯದ ಎದುರು ಆ ಬಿಳಿಯ ಹೆಂಗಸಿನ ಪ್ರತೀಕಾರ ಕ್ಷುಲ್ಲಕವಾಗಿ ಕಾಣುತ್ತದೆ. ಏಕೆಂದರೆ, ಅವರ ಜೀವನವು ದಕ್ಷಿಣ ಭಾಗದ ಮಹಿಳೆಯರ ಸ್ತ್ರೀತ್ವದ ಕರುಣಾಜನಕ ಉದಾಹರಣೆ ಮಾತ್ರವಾಗಿರಲಿಲ್ಲ, ಅದು ಅವರ ಬಗ್ಗೆಯೇ ಆಗಿತ್ತು.

ದಕ್ಷಿಣ ಭಾಗದ ಕಪ್ಪು ಲೇಖಕನು ತನ್ನ ಸ್ವಾಭಾವಿಕ ಹಕ್ಕೆಂದು ಒಂದು ಸಮುದಾಯದ ಭಾವನೆಯನ್ನು ಪೂರ್ವಜರಿಂದ ಪಡೆಯುತ್ತಾನೆ. ಇತ್ತೀಚಿನ ದಿನಗಳಲ್ಲಿ ವಿರಳವಾಗಿರುವ ಒಂದು ಸರಳ ಹಾಗೂ ಅಷ್ಟೇ ಕಷ್ಟಕರವಾದ ವಿಚಾರ ಇದಾಗಿದೆ. ನಮ್ಮ ಸಮುದಾಯದ ನಡೆದಾಡುವ ಇತಿಹಾಸವೇ ಆಗಿರುವ ನನ್ನ ತಾಯಿಯು ನನಗೆ ಹೇಳುತ್ತಾಳೆ : ತನಗೆ ಪ್ರತಿಸಲ ಹೆರಿಗೆಯಾದಾಗಲೂ ಸೂಲಗಿತ್ತಿಗೆ ಕೊಡುತ್ತಿದ್ದುದು ಮನೆಯಲ್ಲಿ ಬೆಳೆದ, ಸಿದ್ಧಪಡಿಸಿದ ಇಲ್ಲವೇ ಸಾಕಿದ ಹಂದಿ, ಹೊದಿಕೆ ಮತ್ತು ಹಣ್ಣು-ತರಕಾರಿಗಳನ್ನೇ. ತನ್ನ ಸೇವೆಗಾಗಿ ಏನೇ ಕೊಟ್ಟರೂ ಕೂಡ ಸೂಲಗಿತ್ತಿ ಬರುತ್ತಿದ್ದರಲ್ಲಿ ಏನೂ ಸಂದೇಹವಿರಲಿಲ್ಲ. ಪ್ರತೀ ಬಾರಿಯೂ ಹೆರಿಗೆಯ ನೋವಿನಿಂದ ನರಳುತ್ತಿರುವ ಹಣವಿಲ್ಲದ ಮಹಿಳೆಯರನ್ನು ಸೇರಿಸಿಕೊಳ್ಳಲು ಆಸ್ಪತ್ರೆಗಳು ಒಪ್ಪದಿದ್ದಾಗ ನಾನು ಇದನ್ನೇ ಯೋಚಿಸುತ್ತೇನೆ.

ಫ್ರೆಂಚ್ ತತ್ವಜ್ಞಾನಿಯೊಬ್ಬ ಒಮ್ಮೆ ಬರೆದಂತೆ ನಾನೇನು ಬಡತನದ ಬದುಕಿನ ಕಳೆದ ದಿನಗಳ ಬಗ್ಗೆ ವ್ಯಾಮೋಹಿತಳಾಗಿಲ್ಲ. ಸರಳಜೀವನವೊಂದು ತರಬಹುದಾದ ಒಗ್ಗಟ್ಟು ಮತ್ತು ಹಂಚುಣ್ಣುವ ಮನೋಭಾವದ ಬಗ್ಗೆಯಷ್ಟೇ ನನಗೆ ಅಕ್ಕರೆ ಇದೆ. ನಾವು ಕಡುಬಡವರೆಂದು ಬಹುಶಃ ನಮಗೆ ಗೊತ್ತಿತ್ತು; ಇತರರಿಗೂ ಸಹ ತಿಳಿದಿತ್ತು. ಹನ್ನೆರಡು ತಿಂಗಳುಗಳ ಕಾಲ ಸತತವಾಗಿ ಬೆವರು ಹರಿಸಿ ದುಡಿದ ದುಡಿಮೆಗೆ ಬದಲಾಗಿ ನನ್ನ ಅಪ್ಪನಿಗೆ ಹೊಟ್ಟೆಕಿಚ್ಚಿನಿಂದಲೇ ಮುನ್ನೂರು ಡಾಲರ್‌ಗಳನ್ನು ನೀಡುತ್ತಿದ್ದ ಜಮೀನ್ದಾರನಿಗೆ ಚೆನ್ನಾಗಿಯೇ ತಿಳಿದಿತ್ತು ! ಆದರೆ ನಾವು ನಮ್ಮನ್ನೇ ಬಡವರೆಂದು ಎಂದೂ ಪರಿಗಣಿಸಿರಲಿಲ್ಲ. ಬೇಕೆಂತಲೇ ಯಾರಾದರೂ ನಮ್ಮನ್ನು

ಅವಮಾನಿಸದ ಹೊರತು, ನಾವು ಬಡವರೆಂದು, ಹಾಗೆಯೇ ಆ ಕಾರಣಕ್ಕಾಗಿ ಅನುಪಯುಕ್ತರೆಂದು ಎಂದೂ ಭಾವಿಸದಿದ್ದುದರಿಂದ ನಾವು ಒಬ್ಬರನ್ನೊಬ್ಬರು ಯಾವುದೇ ಸಂಕೋಚ-ನಾಚಿಕೆಗಳಿಲ್ಲದೆ ಅವಲಂಬಿಸುತ್ತಿದ್ದೆವು. ಅಷ್ಟಲ್ಲದೆ ಸತ್ತವರನ್ನು ಮಣ್ಣು ಮಾಡಲು ಮತ್ತು ಕೈಲಾಗದ ರೋಗಿಗಳ ಉಪಚಾರಕ್ಕಾಗಿ ಸಂಘ ಸಂಸ್ಥೆಗಳು ತತ್‌ಕ್ಷಣದಲ್ಲೇ ಅಲ್ಲಲ್ಲಿ ಹುಟ್ಟಿಕೊಳ್ಳುತ್ತಿದ್ದವು. ಈ ದಯಾಹೀನ ಜನಗಳಾದ ಬಿಳಿಯರ ವಿಮಾ ಕಂಪನಿಗಳು ನಮ್ಮನ್ನು ದಿವ್ಯನಿರ್ಲಕ್ಷ್ಯದಿಂದ ಕಾಣುತ್ತಿದ್ದುದರ ಬಗ್ಗೆ ನಾವ್ಯಾರೂ ಹೆಚ್ಚಾಗಿ ಕ್ಷೋಭೆಗೆ ಒಳಗಾಗುತ್ತಿರಲಿಲ್ಲ. ಹೆತ್ತ ತಾಯಿಯ ಆ ದಿನಗಳ ಬಗ್ಗೆ ನಮ್ಮೆಲ್ಲರಿಗೂ ಚೆನ್ನಾಗಿ ಗೊತ್ತಿದ್ದ ಪ್ರಮುಖವಾದ ವಿಷಯವೆಂದರೆ ಹುಟ್ಟು ಮತ್ತು ಸಾವಿನ ಗಳಿಗೆಗಳಲ್ಲಿ ಸಮುದಾಯದ ನೆರವು ಬೇಕೇ ಬೇಕು. ಈ ಬಗೆಯ ಘಟನೆಗಳ ಅತ್ಯಾಕರ್ಷಕ ಗುಣಗಳ ಮಹತ್ವ ಬಹುಶಃ ಹೊರಗಿನವರಿಗೆ ಅಷ್ಟಾಗಿ ತಿಳಿದಿರಲಾರದು.

ನಾನು ಕಾಲೇಜು ವಿದ್ಯಾರ್ಥಿನಿಯಾಗಿದ್ದಾಗ ಹೆತ್ತವರ ನಂಬಿಕೆಯ ಕ್ರಿಶ್ಚಿಯಾನಿಟಿಯನ್ನು ಧಾರಾಳವಾಗಿ ನಿರಾಕರಿಸಿದ್ದೆ. ಬಿಳಿಯರು ಬಲವಂತವಾಗಿ ಈ ಧರ್ಮವನ್ನು ಇವರಿಗೆ ರೋಗನಿವಾರಕವೆನ್ನುವ ಭ್ರಮೆ ಹುಟ್ಟಿಸಿ ದಯಪಾಲಿಸಿದ್ದರೂ ಸಹ ಈ ಮುಗ್ಧರು ಅದನ್ನು ಒಂದು ಬಗೆಯ ಅತ್ಯಂತ ಸರಳ ಹಾಗು ಉದಾತ್ತ ಧ್ಯೇಯವನ್ನಾಗಿ ಸ್ವೀಕರಿಸಿದ್ದರು. ಹೌದು. ಇವತ್ತಿಗೂ ಕೂಡ ಇವರು ಗಟ್ಟಿಯಾಗಿ ಬಿಳಿಯನಲ್ಲದ ಒಬ್ಬ ದೇವರ ಚಿತ್ರವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂಬುದನ್ನು ನಾನು ಮನದಟ್ಟು ಮಾಡಿಕೊಳ್ಳಲು ಹಲವಾರು ವರ್ಷಗಳು ಬೇಕಾಯಿತು. ಈ ಪ್ರಮುಖ ಪರಪೀಡಕ ಗುಣದ ದುರಂತದ ನಡುವೆಯೂ ನಮ್ಮ ಜನರು ಈ ದೇವರಿಗೆ ನಿರ್ದಿಷ್ಟ ಬಣ್ಣವೊಂದಿದೆ ಹಾಗು "ಬಿಳಿಯರ" ಚರ್ಚ್ ಕೂಡ ಇರಬೇಕು ಎನ್ನುವ ಜನರ ಬರಡು ಸಿದ್ಧಾಂತಗಳಿಗಿಂತ ಮಿಗಿಲಾಗಿ - ಯೇಸುಕ್ರಿಸ್ತನ ಉಪದೇಶಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವಲ್ಲಿ ತಲ್ಲೀನರಾಗಿದ್ದಾರೆ.

ಕೆಲವರು ಒಪ್ಪದಿದ್ದರೂ ಸಹ, ದಕ್ಷಿಣ ಭಾಗದ ನಮ್ಮ ಕಪ್ಪು ಲೇಖಕರ ಅನುಭವದ ಸಂಪತ್ತು ನಿಜಕ್ಕೂ ಅಸಾಧಾರಣವಾದುದು. ಒಮ್ಮೆ ಕಾಲೇಜಿನಲ್ಲಿದ್ದಾಗ, ಉತ್ತರ ಭಾಗದ ಮಧ್ಯ ವಯಸ್ಕ ಬಿಳಿಯನೊಬ್ಬನಿಗೆ ನಾನು ಕವಿಯಾಗಬೇಕೆಂಬ ಹಂಬಲವನ್ನು ಹೊಂದಿದ್ದೇನೆಂದು ಸಹಜವಾಗಿ ತಿಳಿಸಿದೆ. ಆತ 'ರೈತನ ಮಗಳು' ಕವಿಯಾಗಲು ಸೂಕ್ತ ವ್ಯಕ್ತಿಯಾಗದೇ ಇರಬಹುದು ಎಂದು ಬಹಳ ನಾಜೂಕಾದ ಭಾಷೆಯಲ್ಲಿ ಹೇಳಿದ್ದನ್ನು ನೆನೆಸಿಕೊಂಡಲ್ಲಿ ಇನ್ನೂ ನನ್ನ ಮೈ ಬಗ್ಗನೆ ಉರಿಯುತ್ತದೆ. ಒಂದು ರೀತಿಯಲ್ಲಿ ಆತ ಹೇಳಿದ್ದರಲ್ಲೂ ಕೊಂಚ ಸತ್ಯಾಂಶ ಇರಬಹುದು: ಕೇವಲ ಹತ್ತು ಹನ್ನೆರಡು ಪುಸ್ತಕಗಳನ್ನು ಮಾತ್ರ ಕಂಡಿರುವ ಬಡಗುಡಿಸಲೊಂದು ತರುಣಕವಿ ಕೀಟ್ಸ್‌ನನ್ನು ಕಾಣುವ ಉತ್ತಮ ತಾಣವಾಗದಿರಬಹುದು. ಆದರೆ, ಎಲ್ಲರೂ ಕೀಟ್ಸ್‌ನಂತಹ ಕವಿಯೇ ಆಗಿ ಬೆಳೆಯಬೇಕೆಂದು ಬಯಸುವುದು ತೀರಾ ಮೂಗಿನ ನೇರದ ಆಲೋಚನೆ ಆಗಿಬಿಡಬಹುದು. ನಿಜವಾದ ಕವಿಯೊಬ್ಬ ತನ್ನ ಜನರ ಸಂತೋಷಕ್ಕಾಗಿ ಕಾವ್ಯ ಬರೆಯುತ್ತಾನೆಯೇ ಹೊರತು ಇಂಗ್ಲೆಂಡಿನ ರಾಣಿಗಲ್ಲ. ಒಂದು ವೇಳೆ ಆಕೆಗೆ ಅದರಿಂದ ಲಾಭವಾಗುವುದಾದರೆ

ಬೆಳೆಯದು. ಆದರೆ, ಹಾಗಾಗುವ ಸಂಭವ ತುಂಬಾ ಕಡಿಮೆ ಇರುವುದರಿಂದ ಆಕೆಯ ಅಭಿರುಚಿಗೆ ಅನುಗುಣವಾಗಿ ಬರೆಯುವುದರಲ್ಲಿ ಯಾವ ಅರ್ಥವೂ ಇಲ್ಲ; ಸಮಯ ಮಾತ್ರ ಹಾಳು, ಅಷ್ಟೇ.

ಹಳ್ಳಿಯಿಂದ ನೇರವಾಗಿ ಬರುವ ದಕ್ಷಿಣದ ಕಪ್ಪು ಲೇಖಕರಿಗೆ ಹಳ್ಳಿ ಮತ್ತು ಪಟ್ಟಣದ ನಡುವೆ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ; ನಗರಗಳ ಕೊಳಕು ಜನರ ಸಂತೆ ಮತ್ತು ಕ್ರೌರ್ಯ ಒಂದೆಡೆಯಾದರೆ—ಹಳ್ಳಿಗಳು ವಿಶಾಲವಾಗಿ, ಗಲೀಜು ಮಾಡಲು ಸಾಧ್ಯವಿಲ್ಲದಷ್ಟು ಸ್ವಚ್ಛವಾಗಿ ಇವೆ. ಹಳ್ಳಿಯವನಿಗೆ ನಗರಜೀವನವು ತುಂಬಾ ಬಿಗಿಯುವ ಉಡುಪು ಧರಿಸಿದಂತೆ ಬಂಧನಕಾರಿಯಾಗಿ ಕಾಣುತ್ತದೆ. ಮನಸ್ಸಲ್ಲೂ ಕೂಡ ತಾನು ಚಿಕ್ಕಂದಿನಲ್ಲಿ ಬೆಳೆಯುವಾಗ ಕಂಡುಂಡ ಆಚರಣೆಗಳು ಕಣ್ಣಿಗೆ ಕಟ್ಟುತ್ತವೆ. ರಸ್ತೆಯಿಂದ ಕೊಂಚ ಒಳಕ್ಕೆ ಮರೆಯಾಗಿರುವ ಪುಟ್ಟ ಚರ್ಚ್‌ನ ಭಾನುವಾರದ ಪೂಜೆಯ ವೈವಿಧ್ಯತೆ ಮತ್ತು ಬೆಚ್ಚಗಿನ ಅನುಭವ (ನಿಮಗದರಲ್ಲಿ ನಂಬಿಕೆ ಇಲ್ಲದಿದ್ದರು ಸರಿಯೇ) ಅಲ್ಲದೆ ಕಾಡಿನ ಒಳಗೆ ಆಗಂತುಕರಿಗೆ ಥಟ್ಟನೆ ಕಾಣದಂತಿರುವ ಮನೆಗಳಿವೆ. ಇಂತಹ ತೀರಾ ವೈಯಕ್ತಿಕ ಪ್ರಪಂಚದಲ್ಲಿ ಘಟಿಸುವ ನಾಟಕೀಯ ಸಂಗತಿಗಳು ಅಪ್ಪಟ ಚಿನ್ನದಂತೆ ಕಂಗೊಳಿಸುತ್ತವೆ. ಆದರೆ ಹಲಬಗೆಯ ಸೋಲು-ಗೆಲುವು ಮತ್ತು ವಿಲಕ್ಷಣ ಗುಣಗಳಿಂದ ಕೂಡಿರುವ ಈ ವೈಯಕ್ತಿಕ ಮತ್ತು ಗುಪ್ತ ಅಸ್ತಿತ್ವವು ಸಾಮಾಜಿಕ ಪ್ರಜ್ಞೆಯನ್ನುಳ್ಳ ದಕ್ಷಿಣ ಭಾಗದ ನಮ್ಮ ಕಪ್ಪು ಲೇಖಕರ ದ್ವಿದರ್ಶನದಷ್ಟು (ಇಮ್ಮಡಿಯಾದ ಕಾಣ್ಕೆಯಷ್ಟು) ಅಮೂಲ್ಯವಾದುದ್ದಲ್ಲ. ಏಕೆಂದರೆ ಆತ ಕೇವಲ ತನ್ನ ಸುತ್ತಲಿನ ಜಗತ್ತು ಮತ್ತು ಸಮುದಾಯವನ್ನು (ಮೊದಲ ಭಾನುವಾರದ "ಪುನರ್ಮಿಲನಗಳು", ಸಂಕಷ್ಟಗಳ ನಡುವೆ ನಲುಗಿರುವ ಆಫ್ರಿಕನ್ನರ ಧನಸಹಾಯದ ಸಲುವಾಗಿ ಸೇರಲಾಗುವ ಸಣ್ಣ ಪುಟ್ಟ ಔತಣ ಕೂಟಗಳು, ಗತಿಸಿದ ಆಪ್ತ ಬಂಧುಗಳನ್ನು ಕಾಡಿನ ಮಧ್ಯೆ ಎಲ್ಲೋ ಒಂದೆಡೆ ಸಮಾಧಿ ಮಾಡಿ ಗುರುತಿಗಾಗಿ ಕೆಲವೊಮ್ಮೆ ಒಂದು ಮುರುಕಲು ಶಿಲುಬೆಯಾಕೃತಿಯನ್ನು ಇಟ್ಟು ಗೌರವಿಸುವ ಸರಳ ಆದರೆ ನಡುಕ ಹುಟ್ಟಿಸುವ ಕಪ್ಪು ಜನರ ಶವ ಸಂಸ್ಕಾರಗಳು) ಮಾತ್ರ ಅರಿತವನಲ್ಲ : ಬದಲಾಗಿ ತನ್ನ ಜಗತ್ತನ್ನು ಸುತ್ತುವರಿದು ಉಸಿರುಗಟ್ಟಿಸುವಂತಹ ದಬ್ಬಾಳಿಕೆಯನ್ನು ನಡೆಸುತ್ತಿರುವ ಜನರ ದೌರ್ಜನ್ಯದ ಸೂಕ್ಷ್ಮ ವಿವರಗಳನ್ನು ಸಹ ಕರಾರುವಾಕ್ಕಾಗಿ ಅರಿತಿರುತ್ತಾನೆ.

ಲೂಸಿಯಾನಾದ ಹಳ್ಳಿಗಳ ಬಗ್ಗೆ ಬರೆಯುವ ಅರ್ನೆಸ್ಟ್ ಜೆ. ಗೇಯ್ನ್ಸ್‌ನಂತಹ ಪ್ರಸಿದ್ಧ ಕಪ್ಪು ಲೇಖಕನು ಕರಿಯರ ಮತ್ತು ಬಿಳಿಯರ ಬಗ್ಗೆ ಬರೆಯುವಾಗ – ಒಂದು ಗುಂಪನ್ನು ಕೇವಲ ದ್ವೇಷಕ್ಕೆ ಅರ್ಹವಾದ ವಿಷಪೂರಿತ ಮುದ್ದೆಯೆಂದು ಹಾಗೆಯೇ ಮತ್ತೊಂದನ್ನು ಸರ್ವಗುಣ ಸಂಪನ್ನರ ತಂಡವೆಂದು ಬರೆಯಲಾಗುವ ಸರಳೀಕರಣದ "ಕಪ್ಪು-ಬಿಳುಪು" ಕಥೆಗಳಿಗಿಂತ ಭಿನ್ನವಾಗಿ ಅಲ್ಲಿನ ಸುಡುವಾಸ್ತವಗಳನ್ನು ಕುರಿತು ತಾನು ಕಣ್ಣಾರೆ ಕಂಡಂತೆ ಹಾಗು ಗಂಭೀರವಾಗಿ ಅರ್ಥ ಮಾಡಿಕೊಂಡಿರುವ ರೀತಿಯಲ್ಲಿಯೇ ಈತ ನೇರವಾಗಿ ಬರೆಯುತ್ತಿರುವುದು ನಿಜಕ್ಕೂ ಮೆಚ್ಚತಕ್ಕ ಸಂಗತಿಯಾಗಿದೆ.

ತಮ್ಮಲ್ಲಿನ ಅಪ್ಪಟ ವೈಚಾರಿಕ ಸ್ಪಷ್ಟತೆಯ ಹೆಮ್ಮೆಯ ಕಾರಣಕ್ಕಾಗಿ ದಕ್ಷಿಣ ಭಾಗದ ನಮ್ಮ ಕಪ್ಪು ಲೇಖಕರೆಲ್ಲರೂ – ವರ್ಣಭೇದದ ವಂಚಕನೀತಿಯನ್ನು ಅನುಸರಿಸಿ ತಮ್ಮಲ್ಲಿನ ಮನುಷ್ಯತ್ವದ ಘನತೆಯನ್ನು ಎಂದೂ ಕುಗ್ಗಿಸಿಕೊಳ್ಳದ ತಮ್ಮ ಹಿರಿಯರು – ಹೆತ್ತವರಿಗೆ ಸದಾ ಋಣಿಗಳಾಗಿರಬೇಕಾಗಿದೆ. ನಮ್ಮ ನಿಯಂತ್ರಣದಲ್ಲಿ ಇಲ್ಲದ ಕೆಲವು ಕಾರಣಗಳಿಗಾಗಿ ನಮಗಿಂತ ಭಿನ್ನವಾಗಿರುವ ಜನರ ಬಗ್ಗೆ ನಾವು ವಿನಾಕಾರಣ ಅತ್ಯಂತ ಕೆಟ್ಟ ಭಾವನೆಯನ್ನು ಇಟ್ಟುಕೊಳ್ಳುವುದು ತಿಳಿಗೇಡಿತನವಾಗುತ್ತದೆಂದು ನಮ್ಮ ಪೂರ್ವಜರು ಅರಿತಿದ್ದರು. ಇತರರ ಬಗೆಗಿನ ಕುರುಡುದ್ವೇಷವು – ಅದರಲ್ಲೂ ಒಬ್ಬ ಲೇಖಕನಾದವನಿಗೆ ಸಾವಿಗೆ ಸಮಾನವಾಗುತ್ತದೆ. ಈ ಬಗೆಯ ಅಂಧತ್ವದ ಧೋರಣೆಯಿಂದಾಗಿಯೇ ಅದರಲ್ಲೂ ವರ್ಣಭೇದದ ಸಂಬಂಧದಲ್ಲಿಯೇ ದಕ್ಷಿಣ ಭಾಗದ ನಮ್ಮ ಅನೇಕ ಬರಹಗಾರರು ಮೇಲಿನ ಅರ್ಥದಲ್ಲಿ ಸತ್ತುಹೋಗಿದ್ದಾರೆ. ಹಾಗೆಯೇ ಈಗ ನಾವು ಓದುತ್ತಿರುವ ಕೃತಿಗಳಲ್ಲಿ ಹೆಚ್ಚಿನವು ಸಾವಿನ ಅಂಚಿನಲ್ಲಿವೆ.

ವಿಲಿಯಮ್ ಫಾಕ್ನರ್ ಬಗ್ಗೆ ನನಗಿದ್ದ ಸಣ್ಣ ಒಲವು "ಫಾಕ್ನರ್ ಇನ್ ದ ಯೂನಿವರ್ಸಿಟಿ"ಯಲ್ಲಿ ನಾನು ಆತನ ಕೆಲವು ಹೇಳಿಕೆಗಳನ್ನು ಓದಿದ ಮೇಲೆ ನುಚ್ಚುನೂರಾಯಿತು: ಬಿಳಿಯರು ಕರಿಯರಿಗಿಂತ ನೈತಿಕವಾಗಿ ಉನ್ನತ ಸ್ಥಿತಿಯಲ್ಲಿದ್ದಾರೆ. ಆದ್ದರಿಂದ ಬಿಳಿಯರಿಗೆ ರಾಜಕೀಯವಾಗಿ "ಕರಿಯರನ್ನು ತಮ್ಮೊಂದಿಗೆ ಕರೆದೊಯ್ಯುವ" ಕರ್ತವ್ಯಭಾರ (ಹಾಗೆಂದು ತಮ್ಮ ಅನುಕೂಲಕ್ಕೆ ತಕ್ಕಂತೆ ತಾವು ಭ್ರಮಿಸುವುದು) ಇರುವುದೆಂದು ಆತ ಹೇಳುತ್ತಾನೆ. ಈ ಫಾಕ್ನರ್‌ನ ಅಭಿಪ್ರಾಯದಲ್ಲಿ ಪ್ರಜಾಪ್ರಭುತ್ವವಿರುವ ಸಮಾಜದಲ್ಲಿ ಕಪ್ಪುಜನರು ಸರಿಯಾಗಿ ಕಾರ್ಯನಿರ್ವಹಿಸಲು ಇನ್ನೂ "ತಯಾರಾಗಿಲ್ಲ". ಒಬ್ಬ ಕಪ್ಪು ಮನುಷ್ಯನ ಬುದ್ಧಿವಂತಿಕೆಯು ಆತನಲ್ಲಿ ಎಷ್ಟು "ಬಿಳಿರಕ್ತ" ಇದೆ ಎನ್ನುವುದನ್ನು ಆಧರಿಸಿದೆ ಎಂದು ಅವನು ಭಾವಿಸಿದ್ದ.

ಗುಡ್‌ಮನ್, ಚೇನಿ ಮತ್ತು ಶ್ವರ್ನರ್‌ರಂತಹವರನ್ನು ಕೊಂದವರ ವಿರುದ್ಧ ಸೆಣಸಿದ ಮಾರ್ಟಿನ್ ಲೂಥರ್ ಕಿಂಗ್‌ನ ಐತಿಹಾಸಿಕ ಅವಧಿಯು ಅರವತ್ತರ ದಶಕದಲ್ಲಿ ಬಂದ ಯಾವುದೇ ಕಪ್ಪು ಮನುಷ್ಯನಿಗೆ ಈ ರೀತಿ ಭಾವಿಸುವುದಕ್ಕೆ ಆಧಾರಗಳಿಲ್ಲ ಎಂದು ತಿಳಿದಿತ್ತು. ಗಾರ್ವೆ, ಡುಬಾಯ್ಸ್ ಮುಂತಾದ ಹೋರಾಟಗಾರರ ದಿನಗಳಲ್ಲೂ ಕೂಡ ಈ ಭಾವನೆಗೆ ಯಾವ ಆಧಾರ ಇರಲಿಲ್ಲ. ಈ ದೇಶವನ್ನು ಕಂಡುಹಿಡಿದ ದಿನದಿಂದ ಮೊದಲುಗೊಂಡು ಇತಿಹಾಸದ ಯಾವುದೇ ಅವಧಿಯಲ್ಲಿ ಕೂಡ ಇದೆಲ್ಲ ಕಂಡುಬರಲಿಲ್ಲ. ಆರಂಭದಿಂದಲೂ ಕೂಡ ಈ ಅಡಿಯಾಳುಗಳೆಲ್ಲರೂ ಏಕಕಾಲದಲ್ಲಿ ಗುಲಾಮರು ಹಾಗೂ ಸಂತರಾಗಿದ್ದರು. ತಾನು ಹುಟ್ಟಿ ಬೆಳೆದ ಸಮಾಜವನ್ನು ಪರಿವರ್ತಿಸಲು ಟಾಲ್‌ಸ್ಟಾಯ್ ಆಸೆಪಟ್ಟು ಹೋರಾಟ ಮಾಡಿದಂತಹ ಮನಸ್ಸು ಫಾಕ್ನರ್‌ಗೆ ಇರಲಿಲ್ಲ. ತನ್ನ ಕಾದಂಬರಿಗಳಲ್ಲಿ ಈತ ಈ ಸಮಾಜವು ಶಿಥಿಲಗೊಳ್ಳಲು ಕಾರಣವಾಗಿರುವ ಅಂಶಗಳನ್ನು ತಿಳಿಯಲು ಪ್ರಯತ್ನಿಸಿದನೆಂದು ಕೆಲವರು ಸಮರ್ಥಿಸಿಕೊಳ್ಳಬಹುದು. ಆದರೆ ದುರದೃಷ್ಟವಶಾತ್, ಒಬ್ಬ ಮನುಷ್ಯನನ್ನು ಆತನ ಕೃತಿಗಳಿಂದ ಬೇರ್ಪಡಿಸಲು ಸಾಧ್ಯವಿಲ್ಲವೆಂದು–ನಾನು ಫಾಕ್ನರ್‌ನ ಕೃತಿಗಳನ್ನು ಕಪ್ಪು ವಿದ್ಯಾರ್ಥಿಗಳಿಗೆ

ಬೋಧಿಸಲು ಪ್ರಯತ್ನಿಸುತ್ತಿದ್ದಾಗ ಅರಿತುಕೊಂಡೆ. ಫಾಕ್ನರ್‌ನ "ಕಪ್ಪು" ಪಾತ್ರಗಳೆಲ್ಲವೂ ತಮ್ಮ "ಯಜಮಾನರ" ಮನೆಯ ಹಿಂಬಾಗಿಲಿನಿಂದಲೇ ಓಡಾಡುತ್ತವೆ–ಎಂದು ಗೊತ್ತಿದ್ದರೂ ಆತನ ಓದುಗರು, ಕೊನೆಯಲ್ಲಾದರೂ ಈ ಫಾಕ್ನರ್ ಆ ಮನೆಯನ್ನು ಸುಡಲಿಲ್ಲವಲ್ಲಾ ಎಂದು ನೊಂದುಕೊಳ್ಳುತ್ತಾರೆ. ಸಂಕುಚಿತ ಮನೋಭಾವದಿಂದ ಆರಂಭಿಸಿ ಹೊರಟ ವ್ಯಕ್ತಿತ್ವವೊಂದು ಅದೇ ರೀತಿಯ ಸಣ್ಣತನದ ಮನಸ್ಸಿನಿಂದ ಮುಂದುವರೆದರೆ, "ಪ್ರತಿಭಾಶಾಲಿ" ಎನಿಸಿಕೊಳ್ಳಲು ಖಂಡಿತಾ ಸಾಧ್ಯವಾಗದೆ ತನ್ನ ಹಳೆಯ ಜಾಡಿನಲ್ಲೇ ಓಡುತ್ತಿರಬೇಕೆಂದು ಕಾಣುತ್ತದೆ.

"ವಾಸ್ತವತೆ" ಎನ್ನುವುದು ಸಹ ಅನೇಕ ಸಲ ಕಾಲ್ಪನಿಕವಾದುದು ಮತ್ತು ಮನುಷ್ಯನ ಸಮಸ್ಯೆಗಳು ವರ್ಣಸಮಸ್ಯೆಯಷ್ಟು ಜಟಿಲವಾಗಿಲ್ಲ ಎಂದು ಹೇಳುವ ಸಂಕಲ್ಪವನ್ನಾದರೂ ಫ್ಲಾನರಿ ಓ ಕಾನರ್ ತೋರಿಸಿದ್ದನು. ಆದರೆ, ಮಿಸ್ ಓ ಕಾನರ್ ಆ ರೀತಿ ಅಲ್ಲ. ದಕ್ಷಿಣ ಭಾಗದ ಹೆಚ್ಚಿನ ಲೇಖಕರು ಪ್ರಚಲಿತವಾದ ಸಾಮಾಜಿಕ ನಿಯಮಗಳಿಂದ ಎಷ್ಟು ಯಾಂತ್ರಿಕವಾಗಿ ಬಂಧಿತರಾಗಿದ್ದಾರೆಂದರೆ ಸಾರ್ವಜನಿಕ ಮಂಡಲಿಗಳು ರಹಸ್ಯವಾಗಿಡಲು ಬಯಸುವ ಕೆಲವು ವಿಷಯಗಳನ್ನು ಕುರಿತು ಪರಿಶೀಲಿಸುವ ಗೋಜಿಗೆ ಹೋಗುವುದೇ ಇಲ್ಲ.

ನನ್ನ "ಸೌಲಭ್ಯವಂಚಿತ" ಹಿನ್ನೆಲೆಯಿಂದಲೇ ಪಡೆದ ಬಹಳಷ್ಟು ಅತ್ಯುತ್ತಮ ಅಂಶಗಳನ್ನು ನಾನು ಲೇಖಕಿಯಾಗಿ ಬಳಸಿಕೊಳ್ಳಬಹುದು ಎಂದರೆ ನನ್ನ ಉತ್ತರದ ಮಿತ್ರರು ಬಹುಶಃ ನಂಬಲಾರರು. ಆದರೆ, ನನ್ನಂತೆ ದೊಡ್ಡ ರಸ್ತೆಯ ಆ ಕೊನೆಯ ಮನೆಯೊಂದರಲ್ಲಿ ಹುಟ್ಟಿ, ಜಗತ್ತಿನ ಕೊನೆ ಒಂದೆಡೆ ಹಾಗೂ ಇನ್ನೊಂದೆಡೆ ಎಷ್ಟು ದೂರ ಕಣ್ಣಾಡಿಸಿದರೂ ಜನವಿಹೀನ ಶೂನ್ಯವೇ ಕಾಣುವಂತಹ ವಾತಾವರಣದಲ್ಲಿ ಅವರು ಬೆಳೆದಿಲ್ಲ. ಹಾಗೆಯೇ ಸುಡು ಬೇಸಿಗೆಯ ದಿನಗಳ ರುದ್ರರಮಣೀಯ ನೀರವತೆಯ ನಡುವೆ ನಾಲಗೆಯೊಣಗಿ ತುಂಬು ಬಾಯಾರಿಕೆಯಿಂದ–ಧೂಳುಗಟ್ಟಿದ ಹತ್ತಿಬೆಳೆಯ ಹೊಲಗಳನ್ನು ದಾಟಿ, ನಾನು ಅಲೆಯುತ್ತಿದ್ದಾಗ–ಎಲ್ಲ ಕಾಲಕ್ಕೂ ನೀರೇ ಬದುಕಿನ ಸಾರ ಸರ್ವಸ್ವವೆಂದು ನಲುಗಿದ ಅನುಭವ ಆ ಲೇಖಕ ಸಹೋದರರಿಗೆ ಖಂಡಿತಾ ಆಗಿಲ್ಲ. ಹಳ್ಳಿಗಾಡಿನಲ್ಲಿ ಉಂಟಾಗುವ ಅಪರಿಮಿತ ಆನಂದದ ಭೂಮಿತಾಯಿಯ ನಿತ್ಯ ಒಡನಾಟದ ಅನುಭವವಾಗಲಿ; ಧೂಳೇಳಿಸಿ ಬೀಳುವ ಮಳೆಹನಿಗಳು ಮತ್ತು ಹೊಸ ಮಳೆಗೆ ನೆಂದು ಘಮಘಮಿಸುವ ಮಣ್ಣಿನ ವಾಸನೆ ಹಾಗೂ ಆ ಬಗೆಗಿನ ಕಟ್ಟಕ್ಕರೆಯ ವ್ಯಾಮೋಹವಾಗಲೀ ನಗರವಾಸಿಗಳಿಗೆ ಸಾಧ್ಯವಾಗುವುದಿಲ್ಲ. ನಾವೆಲ್ಲಾ ಈ ಭೂಮಿಯ ಉಪ್ಪುಂಡು ಬೆಳೆದಿರುವ ಜೀವಿಗಳೆನ್ನುವ ಅರಿವೂ ಸಹ ಅನೇಕರಿಗಿಲ್ಲ.

ದಕ್ಷಿಣ ಭಾಗದ ಕಪ್ಪುಜನರ ಹಳ್ಳಿಗಾಡಿನ ಬದುಕನ್ನು ಕುರಿತು ಭಾವುಕ ರಮ್ಯತೆಯ ಮೂಲಕ ವೈಭವಿಸುವ ಮನಸ್ಸು ಕೂಡ ನನಗಿಲ್ಲ. ಈ ಹಿಂದೆ ಆ ಬದುಕನ್ನು ನಾನೆಷ್ಟು ದ್ವೇಷಿಸಿದ್ದೇನೆಂಬುದನ್ನು ಚೆನ್ನಾಗಿ ಬಲ್ಲೆ. ಅಲ್ಲಿನ ಹೊಲಗದ್ದೆಗಳಲ್ಲಿ ನನ್ನ ಅಪ್ಪನನ್ನು ಮೈಮುರಿಯುವಂತೆ ಸತತವಾಗಿ ದುಡಿಸಿಕೊಂಡು ಸಾವಿನ ದವಡೆಗೆ ನೂಕಿದ ಆ ದುರಾಶಾಪೀಡಿತರು, ಅಲ್ಲಿದ್ದ ನಮ್ಮ ಮುರುಕಲು ಮನೆಗಳು ಮತ್ತು ನನ್ನ ಹೆತ್ತೊಡಲಿನ ಸಮಸ್ತ

ಸ್ಥೈರ್ಯವನ್ನೂ ಕುಗ್ಗಿಸಿದ ಆ ದುಷ್ಕರ ಚಿತ್ರಣಗಳು ಈಗಲೂ ನನ್ನ ಕಣ್ಣಲ್ಲಿ ತುಂಬಿಕೊಂಡಿದೆ. ಆದರೆ, ದಕ್ಷಿಣ ಭಾಗದ ಕಪ್ಪುಲೇಖಕರಿಗೆ ಪ್ರೀತಿ ಮತ್ತು ದ್ವೇಷದ ಒಂದು ಪರಂಪರೆ ಮಾತ್ರವಲ್ಲದೆ ವಸ್ತುವಿಷಯಗಳ ಅಗಾಧ ಶ್ರೀಮಂತಿಕೆ ಮತ್ತು ಸೌಂದರ್ಯಪ್ರಜ್ಞೆ ಇರುವುದನ್ನು ನಾವೆಲ್ಲ ಅರಿಯಬೇಕಾಗಿದೆ. ಆಲ್ಬರ್ಟ್ ಕಾಮು ಹೇಳಿದಂತೆ "ದುಃಖ ಮತ್ತು ಸುಡುಬಿಸಿಲಿನ ನಡುವೆ" ಬದುಕುತ್ತಿರುವ ಈ ಜನರು "ಆಕಾಶದ ಕೆಳಗಿರುವುದೆಲ್ಲಾ ಸರಿಯುಂತೇನಲ್ಲ ಹಾಗೂ ಚರಿತ್ರೆಯೇ ಎಲ್ಲವೂ ಅಲ್ಲ" ಎಂದು ತಿಳಿದಿದ್ದಾರೆ.

ಯಾರೂ ಕೂಡ ದಕ್ಷಿಣ ಭಾಗದ ಬರಹಗಾರರಿಗೆ ದೊರೆತಿರುವ ಈ ಪರಂಪರಾನುಗತ ಅನುಕೂಲಗಳಿಗಿಂತಲೂ ಮಿಗಿಲಾದುದನ್ನು ಅಪೇಕ್ಷಿಸಲಾಗದು : ಏಕೆಂದರೆ, ಈ ಭೂಮಿಯ ಮೇಲಿನ ಅಪಾರವಾದ ಆಕರ್ಷಣೆ ನಮ್ಮೆಲ್ಲ ದುರಾಲೋಚನೆಗಳನ್ನೂ ಮೀರಿ ಸಾಗುವ ಮಾನವತೆಯ ಮೇಲಿನ ಕಡುನಿಷ್ಠೆ ಹಾಗೂ ನ್ಯಾಯದ ಬಗೆಗಿನ ಅಪರಿಮಿತ ವಿಶ್ವಾಸ—ಈ ಎಲ್ಲಾ ಬಳುವಳಿಗಳು ನಿಜಕ್ಕೂ ಮಹತ್ವಪೂರ್ಣವಾದವುಗಳು. ಶತಮಾನಗಳ ಕಾಲ ನಾವೆಲ್ಲ ಮೂಕಪಶುಗಳಂತೆ ಸಾಗುತ್ತಾ ಅನುಭವಿಸಿರುವ ಗಾಢವಾದ ನೋವು ಮತ್ತು ದ್ವೇಷದ ಕಹಿಯ ಜೊತೆ ಜೊತೆಯಲ್ಲಿಯೇ ನಮ್ಮ ಈ ಸುದೀರ್ಘ ಪ್ರಯಾಣದ ಅವಧಿಯಲ್ಲಿ ನಾವು ಒಡನಾಡಿಗಳಿಂದ ಪಡೆದ ತುಂಬು ಔದಾರ್ಯ ಮತ್ತು ಮಾಸದ ಪ್ರೇಮಪೂರ್ಣ ಬದುಕಿನ ಸೂಕ್ಷ್ಮಗಳಿಗೆಲ್ಲ ಅಭಿವ್ಯಕ್ತಿ ನೀಡಬೇಕಾದ ಹೊಣೆಗಾರಿಕೆಯು ನಮ್ಮೆಲ್ಲರ ಮೇಲಿದೆ.



Nishant Nagavar
English Lecturer, # 226-B, Wing, Naperol Tower
R.A. Ahmed Kidwai Marg, Wadala West, Mumbai - 400 031.

# ಅರುವತ್ತರ ಪಲುಕು

ಮರಾಠಿ ಮೂಲ : ಶ್ರೀ ವಿಂದಾ ಕರಂದೀಕರ್

ಭಾವ ಸಂಗ್ರಹ : ಡಾ. ತಾಳ್ತಜೆ ವಸಂತಕುಮಾರ

ಸೂರ್ಯ ಚಂದ್ರ ತಾರಾಳಿಗಳಳವಿನಾಚೆಗಿನ ಪುತ್ಥಳಿಯವಳು
ಎಲ್ಲವೂ ಅವಳೊಳಗೆ, ಎಲ್ಲವುಗಳೊಳಗೂ ಅವಳೇ
ಮಿಥ್ಯೆ ಮಿಸುಕಲು ಎಡೆ ನೀಡಲೇಕೆ
ನುಣ್ಣದಪಿನಾಳದ ಬಿಸುಪಿಗಾಹ್ವಾನಿತರು
ನಾವು ಅವಳಲ್ಲೇ ಸುಸ್ಥಿವರು
ಉಷಃಕಾಂತಿಯ ಕಣಿಯೆಸೆಯುವ
ಕಣ್ಗಳಾಣ್ಮಳು ಕಮನೀಯ ಉಷಾಕಾಂತೆಯೇನು!
ತೀವಿದೆ ತುಟಿ ಸಂಜೆಯ ಚೆಲುವಿನ ರಸರುಚಿರತೆಯಿಂದೆ
ನಿಶ್ಚಲ ಮಾರುತಿ ಮೂರುತಿಯೂ ಹಿಮ್ಮೊಗವಾಗಿದೆ
ಪ್ರದಕ್ಷಿಣೆ ಬರುತಿಹ ಅವಳಾನನ ಸಂದರ್ಶನ ಕಾತರದೆ
ಅನೇಕಾಂತ ಸ್ವಪ್ನ ದರ್ಶನ ತೃಪ್ತ ಚಿತ್ರವಿರೆ
ಪ್ರತ್ಯಕ್ಷ ಶಿಲ್ಪ ಕಾಣವಾಕಾಂಕ್ಷೆಯಿನಿತಿಲ್ಲ
ನಗುವೆಯೇಕೆ ಮುಗ್ಧ!
ಇಪ್ಪತ್ತರೆಡೆಯೆಳೆಯ ಬಾಲವೃದ್ಧ!
ಅರುವತ್ತರ ಅರವಟ್ಟಿಗೆಯದೊ ಕಾದಿದೆ ನಾಳೆ □

Dr. Talthaje Vasanthakumar
HOD. Department of Kannada, Vidyanagari, Bombay University
Santacruz East, Mumbai - 400 098

# ಯುರೋಪ್-ಆಫ್ರಿಕಾಗಳ ನಡುವಿನ ಕೊಡುಕೊಳೆ : ಒಂದು ದೃಷ್ಟಿಕೋನ

ಇಂಗ್ಲಿಷ್ ಮೂಲ : **ಚಿನುವಾ ಅಚಿಬೆ**
ಅನುವಾದ : **ಎಸ್. ಸಿರಾಜ್ ಅಹಮದ್**

೧೯೬೯ರಲ್ಲಿ ಬರ್ಲಿನ್‌ನಲ್ಲಿ ನಡೆದ ಆಫ್ರಿಕನ್ ಕಲೆಗಳ ಉತ್ಸವದ ಕಾರ್ಯಕ್ರಮದಲ್ಲಿ ಮಾತನಾಡಲು ನನಗೆ ಆಹ್ವಾನ ಬಂತು. ಅಲ್ಲಿ ನಾನು ಆಫ್ರಿಕಾ ಮತ್ತು ಯುರೋಪ್‌ನ ಸಂಸ್ಕೃತಿಗಳ ನಡುವಿನ ಕೊಡುಕೊಳೆ-ಅಂತರ್ ಸಂಬಂಧ ಮತ್ತು ಸಹಬಾಗಿತ್ವ ಎಂಬ ವಿಷಯದ ಬಗ್ಗೆ ಮಾತನಾಡಬೇಕಿತ್ತು.

ಸಾಮಾನ್ಯವಾಗಿ ನಾನು ಇನ್ನೊಬ್ಬರು ಸೂಚಿಸುವ ವಿಷಯವನ್ನು ಕುರಿತು ಮಾತಾಡಲು ಬಯಸುವುದಿಲ್ಲ. ಆದರೆ ಈ ಸಂದರ್ಭದಲ್ಲಿ ನನಗೆ ಈ ಸೂಚನೆಯನ್ನು ಬಹಳ ಘನವಾದ ಜಾಣ್ಮೆಯಿಂದ ತಲುಪಿಸಲಾಗಿತ್ತು. ಹಾಗೆ ನೋಡಿದರೆ ಈ ವಿಷಯದ ಬಗ್ಗೆ ಮಾತಾಡುವುದು ನನ್ನ ಪ್ರಿಯವಾದ ಸಂಗತಿಗಳಲ್ಲಿ ಒಂದು. ಹಾಗಿದ್ದರೂ ನನ್ನ ಆಯ್ಕೆಯ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಕಾರಣಕ್ಕಾಗಿ ವಿಷಯದಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡೆ. ಸಾಂಸ್ಕೃತಿಕ ಕೊಡುಕೊಳೆಯ ಅಗತ್ಯದ ಬದಲಾಗಿ, ಈ ಅನುಸಂಧಾನಕ್ಕೆ ಅಡ್ಡಿಯಾಗುವ ವಿಚಾರಗಳ ಬಗ್ಗೆ ಪ್ರಸ್ತಾಪ ಮಾಡುವ ನಿರ್ಧಾರ ಮಾಡಿದೆ.

ಇನ್ನೊಂದು ವಿಚಾರವನ್ನು ಇಲ್ಲಿಯೇ ಪ್ರಸ್ತಾಪಿಸಿ ಮುಂದೆ ಹೋಗಬೇಕು. ಬರ್ಲಿನ್‌ನಿಂದ ನನಗೆ ಬಂದ ಕಾರ್ಯಕ್ರಮದ ಆಹ್ವಾನ ಮೂರು ಮೂಲಗಳಿಂದ ಬಂದಿತ್ತು : ಒಂದು, ನೈಜೀರಿಯನ್ ಏರ್‌ವೇಸ್; ಎರಡು, ದಿ ಫೆಡರಲ್ ರೇಡಿಯೋ ಕಾರ್ಪೋರೇಷನ್ ಆಫ್ ನೈಜೀರಿಯಾ; ಮತ್ತು

ಮೂರು, ನೈಜೀರಿಯನ್ ಪೊಲೀಸ್ ಇಲಾಖೆಯಿಂದ! ವಿಚಿತ್ರವೆಂದರೆ ನಾನು ಅವರಿಗೆ ಕಳಿಸಿದ ಉತ್ತರಗಳಲ್ಲಿ ಒಂದೂ ಸಹ ಅವರಿಗೆ ತಲುಪಲಿಲ್ಲ ಎಂಬುದು ಆಮೇಲೆ, ಬರ್ಲಿನ್ ತಲುಪಿದ ನಂತರ ಗೊತ್ತಾಯಿತು. ಸಾಂಸ್ಕೃತಿಕ ಕೊಡುಕೊಳೆಯ ಪ್ರಕ್ರಿಯೆ ಎಷ್ಟು ಏಕಪಕ್ಷೀಯ ನೆಲೆಯಲ್ಲಿ ಸಂಭವಿಸುತ್ತದೆ ಎಂಬುದನ್ನು ವಿವರಿಸಲು ಈ ಘಟನೆ ಒಂದು ಒಳ್ಳೆಯ ದೃಷ್ಟಾಂತದಂತಿದೆ.

ಯೂರೋಪ್ ಮತ್ತು ಆಫ್ರಿಕಾಗಳ ನಡುವಿನ ಸಂಬಂಧ ಬಹಳ ಹಳೆಯದು ಹಾಗೂ ವಿಶಿಷ್ಟವಾದದ್ದು. ಉತ್ತರ ಆಫ್ರಿಕಾ ಹಾಗೂ ದಕ್ಷಿಣ ಯೂರೋಪಿನ ಕರಾವಳಿಗಳ ಮುಖಾಮುಖಿ ಆಧುನಿಕ ಯೂರೋಪಿನ ನಾಗರಿಕತೆಯನ್ನು ರೂಪಿಸುವಲ್ಲಿ ಸಹಾಯಕವಾಯಿತು. ದುಃಖದ ಸಂಗತಿಯೆಂದರೆ ನಂತರ ಆಫ್ರಿಕಾವನ್ನು ಗುಲಾಮರ ವ್ಯಾಪಾರ ಮತ್ತು ವಸಾಹತುಶಾಹಿಯ ದುರಂತ ಜಾಲಗಳಲ್ಲಿ ಬಂಧಿಸುವ ಮೂಲಕ ಯೂರೋಪ್ ತನ್ನ ಆಧುನಿಕತೆ ಮತ್ತು ಅಮೆರಿಕಾದ ಕೈಗಾರಿಕತೆ–ಸಂಪತ್ತಿನ ಸಾಮ್ರಾಜ್ಯಗಳನ್ನು ನಿರ್ಮಿಸಿಕೊಂಡಿತು. ಆದ್ದರಿಂದಲೇ ಕವಿ ಸೆಡಾರ್ ಸೆಂಘರ್ ಆಫ್ರಿಕಾ ಯೂರೋಪಿನ ಜೊತೆ ಹೊಕ್ಕುಳ ಬಳ್ಳಿಯ ಸಂಬಂಧ ಹೊಂದಿದೆ ಎಂದು ಹಾಡುವಾಗ ತಾಯಿ–ಮಗುವಿನ ಕರುಣಾಪೂರ್ಣ ರೂಪಕದಲ್ಲಿ ಈ ಸಂಬಂಧದ ನಡುವೆ ಇರುವ ಮೂಲಭೂತವಾದ ಕ್ರೂರ ಆಯಾಮವು ಮುಚ್ಚಿಹೋಗಿಬಿಡುತ್ತದೆ. ಹಾಗಿದ್ದರೂ ಈ ಎರಡು ಖಂಡಗಳ ನಡುವಿನ ಸಂಬಂಧ ಕವಿ ಹೇಳುವಂತೆ ಬಹಳ ಹತ್ತಿರದ್ದೇ ಆಗಿದೆ.

''ಆಫ್ರಿಕಾ ಮತ್ತು ಯೂರೋಪ್‌ಗಳ ನಡುವಿನ ಸಾಂಸ್ಕೃತಿಕ ಕೊಡುಕೊಳೆ ಮತ್ತು ಸಹಭಾಗಿತ್ವ". ನನಗೆ ಕೊಟ್ಟ ಈ ವಿಷಯದಲ್ಲಿ ಬಹಳ ಮುಖ್ಯವಾದದ್ದು ''ಸಹಭಾಗಿತ್ವ" ಎಂಬ ಶಬ್ದ. ಆದರೆ ಸಮಾನತೆಯ ಕಲ್ಪನೆಯನ್ನು ಒಪ್ಪಿಕೊಳ್ಳದೆ ಸಹಭಾಗಿತ್ವ ಸಾಧ್ಯವಿಲ್ಲ. ಇತರರ ವಿಷಯದಲ್ಲಿ ಸಮಾನತೆಯನ್ನು ಒಪ್ಪಿಕೊಳ್ಳುವುದು, ಅದರಲ್ಲೂ ಆಫ್ರಿಕನ್ನರ ಜೊತೆ ಅದನ್ನು ಹಂಚಿಕೊಳ್ಳುವುದು ಯೂರೋಪಿಯನ್ನರಿಗೆ ಸಾಧ್ಯವಾಗದ ಮಾತು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವೇ ಆಗಿದೆ. ಆದರೆ ಅದು ಸಹಭಾಗಿತ್ವ ಎಂಬ ಪೊಳ್ಳು ರಾಜಕೀಯ ಘೋಷಣೆಯನ್ನು ಮತ್ತೆ ಮತ್ತೆ ಪ್ರದರ್ಶಿಸುತ್ತಲೇ ಬಂದಿದೆ. ಈ ಬಗ್ಗೆ ಯಾರಿಗಾದರೂ ಸಂಶಯವಿದ್ದರೆ ೧೯೫೦ರಲ್ಲಿ ರೊಡೇಶಿಯಾದ ಬ್ರಿಟಿಷ್ ಗವರ್ನರ್ ಒಬ್ಬರು ಏನು ಹೇಳಿದ್ದರೆಂಬುದನ್ನು ನೆನಪಿಸಿಕೊಳ್ಳಬೇಕು: ಕುದುರೆ ಮತ್ತು ಅದರ ಸವಾರನ ಹೋಲಿಕೆಯ ಮೂಲಕ ಅವರು ಬಿಳಿಯ ಹಾಗೂ ಕಪ್ಪು ಜನಾಂಗಗಳ ನಡುವಿನ ಸಂಬಂಧವನ್ನು ವಿವರಿಸಿದ್ದರು!

ವಸಾಹತುಶಾಹಿಯ ಪ್ರಕ್ರಿಯೆಯನ್ನು ಇಷ್ಟು ಒರಟಾದ ಉದಾಹರಣೆಯ ಮೂಲಕ ವಿವರಿಸುವುದನ್ನು ನೋಡಿ ಬಿಳಿಯರಿಗೇ ಆಘಾತ ಉಂಟಾದರೂ ಆಫ್ರಿಕಾವನ್ನು ಕುರಿತ ಯೂರೋಪಿನ ದೃಷ್ಟಿಕೋನ ಮೂಲಭೂತವಾಗಿ ಇದೇ ಸ್ವರೂಪದ್ದಾಗಿದೆ. ಮನುಷ್ಯ ಮತ್ತು ಪ್ರಾಣಿಗಳ ರೂಪಕ ಹೊಸದೂ ಅಲ್ಲ, ಆಕಸ್ಮಿಕವೂ ಅಲ್ಲ.

ಈ ಬಗ್ಗೆ ಹೆಚ್ಚು ಗೊಂದಲಗೊಳ್ಳುವ ಅಗತ್ಯವಿಲ್ಲ. ಆಫ್ರಿಕನ್ ಮನುಷ್ಯರನ್ನು ಮುಖಾಮುಖಿಯಾಗುವಾಗ ಬಿಳಿಯರೆದುರಿಗೆ ಸರಳವಾದ ಆಯ್ಕೆಯೊಂದಿದೆ. ಒಂದು ಅವರನ್ನು ಮನುಷ್ಯರೆಂದು ಭಾವಿಸಿ ಅವರಿಗೆ ಸಮಾನತೆಯನ್ನು ನೀಡುವುದು. ಇನ್ನೊಂದು ಇದನ್ನು

ತಿರಸ್ಕರಿಸಿ ಅವರನ್ನು ಮೃಗಗಳಂತೆ ಕಾಣುವುದು. ಇವೆರಡನ್ನು ಬಿಟ್ಟು ಬೇರೆ ಬೌದ್ಧಿಕ ದ್ವಂದ್ವಗಳಲ್ಲಿ ಸಿಕ್ಕಿ ಹಾಕಿಕೊಳ್ಳುವಂತಿಲ್ಲ. ಆದರೆ ಶತಮಾನಗಳಿಂದ ಯೂರೋಪ್ ಆಫ್ರಿಕಾದ ಬಗ್ಗೆ ಒಂದು ಪ್ರಾಣಿಜನ್ಯವಾದ ರೂಪಕವನ್ನು ಸೃಷ್ಟಿಸಿಕೊಂಡು ಅವರೊಂದಿಗೆ ಸಂವಾದದ ಸಾಧ್ಯತೆಯನ್ನೇ, ಬಹಳ ಸಹಜವಾಗಿ ಎಂಬಂತೆ, ಇಲ್ಲವಾಗಿಸಿಬಿಟ್ಟಿದೆ. ನೀವು ಕುದುರೆಯೊಂದಿಗೆ ಮಾತನಾಡಬಹುದಾದರೂ ಅದರ ಉತ್ತರಕ್ಕೆ ಕಾಯಬೇಕಾಗಿಲ್ಲ!

ನಾಲ್ಕು ನೂರು ವರ್ಷಗಳಿಂದ ಆಫ್ರಿಕನ್ನರ ಬಗ್ಗೆ ಬಿಳಿಯರು ಸೃಷ್ಟಿಸಿರುವ ಮಿಥ್‌ಗಳು ಯೂರೋಪಿಗೆ ಮಾನಸಿಕವಾಗಿ ಮತ್ತು ನಿಸ್ಸಂದೇಹವಾಗಿ ಆರ್ಥಿಕವಾಗಿ ಬಹುದೊಡ್ಡ ಸಮರ್ಥನೆಯನ್ನು ಒದಗಿಸಿಬಿಟ್ಟಿವೆ. ಯೂರೋಪಿನ ಈ ಬಿಳಿಯ ಮನುಷ್ಯ ನಿರಂತರವಾಗಿ ಯಾರ ಮಾತನ್ನೂ ಕೇಳಿಸಿಕೊಳ್ಳುವ ವ್ಯವಧಾನವಿಲ್ಲದೆ ಮಾತನಾಡುತ್ತಲೇ ಬಂದಿದ್ದಾನೆ. ಯಾಕೆಂದರೆ ಅವನು ತನ್ನೆದುರಿಗೆ ಇರುವುದು ಮಾತು ಬಾರದ ಕಾಡುಮೃಗ ಎಂದು ನಿಶ್ಚಿತವಾಗಿ ಕಲ್ಪಿಸಿಕೊಂಡು ಬಿಟ್ಟಿದ್ದಾನೆ. ಸ್ಟೀವ್ ಬಿಕೋ ಹೇಳುವ ಹಾಗೆ ಸಂಸ್ಕೃತಿಯ ಕೊಡುಕೊಳೆ ಎಂದರೆ ಅವರು ಯಾವ ಎಗ್ಗಿಲ್ಲದೆ ತಡೆರಹಿತವಾಗಿ ಮಾತಾಡುವುದು ಮತ್ತು ಆಫ್ರಿಕನ್ನರು ಮೂಕರಂತೆ ಕೇಳಿಸಿಕೊಳ್ಳುವುದೇ ಆಗಿದೆ. ಅವರಿಗೆ ಆಫ್ರಿಕನ್ನರು ಎಲ್ಲ ಮನುಷ್ಯರ ಹಾಗೆ ಮಾತಾಡಬಲ್ಲರು ಎಂಬ ಮೂಲಭೂತ ವಿಷಯವೇ ಗೊತ್ತಿಲ್ಲ. ಇನ್ನೊಬ್ಬರಿಗೆ ಮಾತು ಬರುತ್ತದೆ ಎಂದು ಅರಿಯುವುದೇ ಅವನ ಮನುಷ್ಯತ್ವವನ್ನು ಒಪ್ಪಿಕೊಳ್ಳುವ ಮೊದಲ ಹೆಜ್ಜೆಯಾಗಿದೆ.

ಹೀಗೆ ವಾದಿಸುವಾಗ ಕೆಲವು ಸರಳೀಕೃತ ಗ್ರಹಿಕೆಗಳು ನುಸುಳಿಬಿಡುತ್ತದೆ ಎಂಬ ಅರಿವು ನನಗಿದೆ. ಯೂರೋಪಿನ ಎಲ್ಲರೂ ಇಂಥ ದೃಷ್ಟಿಕೋನದವರಾಗಿರಲು ಸಾಧ್ಯವಿಲ್ಲ. ಮತ್ತು ಯಾರೋ ಕೆಲವರು ಮಾಡಿದ ತಪ್ಪಿಗೆ ಒಟ್ಟಾಗಿ ಒಂದು ಜನಾಂಗವನ್ನೇ ತಪ್ಪಿತಸ್ಥನನ್ನಾಗಿಸುವುದು ಸಾಧುವಲ್ಲ. ನನ್ನ ವಾದಕ್ಕೆ ಅಲ್ಲಿ ಇಲ್ಲಿ ಕೆಲವು ತಿದ್ದುಪಡಿಗಳನ್ನು ಸೂಚಿಸಬಹುದಾದರೂ ಸಾರಾಂಶದಲ್ಲಿ ಅದು ಸರಿಯಾಗಿಯೇ ಇದೆ.

ವಿಚಿತ್ರವೆಂದರೆ ಬಿಳಿಯರಿಗೆ ಆಫ್ರಿಕನ್ನರ ಬಗ್ಗೆ ಎಷ್ಟು ಕುತೂಹಲವಿದೆಯೆಂದರೆ ಅವರು ಒಂದು ದಿನ ಎಂದಾದರೂ ಬಂದು ನಮ್ಮ ಮಾತುಗಳನ್ನು ಕೇಳಿಸಿಕೊಂಡಾರು. ಬಹುಕಾಲದಿಂದ ಆಫ್ರಿಕನ್ನರ ಜೊತೆ ಸಹಜ ಮಾತುಕತೆಯನ್ನು ತಪ್ಪಿಸುವ ಸಲುವಾಗಿ ಬಿಳಿಯರು ಹಲವು ಉಪಾಯಗಳನ್ನು ಮಾಡುತ್ತಲೇ ಬಂದಿದ್ದಾರೆ. ಇಂಥ ಉಪಾಯಗಳ ಭಾಗವಾಗಿ ನಮ್ಮೊಂದಿಗೆ ಮಾತನಾಡಲು ಪಾದ್ರಿಗಳು, ಸೈನಿಕರು, ಕಳ್ಳರು, ವ್ಯಾಪಾರಿಗಳು, ಪತ್ರಕರ್ತರು, ವಿದ್ವಾಂಸರು, ಸಂಶೋಧಕರು ಮತ್ತು ಕಾದಂಬರಿಕಾರರು ಬರುತ್ತಲೇ ಇದ್ದಾರೆ. ಇವರನ್ನೆಲ್ಲ ಒಂದು ಗುಂಪಿಗೆ ಸೇರಿಸಿ ಎಲ್ಲರನ್ನೂ ಅವಮಾನಿಸುವ ಉದ್ದೇಶ ನನಗಿಲ್ಲ. ಬಹಳಷ್ಟು ಯೂರೂಪಿಯನ್ನರು ಆಫ್ರಿಕಾವನ್ನು ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಬಹಳ ಮೌಲಿಕವಾದ ಕೊಡುಗೆಯನ್ನು ನೀಡಿದ್ದಾರೆ. ಎಲ್ಲಿಯೂ ನಿಲ್ಲದೆ ಸದಾ ಜಂಗಮವಾಗಿರುತ್ತಿದ್ದ ಅವರ ಪ್ರವೃತ್ತಿಯಿಂದ ನಮ್ಮ ಬಗ್ಗೆ ಅತ್ಯಂತ ಹೊಸ ಒಳನೋಟಗಳು ಅವರಿಂದ ನಮಗೆ ದೊರಕಿದಂತಾಗಿದೆ. ಆದರೆ ಒಬ್ಬನೇ

ವ್ಯಕ್ತಿಯ ಅದ್ಭುತ ಸ್ವಗತವೂ ಸಹ ಎರಡು ಸಂಸ್ಕೃತಿಗಳ ನಡುವಿನ ಸಂವಾದಕ್ಕೆ ಪರ್ಯಾಯವಾಗಲು ಸಾಧ್ಯವಿಲ್ಲ.

ಬಹಳ ಸಂದರ್ಭಗಳಲ್ಲಿ ಈ ಸ್ವಗತ ಕೃತಕ ಭಾವಾವೇಶದಿಂದ ಕೂಡಿರುತ್ತದೆಂದು ನಾವು ನೋಡಿದ್ದೇವೆ. ಯೂರೂಪ್ ಮತ್ತು ಅಮೆರಿಕಾಗಳಲ್ಲಿ ಅತ್ಯಂತ ಶ್ರೇಷ್ಠ ಕೃತಿಯೆಂದು ಪರಿಗಣಿತವಾಗಿರುವ ಜೋಸೆಫ್ ಕಾನ್ರಾಡನ "ಹಾರ್ಟ್ ಆಫ್ ಡಾರ್ಕ್‌ನೆಸ್" ಕಾದಂಬರಿಯಲ್ಲಿ ಇದು ಹೇಗೆ ವ್ಯಕ್ತವಾಗಿದೆಯೆಂದು ನಾನು ಈಗಾಗಲೇ ವಿಶ್ಲೇಷಿಸಿದ್ದೇನೆ. ಈ ಕಾದಂಬರಿ ಬಹಳ ಶ್ರೇಷ್ಠವೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವುದು ಅದು ಜನಾಂಗೀಯ ಪೂರ್ವಗ್ರಹಗಳನ್ನು ಬಹಳ ಜಾಣ್ಮೆಯಿಂದ ಪೋಷಿಸುತ್ತದೆ ಎಂಬ ಕಾರಣಕ್ಕಾಗಿಯೇ. ಕಾದಂಬರಿಯು ಆಫ್ರಿಕಾದ ಪರಿಸರದಲ್ಲಿ ನೆಲೆಗೊಂಡಿದ್ದರೂ, ಅಲ್ಲಿನ ಆಫ್ರಿಕನ್ನರನ್ನು ಮನುಷ್ಯರೆಂದು ಪರಿಗಣಿಸದೆ, ಪ್ರಾಣಿಗಳಂತೆ ಚಿತ್ರಿಸಿರುವುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ. ಕಾನ್ರಾಡ್‌ನ ಇಡೀ ಕಾದಂಬರಿಯಲ್ಲಿ ಆಫ್ರಿಕನ್ನರು ಉಚ್ಚರಿಸುವುದು ಹತ್ತು ಹನ್ನೆರಡು ಪದಗಳಿರುವ ಹರಕು ಇಂಗ್ಲಿಷಿನ ತುಂಡು ವಾಕ್ಯಗಳನ್ನು ಮಾತ್ರ. ಒಮ್ಮೆ ನರಭಕ್ಷಕನೊಬ್ಬ "Catch'm....eat' im" ಎಂದರೆ ಇನ್ನೊಬ್ಬ "Mistah Kurtz-he dead" ಎನ್ನುವುದನ್ನು ಬಿಟ್ಟರೆ ಆಫ್ರಿಕನ್ನರು ಸಹಜ ಮನುಷ್ಯರ ಹಾಗೆ ಮಾತಾಡುವ ಉದಾಹರಣೆಗಳು ಕಾದಂಬರಿಯಲ್ಲಿ ಇಲ್ಲ.

ನನ್ನ "ಆ್ಯರೋ ಆಫ್ ಗಾಡ್" ಕಾದಂಬರಿಯನ್ನು ಕುರಿತು "ನ್ಯೂಯಾರ್ಕ್ ಟೈಂಸ್ ಬುಕ್ ರಿವ್ಯೂ"ಗೆ ವಿಮರ್ಶೆ ಬರೆದ ಕ್ರಿಸ್ಟ್ ಎಂಬ ಆಶ್ಚರ್ಯಕರ ಹೆಸರಿನ ವ್ಯಕ್ತಿ ಬರೆದಿದ್ದನ್ನು ಸಹ ಇಲ್ಲಿ ಉಲ್ಲೇಖಿಸಬೇಕು. ಅವನ ಪ್ರಕಾರ—"ಡಬ್ಲ್ಯೂ.ಎಚ್. ಹಡ್ಸನ್ ದಕ್ಷಿಣ ಅಮೆರಿಕಾದ ವಾಸ್ತವವನ್ನು ಕುರಿತು ಹೇಳಿದ ಹಾಗೆ, ಅಥವಾ ಟಿ.ಇ. ಲಾರೆನ್ಸ್ ಅರೇಬಿಯಾದ ಬಗ್ಗೆ ತಿಳಿಸಿದ ಹಾಗೆ ಯಾವ ನೈಜೀರಿಯಾದ ಪ್ರಜೆಯೂ ನೈಜೀರಿಯಾವನ್ನು ತೋರಿಸಿಕೊಡಲು ಅಸಮರ್ಥನಾಗಿದ್ದಾನೆ. ಅವನು ನೈಜೀರಿಯಾದ ಸಂಸ್ಕೃತಿ ಸಂದರ್ಭಗಳನ್ನು ಅರಿತಿದ್ದರೂ ನಮಗೆ ಗೊತ್ತಾಗುವಂತೆ ಮಾತನಾಡಲು ಅವನಿಗೆ ಸಾಧ್ಯವಿಲ್ಲ". ಒಂದು ಪಕ್ಷ ದಕ್ಷಿಣ ಅಮೆರಿಕಾದವನೊಬ್ಬ ಆ ದೇಶವನ್ನು ಅವನಿಗೆ ಅರ್ಥ ಮಾಡಿಕೊಳ್ಳಲು ಸಹಾಯ ಮಾಡಿದ ಎಂದು ಕ್ರಿಸ್ಟ್ ಹೇಳಿದ್ದರೆ, ಅರಬನೊಬ್ಬ ಅರೇಬಿಯಾವನ್ನು ಅರಿಯಲು ಪ್ರೇರಕನಾದ ಎಂದು ವಾದಿಸಿದ್ದರೆ ಅವನ ಮಾತನ್ನು ಒಪ್ಪಬಹುದಾಗಿತ್ತು. ಆದರೆ ಮಿ. ಕ್ರಿಸ್ಟ್‌ನ ಸಮಸ್ಯೆ ಬಹಳ ಮೂಲಭೂತವಾದದ್ದು : ಇಡೀ ಪ್ರಪಂಚವನ್ನು, ಯಾರೂ ಕಂಡಿರದ ಅಪರಿಚಿತ ಜನಾಂಗಗಳ ಪ್ರಪಂಚವನ್ನು ಸಹ ಅವನು ಮತ್ತು ಅವನ ಇತರ ಸಹೋದರರು ಮಾತ್ರ ಅರ್ಥ ಮಾಡಿಕೊಳ್ಳಬಲ್ಲರು. ಆದ್ದರಿಂದ ಅವನು ತನ್ನ ತಮ್ಮಂದಿರಲ್ಲಿ ಒಬ್ಬನನ್ನು ಮೊದಲು ದಕ್ಷಿಣ ಅಮೆರಿಕಾವನ್ನು ನಂತರ ಅರೇಬಿಯಾವನ್ನು ಅರ್ಥ ಮಾಡಿಕೊಂಡು ತನಗೆ ವಿವರಿಸಲೆಂಬ ಉದ್ದೇಶದಿಂದ ಕಳಿಸಿಕೊಟ್ಟ. ವಿಚಿತ್ರವೆಂದರೆ ನೈಜೀರಿಯಾಕ್ಕೆ ತನ್ನ ಮೂರನೆಯ ತಮ್ಮನನ್ನು ಕಳಿಸಿ ಅದನ್ನು ಪ್ರಪಂಚಕ್ಕೆ ವಿವರಿಸಿಕೊಡುವ ಮಹತ್ಕಾರ್ಯಕ್ಕೆ ಸಿದ್ಧತೆ ನಡೆಸುತ್ತಿರುವಾಗಲೇ ಯಾವನೋ ಒಬ್ಬ ನನ್ನಂಥ ನೈಜೀರಿಯಾದವನು ಅವಸರಕ್ಕೆ ಬಿದ್ದು ತನ್ನ ದೇಶದ ಬಗ್ಗೆ ಮಾತಾಡಲು ಆರಂಭಿಸಿಬಿಟ್ಟಿದ್ದ!

ಯೂರೂಪ್ ಮತ್ತು ಆಫ್ರಿಕಾದ ನಡುವಿನ ಸುವಾದ ಈ ಬಗೆಯದ್ದು. ಬಿಳಿಯರು ಇನ್ನೊಬ್ಬರ ಪರವಾಗಿ ಮಾತಾಡುತ್ತಿದ್ದ ಹಳೆಯ ಆಟ ಈಗ ನಡೆಯುವ ಹಾಗಿಲ್ಲ. ಯಾಕೆಂದರೆ ನಮಗೆ ಮಾತಾಡಲು ಬರುತ್ತದೆ!

ಇಲ್ಲಿ ಉಲ್ಲೇಖಿಸಬಹುದಾದ ಇನ್ನೊಂದು ಉದಾಹರಣೆ "ನಿಜವಾದ ಆಫ್ರಿಕನ್" ಅನ್ನು ಕುರಿತದ್ದು. ನಿಜವಾದ ಆಫ್ರಿಕನ್ ಎಂಬ ಶುದ್ಧ ಕಾಲ್ಪನಿಕ ವ್ಯಕ್ತಿಯನ್ನು ಸೃಷ್ಟಿಸಿದ್ದೇ ತನ್ನೊಂದಿಗೆ ತಾನೇ ಎಂದಿಗೂ ಮುಗಿಯದ ದೀರ್ಘ ಸ್ವಗತದಲ್ಲಿದ್ದ ಬಿಳಿಯ ಮನುಷ್ಯನ ವಿಶ್ವಾಸಾರ್ಹತೆಯ ಪ್ರಶ್ನೆಯನ್ನು ಬದಿಗೆ ಸರಿಸಲಿಕ್ಕಾಗಿ. ಆಫ್ರಿಕನ್ ಸಂಸ್ಕೃತಿಯನ್ನು ಆಳವಾಗಿ ಅಭ್ಯಾಸ ಮಾಡಿದ ಜರ್ಮನ್ ವಿದ್ವಾಂಸ Janheinz Jahn ಈ ನಿಜ ಆಫ್ರಿಕನ್ನರನ್ನು ಹೀಗೆ ವಿವರಿಸಿದ್ದಾನೆ:

"ಅತ್ಯಂತ ಸುಸಂಸ್ಕೃತ ಮನುಷ್ಯ ಮಾತ್ರ ನಿಜವಾದ ಯೂರೂಪಿಯನ್ ಎಂದು ಕರೆಸಿಕೊಳ್ಳಲು ಅರ್ಹನಾಗಿರುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ಒಬ್ಬ ನಿಜವಾದ ಆಫ್ರಿಕನ್ ಎಂಥವನೆಂದರೆ ಅವನು ಕಾಡಿನ ಪೊದೆಗಳಲ್ಲಿ ಬೆತ್ತಲೆ ತಿರುಗುವವನಾಗಿರುತ್ತಾನೆ. ಅವನು ಮೊಸಳೆಗಳು ಆನೆಗಳ ಬಗ್ಗೆ ವಿಚಿತ್ರವಾದ ಕತೆಗಳನ್ನು ಹೇಳುತ್ತಾನೆ. ಇಂಥವನು ಎಷ್ಟು ಪ್ರಾಚೀನವಾಗಿರುತ್ತಾನೋ ಅಷ್ಟು ನಿಜವಾದ ಆಫ್ರಿಕನ್ನನಾಗಿರುತ್ತಾನೆ. ಆದರೆ ಓದು ಬರಹ ಅರಿತು ಬುದ್ಧಿವಂತನಾಗಿ ವಿಶ್ವಪ್ರಜೆಯಾಗಿರುವವನು, ಕಾದಂಬರಿಗಳನ್ನು ಬರೆಯುತ್ತ ರಾಜಕೀಯ ಭಾಷಣಗಳನ್ನು ಮಾಡುವವನು ಮಾತ್ರ ಯಾವ ಬಗೆಯಲ್ಲೂ ನಿಜವಾದ ಆಫ್ರಿಕನ್ನನಾಗಲು ಸಾಧ್ಯವಿಲ್ಲ" ಅಯ್ಯೊ! ಇಷ್ಟು ವೇಗವಾಗಿ ಬದಲಾಗುತ್ತಿರುವ ಪ್ರಪಂಚದಲ್ಲಿ ಇಂಥ ನಿಜವಾದ ಆಫ್ರಿಕನ್ನರು ಕಳೆದುಹೋಗಿಬಿಡುತ್ತಾರಲ್ಲಾ ಎಂಬುದು ಅವರಿಗೆ ಬಹು ದೊಡ್ಡ ಸಂಕಟದ ವಿಷಯವಾಗಿದೆ. ಈ ನಿಜವಾದ ಆಫ್ರಿಕನ್ನರು ಕಾಡುಪೊದೆಗಳಲ್ಲಿ ಮೃಗಗಳಂತೆ ಅವಿತು ಕೊಂಡಿರುವುದರಿಂದಲೇ ಅವರು ಬಿಳಿಯ ಪ್ರಜೆಗಳ ಅಪಾರ ಪ್ರೀತಿಗೆ ಪಾತ್ರವಾಗಿದ್ದಾರೆ. ನಿಜವಾದ ಆಫ್ರಿಕನ್ನನಿಂದ ಆಗುತ್ತಿದ್ದ ಪ್ರಯೋಜನಗಳು ಬಹುಪಾಲು ಕಮ್ಮಿಯಾಗಿಬಿಟ್ಟವೆ. ಆಫ್ರಿಕಾದಲ್ಲಿ ವ್ಯವಹಾರ ಮಾಡಿ ಲಾಭ ಗಳಿಸಲು ಹೋಗುವ ಯಾವ ಉದ್ದಿಮೆದಾರನೂ ಅಲ್ಲಿನ ಭೂತದೇವರುಗಳ ಹತ್ತಿರ ಹೋಗಿ ಕಣಿ ಕೇಳುವುದಿಲ್ಲ.

ನ್ಯೂಯಾರ್ಕ್ ಟೈಮ್ಸ್‌ನ ಪುಸ್ತಕ ವಿಮರ್ಶೆಯ ಅಂಕಣದಲ್ಲಿ ವಿ.ಎಸ್. ನೈಪಾಲ್‌ನ "ದಿ ಬೆಂಡ್ ಇನ್ ದ ರಿವರ್" ಕಾದಂಬರಿಯ ಬಗ್ಗೆ ಒಂದು ಲೇಖನದ ಜೊತೆಗೆ, ಕಾದಂಬರಿಕಾರನ ದೀರ್ಘ ಸುದರ್ಶನವೂ ಪ್ರಕಟವಾಗಿತ್ತು. ಅಮೆರಿಕಾದ ಖ್ಯಾತ ಬರಹಗಾರ್ತಿ–ವಿಮರ್ಶಕಿ ಎಲಿಜಬೆತ್ ಹಾರ್ಡ್‌ವಿಕ್ ಈ ಸಂದರ್ಶನವನ್ನು ಮಾಡಿದ್ದರು. ಅಲ್ಲಿನ ಕೆಲವು ಭಾಗಗಳು ಹೀಗಿವೆ :

"ಹೀಗೆ (ನೈಪಾಲ್) ಇಂಡಿಯಾದಿಂದ ಮುಂದೆ ಸಾಗಿದ್ದಾರೆ....ಎಲ್ಲ ಕಡೆ ಸರ್ವವ್ಯಾಪಿಯಾಗಿ ಆವರಿಸಿರುವ ಕಗ್ಗತ್ತಲೆಯ ಬಗ್ಗೆ ಅವರು ವಿಚಾರಪೂರ್ಣ ವಿಶ್ಲೇಷಣೆಯಲ್ಲಿ ತೊಡಗಿದ್ದಾರೆ. ಅವರೊಂದಿಗೆ ಮಾತಾಡುತ್ತ, ಅವರ ಕೃತಿಗಳನ್ನು ಮತ್ತೆ ಮತ್ತೆ ಓದುತ್ತ.... ಇದಿ ಅಮೀನ್‌ನ ಬಗ್ಗೆ ಖೋಮೇನಿಯ ಬಗ್ಗೆ, ಭುಟ್ಟೋನ ಸ್ಥಿತಿಯ ಬಗ್ಗೆ ಯೋಚನೆ ಮಾಡದೆ ಇರಲು ಸಾಧ್ಯವಿಲ್ಲ. ನೈಪಾಲರ ಬರಹಗಳು ಇಂಥ ವ್ಯಕ್ತಿಗಳು ಹೇಗೆ ಮತಿಗೆಟ್ಟ ಹಾಗೂ ಊಹಿಸಲಸಾಧ್ಯವಾದ

ಸಾಮಾಜಿಕ ಬದಲಾವಣೆಗಳ ಫಲವಾಗಿ ಸೃಷ್ಟಿಯಾಗುತ್ತಾರೆ ಎಂಬುದನ್ನು ಬಹಳ ಸೃಜನಶೀಲವಾಗಿ ತೋರಿಸಿಕೊಡುತ್ತವೆ. ಅವರ ಬರಹಗಳು ಇಂಥ ವ್ಯಕ್ತಿಗಳ ಸೃಷ್ಟಿಯ ಹಿಂದೆ ಅವರ ದೇಶಗಳ ಚಾರಿತ್ರಿಕ ಅಸಮರ್ಪಕತೆಯ ಬಗ್ಗೆ, ಅಲ್ಲಿನ ಅಗಾಧ ಯಾತನೆಗಳ ನಡುವೆ ಬದುಕಲು ಅಸಾಧ್ಯವಾಗಿರುವ ಜನರ ಅಸಹಾಯಕತೆಯ ಬಗ್ಗೆ ಗಮನ ಸೆಳೆಯುತ್ತವೆ."

ನೈಪಾಲ್ ಆಫ್ರಿಕಾ, ಇಂಡಿಯಾ ಮತ್ತು ದಕ್ಷಿಣ ಅಮೆರಿಕಾಗಳ ಬಗ್ಗೆ ಬರೆದಿರುವ ತಿರಸ್ಕಾರ ಪೂರ್ಣ ಬರಹಗಳಿಂದ ಬಹಳ ಉದಾರವಾಗಿ ಬಾಯಿ ಚಪ್ಪರಿಸುವಂಥ ಉದಾಹರಣೆಗಳನ್ನು ಎಲಿಜಬೆತ್ ಉದಾಹರಿಸುತ್ತಾರೆ. ಬಹಳ ಮುಖ್ಯವಾಗಿ ೧೯೬೫ರಲ್ಲಿ ನೈಪಾಲ್ ಕಾಂಗೋ ನದಿಯ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಹೇಗೆ ಅಲ್ಲಿನ ಜನಗಳು ಪೊದೆಗಳಲ್ಲಿ ನುಸುಳುತ್ತ ಮನುಷ್ಯ ನಾಗರಿಕತೆಯ ಅವಶೇಷಗಳ ನಡುವೆ ಬದುಕಿದ್ದಾರೆ ಎಂದು ಹೇಳುವುದನ್ನು ಉಲ್ಲೇಖಿಸುತ್ತಾಳೆ. ಸುಹಾನ್ ಪಂಡಿತಳಾದ ಈ ಅಮೆರಿಕನ್ ಮಹಿಳೆ ಅಗಲಗಣ್ಣಿನ ಹಳ್ಳಿಯ ಹುಡುಗಿಯ ಹಾಗೆ ನೈಪಾಲ್‌ನ ಮಾತುಗಳನ್ನು ಕೇಳಿಸಿಕೊಳ್ಳುತ್ತಾಳೆ. ಸಾಹಿತ್ಯಲೋಕದ ಮಹಾಗುರುವಾದ ನೈಪಾಲ್ ಇಲ್ಲಿಯವರೆಗೆ ಅವಳ ಜನಾಂಗವು ಸೃಷ್ಟಿಸಿರುವ ಹಳೆಯ ಪೂರ್ವಗ್ರಹಗಳನ್ನೇ ಮತ್ತೊಮ್ಮೆ ಅಪ್ಯಾಯಮಾನವಾಗುವಂತೆ ಮಾತಾಡುತ್ತಿದ್ದರೆ ಈಕೆ ಅದನ್ನು ಬಾಯಿಬಿಟ್ಟು ಕೇಳಿಸಿಕೊಳ್ಳುವುದನ್ನು ನೋಡಿದರೆ ವಿಚಿತ್ರ ಅನಿಸುತ್ತದೆ.

ಹಾಗಿದ್ದರೆ ಯಾವ ಮತಿಗೆಟ್ಟ ಸಾಮಾಜಿಕ ಬದಲಾವಣೆಗಳು ಹಿಟ್ಲರ್, ಸ್ಟಾಲಿನ್, ಮೋಧಾರನ್ನು ಸೃಷ್ಟಿಸಿದವು ಎಂಬುದನ್ನು ಇವರು ಯೋಚಿಸಿದ್ದಾರೆಯೇ? ಈ ಪ್ರಶ್ನೆಯನ್ನು ಅವರು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನೈಪಾಲ್‌ಗೆ ಆಕೆ ಕೊನೆಯಲ್ಲಿ ಕೇಳಿದ ಪ್ರಶ್ನೆಗೆ ಆತ ನೀಡಿದ ಉತ್ತರ ನಾವೆಲ್ಲ ಊಹಿಸಿದಂತೆಯೇ ಇದೆ. "ಆಫ್ರಿಕಾದ ಭವಿಷ್ಯವೇನು?" ಎಂಬ ಪ್ರಶ್ನೆಗೆ ಥಟ್ಟನೆ ಬಹಳ ಘನವಾದ ವಿವೇಚನೆಯಿಂದ ನೈಪಾಲ್‌ನಿಂದ ಉತ್ತರ ಬಂದಿದೆ. ನೈಪಾಲ್ ಎಂಬ ಆಧುನಿಕ ಕಾಲದ ಕಾನ್ರಾಡ್ ಅವನ ಹಾಗೆ ಸುತ್ತಿ ಬಳಸಿ ಮಾತಾಡುವುದಿಲ್ಲ! ಅವನ ಪ್ರಕಾರ "ಆಫ್ರಿಕಾಕ್ಕೆ ಭವಿಷ್ಯವೇ ಇಲ್ಲ".

ನೈಪಾಲ್‌ನಂಥವರಿಂದ ಆಫ್ರಿಕಾ ಮತ್ತು ಯೂರೋಪಿನ ಸಾಂಸ್ಕೃತಿಕ ಕೊಡುಕೊಳೆಯ ಸಾಧ್ಯತೆಗಳು, ಶತಮಾನಗಳಿಂದ ನಡೆದು ಬಂದ ಹಾಗೆ, ಮತ್ತೆ ಇಲ್ಲವಾಗುತ್ತಿವೆ. ಇಂಥವರ ಸಂಚಿನಿಂದ ಆಫ್ರಿಕನ್ನರ ಮನುಷ್ಯತ್ವವೇ ಕಾಣೆಯಾಗಿಬಿಟ್ಟಿದೆ.

(ಡಯಾನಾ ಬ್ರೈಡನ್ ಅವರ "ಪೋಸ್ಟ್ ಕಲೋನಿಯಲ್ ಕಾನ್ಸೆಪ್ಟ್" ಪುಸ್ತಕದಿಂದ)

□

---

ಎಸ್. ಸಿರಾಜ್ ಅಹಮದ್
ಇಂಗ್ಲಿಷ್ ಉಪನ್ಯಾಸಕ ಸಹ್ಯಾದ್ರಿ ಕಲಾ ಕಾಲೇಜು
ಶಿವಮೊಗ್ಗ-೫೭೭೨೦೩

# ಆಡು ಹಾವೇ ಆಡು

ತಮಿಳು ಮೂಲ : ಪಾಂಬಾಟ್ಟಿ ಸಿದ್ಧರು
ಅನುವಾದ : ಡಾ. ಚೆ. ರಾಮಸ್ವಾಮಿ

ಹರನ ಶಿರದ ಮೇಲಿರುವ ನಾಗರ ಹಾವೇ
ನಂಜು ಚೀಲ ಹೊಂದಿರುವ ನಾಗರ ಹಾವೇ
ಪಾತಾಳ ಲೋಕದಲ್ಲಿ ಅಡಗಿರುವ ಹಾವೇ
ಬಾಗಿ ಬಳುಕಿ ಮೆರೆದಾಡುವ ಹಾವೇ

ಹುತ್ತದಲ್ಲಿ ಸರಿಯುತ ತಲೆಯನೆತ್ತುವ ಹಾವೇ
ಸುಳಿದು ಸುಳಿದು ಪಕ್ಕನೆ ಸರಿವ ಬಣ್ಣದ ಹಾವೇ
ಗೆರೆಯ ದಾಟಲಂಜಿ ನಿಂತ ಸತ್ಯದ ಹಾವೇ
ಹೆಡೆಯನೆತ್ತಿ ಬಳುಕಿ ನಿಂತೇ ನೀನಾಡು ಹಾವೇ

ಕುಂದು ಕೊರತೆಯಿಲ್ಲದ ಶಿವಗೆ ಕುಂಡಲವಾದೆ
ಹೆಸರನಿಟ್ಟು ಕರೆವ ಹಾಗೆ ಕೊಡೆ ನೀನಾದೆ
ಕರಿಯ ಕೊರಳ ದಾಕ್ಷಾಯಿಣಿಗೆ ಕಂಕಣವಾದೆ
ಮುಚ್ಚು ಮರೆಯಿಲ್ಲದೆ ನೀನು ಆಡು ಹಾವೇ

ನೆಲವನೆಲ್ಲ ಹೊತ್ತು ನಿಂತ ಶಕ್ತಿಯ ಹಾವೇ
ನಾರಾಯಣನಿಗೆ ನೀನು ರಂಗು ಹಾಸಿಗೆ

ಪಡೆಯನ್ನೇ ನಡುಗಿಸಿ ಬಿಡುವ ಭೀಕರ ಹಾವೇ
ಕಣ್ಣೆ ಕರ್ಣವಾಗಿರುವ ನಾಗರ ಹಾವೇ

ಸೂರ್ಯ ಚಂದ್ರರನ್ನೇ ನೀನು ನುಂಗಿ ಹಾಕಿದೆ
ಆ ಶಂಕರನ ಶಿರಕ್ಕೆ ನೀನು ಭೂಷಣವಾದೆ
ಮಂತ್ರಕ್ಕೆ ಕಟ್ಟು ಬಿದ್ದು ಮಂಡಲವಾದೆ
ಸುಳಿಸುಳಿದು ಸುಳಿದೇ ನೀನು ಆಡು ಹಾವೇ



---

ಡಾ. ಚೆ. ರಾಮಸ್ವಾಮಿ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಕನ್ನಡ ವಿಭಾಗ
ಚೆನ್ನೈ ಯೂನಿವರ್ಸಿಟಿ, ಮರೀನಾ ಕ್ಯಾಂಪಸ್
ಚೆನ್ನೈ – ೬೦೦ ೦೦೫

# ವಿಧ್ವಂಸ ದೃಶ್ಯ

ತೆಲುಗು ಮೂಲ : **ಜಿ.ಆರ್. ಮಹರ್ಷಿ**

ಅನುವಾದ : **ಬಿ. ಸುಜ್ಞಾನಮೂರ್ತಿ**

ಕೆಲವರು ಬಹಳ ಹಿಂದೆಯೇ ಸತ್ತು ಹೋಗಿರುತ್ತಾರೆ. ಆದರೆ ಅದನ್ನು ತಿಳಿದುಕೊಳ್ಳುವ ಅವಕಾಶವೇ ಅವರಿಗೆ ಬರುವುದಿಲ್ಲ.

* * *

ತನ್ನ ಸಾವು ಸರಿಯಾಗಿ ಯಾವಾಗ ಸಂಭವಿಸಿತೋ ರಾಮಮೂರ್ತಿಗೆ ನೆನಪಾಗುತ್ತಿಲ್ಲ.

ಮದುವೆಯಾದಾಗ ?

ಕೆಲಸಕ್ಕೆ ಸೇರಿದಾಗ ?

ಊಹು ! ನಿಜಕ್ಕೂ ತಾನು ಸತ್ತೇ ಹುಟ್ಟಿದ್ದಾನೇನೋ !

ನಿಜವಾದ ಮನುಷ್ಯ ಎಂದಾದರೂ ಹುಟ್ಟಿದ್ದಾನಾ ?

ಬಾಲ್ಯ....ತಂದೆಯ ಜುಲುಮೆ, ಅಡುಗೆ ಮನೆಯಲ್ಲಿ ಹೊಗೆಯನ್ನು ಕುಡಿದು ಕೆಮ್ಮುವ ತಾಯಿ, ಕಿಟಕಿಯ ಬಳಿ ನಿರ್ಜೀವವಾಗಿ ಕುಳಿತುಕೊಂಡು ಹೊರಜಗತ್ತನ್ನು ನೋಡುವ ಅಕ್ಕ, ಶಾಲೆಯಿಂದ ಮನೆಗೆ ಬಂದ ಕೂಡಲೇ ಅದೊಂದು ಬಗೆಯ ಭಯ ಹಿಂಸೆಯ ವಾಸನೆ!

ತಂದೆ—ದೊಡ್ಡ ಹುಲಿ

ಬೀದಿಯಲ್ಲಿ ಬರುತ್ತಿದ್ದಾಗಲೇ ಪಂಜಾ ಬೀಸುವ ಸದ್ದು.

ಆದರೂ ಆಗಾಗ ಮರವೇರುವುದು, ಈಜಾಡುವುದು, ಸ್ನೇಹಿತರು, ಮುಂಜಾನೆಯ ಆನಂದ.

ನಂತರ ಮೈ ಊದಿಕೊಳ್ಳುವಂತೆ ಒಡೆತಗಳು, ಸಮಾಧಾನಪಡಿಸುವ ಧೈರ್ಯ ಕೂಡಾ ಇಲ್ಲದಿರುವಿಕೆ. ವಯಸ್ಸಿಗೆ ಬಂದ ಅಕ್ಕನ ಪ್ರತಿ ಚಲನೆಯ ಮೇಲೆ ತಂದೆಯ ಹದ್ದಿನ ಕಣ್ಣು. ಆಕೆಯ ವಿದ್ಯಾಭ್ಯಾಸವನ್ನು ಚಿಕ್ಕಂದಿನಲ್ಲೇ ಬಿಡಿಸಿದ್ದಾರೆ. ಹೆಣ್ಣು ಮಕ್ಕಳು ಮನೆಯ ಕೆಲಸ, ಕಾರ್ಯಗಳನ್ನು ಕಲಿತುಕೊಂಡರೆ ಗಂಡನಿಗೆ ಸುಖ.

ನಂತರ ಒಬ್ಬ ಅಮಾಯಕನಿಗೆ ಅಕ್ಕನನ್ನು ಮದುವೆ ಮಾಡಿಕೊಟ್ಟರು. ಈಗ ಆಕೆಗೆ ಹಿಸ್ಟೀರಿಯಾ.

ತಾನು ಏನನ್ನು ಓದಬೇಕೊ ತಂದೆಯೇ ನಿರ್ಧರಿಸಿದ. ಕೊನೆಗೆ ತನ್ನ ಮದುವೆಯನ್ನು ಕೂಡಾ. ಶುಭ್ರವಾಗಿದ್ದ ಕೊಠಡಿಯ ಕುರ್ಚಿಯಲ್ಲಿ ತಾನು, ಪಕ್ಕದಲ್ಲಿ ತಂದೆ, ಮತ್ತಿಬ್ಬರು ಮನೋವೃದ್ಧರು.

ಕಾಫಿಲೋಟ ಹಿಡಿದುಕೊಂಡು ಒಂದು ಹುಡುಗಿ ಬಂದಳು. ಕೆಲವು ಕ್ಷಣ ನೋಟದ ಆಟ. ನಂತರ ವ್ಯವಹಾರ ಲೇವಾದೇವಿಗಳು ಪೂರ್ತಿಯಾದವು.

ಮದುವೆ ಮಾಡಿಬಿಡಿ, ತಳ್ಳಿಬಿಡಿ ಶತಮಾನಗಳ ಕತ್ತಲಿಗೆ !

ಭಾವನೆಗಳ, ಅನುಭೂತಿಗಳ ನಿಮಿತ್ತವಿಲ್ಲದೆ ಎರಡು ಮಾಂಸಖಂಡಗಳು ಒಂದೇ ಸೂರಿನಡಿ ಕಲೆತು ಬದುಕುವುದು, ನಮ್ಮ ವಿವಾಹ ವ್ಯವಸ್ಥೆ ಪವಿತ್ರವಾದುದು—ಗೆದ್ದಲು ತಿಂದ ಗ್ರಂಥಗಳ ಘೋಷ !

ಚಿಕ್ಕಂದಿನಲ್ಲಿ ಅಂದುಕೊಳ್ಳುತ್ತಿದ್ದ—ಬೇಗ ಬೇಗ ಬೆಳದು ದೊಡ್ಡವನಾದರೆ ಯಾರ ಭಯವೂ ಇಲ್ಲದೆ ಸ್ವತಂತ್ರವಾಗಿರಬಹುದೆಂದು. ಆದರೆ ಮನುಷ್ಯ ಬೆಳೆದಷ್ಟೂ ಪರಿಪೂರ್ಣ ಗುಲಾಮ.

"ಆಫಿಸಿಗೆ ಹೋಗಲು ಟೈಮ್ ಆಗಲಿಲ್ವೇ?"

ಹೆಂಡತಿಯ ಕೂಗಿಗೆ ಬೆಚ್ಚಿ ಬಿದ್ದ.

ಆಫೀಸ್—ಲೇಟ್ ರಿಜಿಸ್ಟರ್—ಬಾಸ್‌ನ ಕೂಗ—ಮೆಮೋ—ಕೆಲಸದಿಂದ ತೆಗೆದು ಹಾಕುತ್ತಾರೆಂಬ ಭಯ.

ನೌಕರರು ಯಂತ್ರಗಳಿಗಿಂತಲೂ ಕೀಳು.

ಯಂತ್ರಗಳಿಗೆ ಕೆಲಸ ಹೋಗುತ್ತದೆಂಬ ಭಯವಿರಲ್ಲ.

ಕೋಪ, ಭಯ, ಜುಗುಪ್ಸೆಗಳಿಂದ ಕೂಡಿದ ಒಂದು ಭಾವನೆ ಮೈಯಲ್ಲಿ ಹರಿಯಿತು.

ಈ ಹೊತ್ತು ಆಫೀಸಿನ ಗಾಣದಿಂದ ತಪ್ಪಿಸಿಕೊಳ್ಳಬೇಕು. ಜೇಬನ್ನು ಮುಟ್ಟಿ ನೋಡಿಕೊಂಡ. ಪರವಾಗಿಲ್ಲ ಸ್ವಲ್ಪ ಹಣವಿದೆ. 'ಸೀಸೀಗ ವೀರ' ಎಂದು ಭುಜವನ್ನು ತಟ್ಟಿಕೊಂಡ. ಹೊರಗೆ ಸಣ್ಣಗೆ ಮಳೆಯ ಹನಿಗಳು. ಚಳಿ ತಣ್ಣಗಿದೆ.

"ಕ್ಯಾರಿಯರ್ ಕಟ್ಟುತ್ತಿದ್ದೇನೆ, ಕೊಂಚ ಹೊತ್ತು ಇರಿ."

"ಬೇಡ."

"ಹೋಟೆಲ್ ಊಟ ತಿಂದರೆ ದುಡ್ಡು ಖರ್ಚು" ಆರೋಗ್ಯ ಹಾಳಾಗುತ್ತದೆಂದು ಮಾತ್ರ ಹೇಳಲ್ಲ.

"ಮಳೆ ! ಕೊಡೆ ತೆಗೆದುಕೊಂಡು ಹೋಗ್ರಿ."

"ಬೇಡ. ನೆನೆಯುತ್ತೇನೆ."

"ನಿಮಗೇನು ನೆನೀತೀರಿ. ಆಮೇಲೆ ಕಾಯಿಲೆ ಬಂದರೆ ಸಾಯಬೇಕಾದ್ದು ನಾನೇ. ಮನೆಯ ಬಗ್ಗೆ ಎಂದಾದರೂ ಗಮನ ಕೊಟ್ಟಿದ್ದೀರಾ? ಮಕ್ಕಳು ಸ್ವಲ್ಪವೂ ಓದ್ತಾ ಇಲ್ಲ. ತಂದೆಯಾದವನು ಆಗಾಗ ದಂಡಿಸಬೇಕು."

ತನ್ನ ತಂದೆ ನೆನಪಿಗೆ ಬಂದ—ಮೊಗ್ಗನ್ನು ಒಸಕುವ ತೋಟಮಾಲಿ.

"ಮಳೆ ಜೋರಾಗಿ ಬರ್‍ತಾ ಇಲ್ಲ, ಸಣ್ಣ ಹನಿ. ನಡೆದೇ ಹೋಗ್ರಿ. ರಿಕ್ಷಾದವರು ಬಹಳ ಕಾಸು ಕೇಳ್ತಾರೆ."

ಮದುವೆಯಾದ ಮೊದಲ ದಿನಗಳಲ್ಲಿ—

ಹೆಂಡತಿಯ ತಲೆಯಲ್ಲಿನ ಮಲ್ಲಿಗೆಯನ್ನು ಮೂಸುತ್ತಾ "ಎಷ್ಟು ಚೆನ್ನಾಗಿವೆ !" ಎಂದ.

"ಹೌದು. ಮೊಳ ಎರಡು ರೂಪಾಯಿ, ದಿನವೂ ಒಂದೇ ರೂಪಾಯಿಗೆ ಕೊಡ್ತಿದ್ದರು. ಅನಗತ್ಯವಾಗಿ ತೆಗೆದುಕೊಂಡೆ."

ಮುರಿದುಬಿದ್ದ ಅಲೆಗಳು—ಅಗ್ನಿಸಾಕ್ಷಿಯಾಗಿ ಕನಸುಗಳ ದಹನ. ಹೊರಗೆ ಬಂದ.

ಮಳೆಹನಿಗಳು ಮೈಯನ್ನು ಮುದ್ದಾಡುತ್ತಿವೆ.

ತಲೆ ಮೇಲೆತ್ತಿ, ನಾಲಗೆಯನ್ನು ಹೊರಗಿಟ್ಟು ಆಗಸವನ್ನು ಅಣಕಿಸಿದ. ಟಪ್ಪೆಂದು ಮೂರ್‍ನಾಲ್ಕು ಹನಿಗಳು ಬಿದ್ದವು.

ಬಾಲ್ಯಕ್ಕೆ ರೂಪಾಂತರ !

ರಸ್ತೆಗೆ ಬಂದು ಆಟೋ ನಿಲ್ಲಿಸಿದ.

ಆಫೀಸಿನ ಅಡ್ರೆಸ್ ಹೇಳಿದ.

ಆಟೋ ಚಲಿಸಿತು.

ಬಿಡಿಬಿಡಿಯಾಗಿ ನೆಲವನ್ನು ತಾಕುತ್ತಿರುವ ಹನಿಗಳು, ಪ್ರವಾಹವಾಗಿ ಕೊಚ್ಚೆಯಲ್ಲಿ ಸೇರಿ ಹೋಗುತ್ತಿವೆ—ಮನುಷ್ಯರಂತೆ.

ರಸ್ತೆಯ ಮೇಲೆ ಕೊಡೆಗಳ ಮೆರವಣಿಗೆ.

ಬಟ್ಟೆಗಳಿಲ್ಲದ ಇಬ್ಬರು ಸಣ್ಣ ಮಕ್ಕಳು ಮೈಯನ್ನು ಹನಿಗಳಿಂದ ಮುಚ್ಚಿಕೊಳ್ಳುತ್ತಿದ್ದಾರೆ.

ಮಳೆಗೆ ಬಿಸಿಯೇರಿದ ಚಹಾ ಅಂಗಡಿಗಳು.

ತೊಯ್ದು ತೊಪ್ಪೆಯಾಗುತ್ತಿರುವ ವಾಲ್‌ಪೋಸ್ಟರ್ ಹೀರೋಯಿನ್‌ಗಳ ಅಂಗಾಂಗಗಳು.

ಆಟೋ ನಿಂತಿತು.

ಭಯಾನಕವಾದ ರಾಕ್ಷಸ ಮೃಗದಂತೆ ಕಾಣಿಸಿತು ಆಫೀಸಿನ ಕಟ್ಟಡ !

ಮರೆತುಹೋದ. ಈ ಹೊತ್ತು ತಾನು ಈ ಮೃತದ ಬಾಯಿಗೆ ಹೋಗಬಾರದು. ಮತ್ತೆ ಇಲ್ಲೇತಕ್ಕೆ ಬಂದ? ಗೊತ್ತಿಲ್ಲ.

ಚಿಕ್ಕಂದಿನಲ್ಲಿ ಗಣಿತದ ಪುಸ್ತಕದಲ್ಲಿ ಒಂದು ಲೆಕ್ಕವಿತ್ತು. ಒಂದು ಗೂಟಕ್ಕೆ ಕಟ್ಟಿ ಹಾಕಿದ ಮೇಕೆ ಎಷ್ಟು ಸುತ್ತು ಸುತ್ತುತ್ತದೆ?

ಹೊರಟು ಹೋಗುವಾಗ ತನ್ನ ಕೊಲೀಗ್ ಮೂರ್ತಿ ಬಂದ.

"ಹೋಗ್ತಾ ಇದ್ದೀಯಲ್ಲಾ, ರಜೇನಾ ?"

"ಇಲ್ಲ."

"ಪರ್ಮಿಷನ್ನಾ ?"

"ಉಹು."

"ಬಾಸ್ ಅರಚುತ್ತಾನೇನೋ ?"

"ಅವನ ಮುಖ."

ಇವೆಲ್ಲವನ್ನು ಯಥಾವತ್ತಾಗಿ ಬಾಸ್‌ಗೆ ಹೊತ್ತು ಹಾಕುತ್ತಾನೆಂದು ತನಗೆ ಗೊತ್ತು.

ಟಪಾಲುದಾರನಿಗೆ ಒಳ್ಳೆಯ ಬಾರ.

ಎಲ್ಲಿಗೆ ಹೋಗುವುದು ? ಗೊತ್ತಿಲ್ಲ.

ಮನಸ್ಸು ಗೊಂದಲದಿಂದ ಕೂಡಿದೆ.

ಚಿಕ್ಕಂದಿನಲ್ಲಿ ಸತ್ತುಹೋದ ತನ್ನ ಪುಟ್ಟ ನಾಯಿಮರಿ ನೆನಪಾಯಿತು. ಮಳೆ ಬಂದರೆ ಒಲೆಯಲ್ಲಿ ಬೆಂಕಿ ಹೊತ್ತಿಸಲು ಅಮ್ಮ ಪಡುವ ಸಂಕಟ....ಹೊಗೆ, ಕಣ್ಣೀರು, ಕೆಮ್ಮು, ಅಡಿಗೆ ಚೆನ್ನಾಗಿಲ್ಲವೆಂದು ಅಪ್ಪ ಬಯ್ಯುವ ಬಯ್ಗುಳೆಲ್ಲ ನೆನಪಿಗೆ ಬಂದವು.

ಒಡಲಲ್ಲಿ ಏನೋ ಸುಟ್ಟುಹೋಗುತ್ತಿದೆ. ಅದನ್ನು ಆರಿಸುವ ಶಕ್ತಿ ಮಳೆಗಿಲ್ಲ.

ಮಳೆ ಜೋರಾಗುತ್ತಿದೆ.

ಎಲ್ಲಿಯಾದರೂ ಮರಳು ಕಾಣಿಸಿದರೆ ಚೆನ್ನಾಗಿತ್ತು. ಮನೆ ಕಟ್ಟಬಹುದು.

ನೀರನ್ನು ಸಿಡಿಸುತ್ತಾ ಒಂದು ಮಾರುತಿ ಕಾರು ಬಂದು ನಿಂತಿತು.

ಬಿಳಿಯ ಕಾರಿನ ಮೇಲೆ ಜಾರಿ ಹೋಗುತ್ತಿರುವ ಮಳೆ ಗಟ್ಟಿಯಾಗಿ ಕಾರನ್ನು ತಾಕುವುದಕ್ಕೆ ಹನಿಗಳು ಕೂಡಾ ಭಯಪಡುತ್ತಾ ಇವೆ.

ಬಾಗಿಲು ತೆರೆದುಕೊಂಡಿತು.

"ಹಲೋ ರಾಮ್, ಎಲ್ಲಿಗೆ ?"

ಜಾನ್, ತನ್ನ ಬಾಲ್ಯದ ಗೆಳೆಯ.

"ಗೊತ್ತಿಲ್ಲ."

"ಹಾಗಾದರೆ ಕಾರ್ ಹತ್ತು." ಸಂಕೋಚದಿಂದ ಹತ್ತಿದ.

ಕಾರು ಚಲಿಸಿತು.

"ಹೇಗಿದ್ದೀಯ ?" ಪ್ರಶ್ನಿಸಿದ ಜಾನ್.

ನಿರ್ಲಿಪ್ತವಾಗಿ ನಕ್ಕ.

ಹಿಂದಿನಿಂದ ಗುರ್ರೆಂಬ ಸದ್ದು ಕೇಳಿಸಿತು. ತಿರುಗಿ ನೋಡಿದ.

ಭಯಗೊಳಿಸುವ ನಾಯಿ ನಾಲಗೆ ಚಾಚಿ ನೋಡುತ್ತಾ ಇದೆ.

"ಭಯ ಪಡಬೇಡ ! ಏನೂ ಮಾಡಲ್ಲ. ಮೊನ್ನೆಯೇ ಕೊಂಡುಕೊಂಡೆ. ಯಾವ ನಾಯಿಯನ್ನೂ ಹೆಚ್ಚುಕಾಲ ನಾನು ಇಟ್ಟುಕೊಳ್ಳಲ್ಲ. ಅವುಗಳ ವಿಶ್ವಾಸದ ಮೇಲೆ ನನಗೆ ನಂಬುಗೆಯಿಲ್ಲ. ಎರಡು ದಿನ ಮಾಂಸ ಹಾಕದಿದ್ದರೆ ತಿಳಿಯುತ್ತದೆ ನಾಯಿಯ ಪ್ರಾಮಾಣಿಕತೆ. ಪ್ರಪಂಚದಲ್ಲಿ ಯಾವುದನ್ನೂ ನಂಬದಿರುವುದು ಒಂದು ಕಲೆ."

ವಿಚಿತ್ರ ವ್ಯಕ್ತಿ ಜಾನ್ !

ಶಾಲೆಯಲ್ಲಿ ಹರಿದ ಬಟ್ಟೆಯನ್ನು ತೊಟ್ಟು ಹಿಂದೆ ಕೂರುತ್ತಿದ್ದ. ಚಿಕ್ಕಂದಿನಲ್ಲಿ ಜಾನ್ ಹತ್ತಿರ ಒಂದು ಬಗೆಯ ಕೊಳಕು ವಾಸನೆ ಬರುತ್ತಿತ್ತು. ಈಗ ಹಣದ ವಾಸನೆ. ಅಷ್ಟೇನೂ ವ್ಯತ್ಯಾಸವಿಲ್ಲ.

"ಈ ನಾಯಿಯ ಹೆಸರೇನು ಗೊತ್ತಾ ? ಬ್ರೂಟಸ್, ವಿದ್ರೋಹಿಯ ಹೆಸರು. ಭಾರಿ ವೈರುಧ್ಯ ಅಲ್ವಾ ?" ಫಕ್ಕನೆ ನಕ್ಕ.

ಕಾರಿನ ಗಾಜಿನ ಮೇಲೆ ಸೊಗಸಾಗಿ ಜಾರುತ್ತಿರುವ ಮಳೆ ನೀರನ್ನು ವೈಫರ್ಸ್ ಒರೆಸುತ್ತಿವೆ.

ಕಣ್ಣಿಗೆ ಕೂಡಾ ವೈಫರ್ಸ್ ಇದ್ದರೆ ಚೆನ್ನಾಗಿತ್ತು. ಕಣ್ಣೀರು ಒರೆಸುವುದಕ್ಕೆ.

"ವಾತಾವರಣದಲ್ಲಿ ಚಿಯರ್ಸ್ ಎನ್ನಬೇಕಾದ್ದೇ" ಎಂದ ಜಾನ್.

ಒಂದು ಬಾರ್ ಮುಂದೆ ಕಾರು ನಿಂತಿತು.

ಇಬ್ಬರೂ ಇಳಿದರು.

ಮಳೆ ಜೋರಾಗುತ್ತಿದೆ. ಆಗಸದೆಡೆ ಬೇಸರದಿಂದ ನೋಡಿದ ಜಾನ್. "ಮಳೆಯಲ್ಲಿಯೇ ನನ್ನ ತಾಯಿಯ ಹೆಣವನ್ನು ಹೂತಿದ್ದು. ಯಾರೂ ನೆರವಿಗೆ ಬರಲಿಲ್ಲ. ನನ್ನ ತಾಯಿಯ ಚರಿತ್ರೆ ಅಷ್ಟು ಒಳ್ಳೆಯದಲ್ಲವಲ್ಲ."

"ನಾನೂ, ಒಬ್ಬ ಮುದುಕ ಇಬ್ಬರೇ ! ಎತ್ತಿನ ಗಾಡಿಯ ಮೇಲೆ ಹೆಣವನ್ನು ತೆಗೆದುಕೊಂಡು ಹೋದೆವು. ಮುದುಕನೇ ಕುಳಿಯನ್ನು ತೆಗೆದ. ಹೆಣವನ್ನು ಕುಳಿಗೆ ಇಳಿಸುವುದಕ್ಕೆ ಇಬ್ಬರೂ ಬಹಳ ಕಷ್ಟಪಟ್ಟೆವು."

"ನಮ್ಮಮ್ಮ ಈಗೇನಾದರೂ ಸತ್ತಿದ್ದರೆ, ಊರೆಲ್ಲಾ ಬಂದು ಶೋಕವನ್ನಿಡುತ್ತಿದ್ದರು."

"ಬಾಸ್ಟರ್ಡ್ಸ್—ಮನುಷ್ಯರೆಂದರೆ ನನಗೆ ದ್ವೇಷ.

ಜಾನ್ ಮುಖದ ಮೇಲೆ ಒಂದು ದುಃಖದ ಚಲನೆ.

ಬಾರಿನೊಳಕ್ಕೆ ಹೆಜ್ಜೆಯಿಟ್ಟರು.

ಒಬ್ಬ ಯುವಕ ಎದುರು ಬಂದು "ಸಾರ್ ! ಇಷ್ಟು ಬೆಳಗ್ಗೆಯೇ ಸರ್ವ್ ಮಾಡಲ್ಲ" ಎಂದು ವಿನಯದಿಂದ ಹೇಳಿದ.

"ನಿಮ್ಮ ಓನರ್ ಹೆಸರೇನು ?" ಶಾಂತವಾಗಿ ಕೇಳಿದ ಜಾನ್.

"ವಿಕ್ಟರ್ ಸಾಬ್ ಸಾರ್ !"

"ವಿಕ್ಟರ್ ಅಲ್ಲ, ಜಾನ್ ವಿಕ್ಟರ್....ಅಂದ್ರೆ ನಾನೇ."

ಯುವಕನ ಮುಖ ಬಿಳಿಚಿಕೊಂಡಿತು.

"ಕ್ಷಮಿಸಿ ಸಾರ್ ! ನಾನು ಹೊಸದಾಗಿ ಸೇರಿದ್ದೇನೆ. ನಿಮ್ಮನ್ನು ಯಾವತ್ತೂ ನೋಡಿಲ್ಲ" ನಡುಗುತ್ತಾ ಹೇಳಿದ.

ಭಯ, ಅಭದ್ರತೆಯ ಭಾವನೆ.

ಜೇಬಿನಿಂದ ನೂರು ರೂಪಾಯಿಯ ನೋಟು ತೆಗೆದ ಜಾನ್.

"ಕೆಲಸವನ್ನು ಸರಿಯಾಗಿ ಮಾಡುತ್ತಿರುವುದಕ್ಕೆ ಇದು ನಿನಗೆ ಬಕ್ಷೀಸು. ಕಾರಿನಲ್ಲಿ ನನ್ನ ನಾಯಿ ಇದೆ. ಅದನ್ನು ಸ್ವಲ್ಪ ಎಂಟರ್‌ಟೈನ್ ಮಾಡು. ಹೆದರಬೇಡ ಅದು ಕಚ್ಚಲ್ಲ. ಮನುಷ್ಯರನ್ನು ಸಾಯಿಸುವುದು ಮಾತ್ರವೇ ಅದಕ್ಕೆ ಗೊತ್ತು."

ಆ ಯುವಕನ ಮುಖದ ಭಾವನೆಗಳನ್ನು ಗಮನಿಸದೆ ಮುಂದಕ್ಕೆ ಚಲಿಸಿದ ಜಾನ್. ಕ್ಷಣದಲ್ಲಿ ಮೇಜಿನ ಮೇಲೆ ಸೀಸೆಗಳು, ಲೋಟಗಳು.

"ಮನುಷ್ಯರನ್ನು ದಿಗ್ಭ್ರಾಂತಿಗೊಳಿಸುವುದು ನನ್ನ ಹಾಬಿ !"

ವಿಸ್ಕಿಯನ್ನು ಲೋಟಕ್ಕೆ ಬಗ್ಗಿಸಿದ ಜಾನ್. "ಚೀರ್ಸ್".

ಕೊರಳೊಳಕ್ಕೆ ಜಾರಿದ ವಿಸ್ಕಿ ಹುಮ್ಮಸ್ಸಿನ ತೆರೆಯನ್ನು ಹೆಚ್ಚಿಸುತ್ತಿದೆ. ಘಾಟಾದ ಸಿಗರೇಟ್ ಹೊಗೆ. ಸ್ಟೀರಿಯೋದಿಂದ ಮತ್ತಾಗಿ ಕೇಳಿಸುತ್ತಿರುವ ಸಂಗೀತ. ಕೊಂಚ ಕೊಂಚವಾಗಿ ಅರ್ಪಿಸಿಕೊಳ್ಳುತ್ತಿರುವ ವಿಸ್ಕಿ ಬಾಟಲ್, ರಕ್ತನಾಳಗಳನ್ನು ಶ್ರುತಿಗೊಳಿಸುತ್ತಿರುವ ನಿಶೆ.

ವಿಸ್ಕಿಯಲ್ಲಿ ಸೋಡಾ ಒಂದಾಗಿ ಆನಂದದಿಂದ ಉಕ್ಕಿ ಹೊರಳುತ್ತಾ ಇದೆ.

"ನಿಜಕ್ಕೂ ಮನುಷ್ಯರೇತಕ್ಕೆ ಬದುಕುತ್ತಾರೆ ?" ಪ್ರಶ್ನಿಸಿದ ಜಾನ್.

ಚಿಕ್ಕಂದಿನಲ್ಲಿ ಎಲ್ಲಕ್ಕೂ ಮುಖ್ಯ ಹಣವೇ ಎಂದುಕೊಳ್ಳುತ್ತಿದ್ದೆ. ಎಲ್ಲರೂ ಅದಕ್ಕಾಗಿಯೇ ಬದುಕುತ್ತಿದ್ದಾರೆಂದು ನಂಬಿಕೊಂಡಿದ್ದೆ. ಈಗ ನನ್ನಲ್ಲಿ ಬೇಕಾದಷ್ಟು ದುಡ್ಡಿದೆ. ಒಂದು ದಿನವೂ ನೆಮ್ಮದಿಯಿಂದ ನಿದ್ದೆ ಹೋಗಿದ್ದೀನಾ ? ದುರದೃಷ್ಟ ಎಷ್ಟು ಕುಡಿದರೂ ನಿಶೆಯಾಗುವುದಿಲ್ಲ. ಎಷ್ಟು ದುಃಖವಾದರೂ ಕಣ್ಣೀರು ಬರುವುದಿಲ್ಲ. ನಿಜಕ್ಕೂ ನಾನು ಕಣ್ಣೀರೇ ಇಲ್ಲದೆ ಹುಟ್ಟಿದ್ದೀನೇನೋ! ತನಗೆ ತಾನೇ ಮಾತಾಡಿಕೊಳ್ಳುತ್ತಿದ್ದಾನೆ ಜಾನ್.

ಬಹಳ ದಿನಗಳಿಂದ ಸೇರಿಕೊಂಡ ದುಃಖಕ್ಕೆ ಬಿಡುಗಡೆ ಬೇಕಾಗಿ ಬಂದಿದೆ. ರಾಮಮೂರ್ತಿ ಒಂದು ಮಾಧ್ಯಮ ಅಷ್ಟೇ !

"ಅಮ್ಮ ಮುಸುರೆ ಕೆಲಸ ಮಾಡುತ್ತಿದ್ದರು. ರಾತ್ರಿ ಹೊತ್ತು ಗುಡಿಸಲಿಗೆ ಗಂಡಸರು ಬರುತ್ತಿದ್ದರು. ನಾನು ಹೊರಗೆ ಕಾವಲು. ಚಳಿಯಲ್ಲಿ ಒಬ್ಬನೇ ನಡುಗುತ್ತಾ ಮಲಗುತ್ತಿದ್ದೆ.

ನಗುವು, ಮುಲುಕಾಟ ಕಿವಿಯನ್ನು ಮುಚ್ಚಿಕೊಂಡರೂ ಕೇಳಿಸುತ್ತಿದ್ದವು. ಗಂಡಸರು ಯಾವಾಗ ಹೋಗುತ್ತಾರೋ ಎಂದು ಜಾಗರಣೆ. ಅವರು ಹೋದರೆ ಮನೆಯಲ್ಲಿ ಮಲಗಬಹುದೆಂಬ ಆಸೆ. ಅವರು ತಂದ ಕುರುಕು ತಿಂಡಿಗಳಲ್ಲಿ ಉಳಿದದ್ದನ್ನು ತಿನ್ನಬಹುದೆಂಬ ಹಂಬಲ."

ವಿಸ್ಕಿಯಲ್ಲಿ ಮಂಜುಗಡ್ಡೆ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ ಇದೆ.

"ಅಮ್ಮನಿಗೆ ಕಾಯಿಲೆಯಾಯಿತು. ಅದೇನು ರೋಗವೋ, ಒಂದೇ ದುರ್ವಾಸನೆ. ಕೊಂಚಕೊಂಚವಾಗಿ ಸತ್ತು ಹೋದಳು. ಅಳು ಬಂತು. ಸಂತೋಷ ಕೂಡಾ. ದುರ್ವಾಸನೆ ತಪ್ಪಿದ್ದಕ್ಕೆ ! ನಗರಕ್ಕೆ ಬಂದು ಬಿದ್ದೆ. ಓಡಾಡಿಸಿ ಒಡೆಯಿತು. ನಾಯಿಗಳಿಗಿರುವಷ್ಟು ಭದ್ರತೆ ಕೂಡಾ ಮನುಷ್ಯರಿಗೆ ಇಲ್ಲಿಲ್ಲ."

"ಬಲವಿದ್ದರೇನೇ ಬದುಕುತ್ತೇವೆ. ಹಾಗೆಯೇ ಬದುಕಿದೆ. ಒಂದು ಸಾರಿ ಹಿಂದಿರುಗಿ ನೋಡಿಕೊಂಡರೆ ಇದೆಲ್ಲಾ ಯಾತಕ್ಕಾಗಿ ?"

"ಎಲ್ಲಿಗಾದರೂ ಓಡಿಹೋಗಬೇಕೆನಿಸುತ್ತದೆ."

"ಮನುಷ್ಯ ತನ್ನೊಳಕ್ಕೆ ತಾನು ಬಿಟ್ಟರೆ ಬೇರೆಲ್ಲಿಗೆ ಓಡಿಹೋಗಬಲ್ಲ? ನೆನಪುಗಳ ಬೇಟೆನಾಯಿಗಳು ನಿರಂತರವಾಗಿ ಅಟ್ಟುತ್ತಲೇ ಇರುತ್ತವೆ."

ಬಾಗಿಲ ಬಳಿ ಚಿಕ್ಕ ಸದ್ದು.

ಜಾನ್ ಒಮ್ಮೆಲೇ ಅಲರ್ಟಾದ. ಜೇಬಿನಲ್ಲಿದ್ದ ರಿವಾಲ್ವಾರ್ ಮೇಲೆ ಕೈ ಹಾಕಿದ.

ಹುರಿಗೊಂಡ ವ್ಯಕ್ತಿಯೊಬ್ಬ ಒಳಗೆ ಬಂದ.

"ನಮಸ್ಕಾರ ಜಾನ್ ಸಾಬ್ !"

"ಬಾ ಮಸ್ತಾನ್" ಜಾನ್ ಮುಖದಲ್ಲಿ ಕಿರುನಗೆ.

ಮಸ್ತಾನ್ ಅನುಮಾನದಿಂದ ರಾಮಮೂರ್ತಿಯ ಕಡೆ ನೋಡಿದ.

"ನಮ್ಮವನೇ ಭಯ ಬೇಡ. ಹಾನಿಗೊಳಿಸಲು ಯೋಚಿಸುವುದಕ್ಕೂ ಸ್ವಲ್ಪ ಧೈರ್ಯ ಬೇಕು."

"ಹೋದ ಕೆಲಸವೇನಾಯಿತು ?" ಒಂದು ಲೋಟದಲ್ಲಿ ವಿಸ್ಕಿ ಹುಯ್ದು ಮಸ್ತಾನ್ ಮುಂದಿಟ್ಟ ಜಾನ್.

"ಕಷ್ಟ ಸಾರ್ ! ಅವನು ಬಗ್ಗುತ್ತಿಲ್ಲ" ಹೇಳಿದ ಮಸ್ತಾನ್. ಜಾನ್ ಮುಖದಲ್ಲಿ ಅಸಹನೆ.

"ಪ್ರತಿಯೊಬ್ಬ ಮನುಷ್ಯನಿಗೆ ಒಂದು ರೇಟಿರುತ್ತದೆ ಮಸ್ತಾನ್" ಎಂದ.

"ಎಲ್ಲ ರೀತಿ ಪ್ರಯತ್ನಿಸಿದೆ ಪ್ರಯೋಜನವಿಲ್ಲ."

ಜಾನ್ ಸ್ವಲ್ಪ ಹೊತ್ತು ಮೌನವಾಗಿದ್ದ.

ಸೋಡಾ ವಿಸ್ಕಿಯ ಬಣ್ಣವನ್ನು ಬದಲಾಯಿಸುತ್ತಾ ಇದೆ.

"ಅವನಿಗೆ ಮಕ್ಕಳೆಷ್ಟು ಮಂದಿ ?" ಕೇಳಿದ ಜಾನ್.

"ಇಬ್ಬರು" ಹೇಳಿದ ಮಸ್ತಾನ್.

"ಪಾಪ ! ನಾಳೆಯಿಂದ ತುದೆಯಿಲ್ಲದ ಮಕ್ಕಳು "ಜಾನ್ ಮುಖದಲ್ಲಿ ಯಾವ ಭಾವನೆಯೂ ಇಲ್ಲ.

ಅರ್ಥವಾದಂತೆ ನೋಡಿದ ಮಸ್ತಾನ್.

"ಆಲ್ ದಿ ಬೆಸ್ಟ್" ಎಂದ ಜಾನ್.

ಸ್ಟೀರಿಯೊನಲ್ಲಿ ಮ್ಯೂಜಿಕ್ ನಿಂತು ಹೋಯಿತು.

"ಸುಖಪಡುವುದಕ್ಕೆ ಅದೃಷ್ಟ ಇರಬೇಕು. ಸಾಯಿಸಬೇಕೆಂದರೆ ನನಗೇನಾದರೂ ಮೋಜೇ? ನೀತಿ ನಿಜಾಯಿತಿ ಎನ್ನುತ್ತಾ ಕೂಗಿದ.... ಅಸಮರ್ಥರ ನುಡಿಗಟ್ಟು."

"ಜೀವ ಬಹಳ ಬೆಲೆಯುಳ್ಳದ್ದು ಜಾನ್ ! ಒಬ್ಬ ಮನುಷ್ಯನ ಸುತ್ತಲೂ ಎಷ್ಟೋ ಬದುಕು, ಅನುಬಂಧಗಳು, ಸ್ನೇಹ, ಆತ್ಮೀಯತೆಗಳಿರುತ್ತವೆ. ಇವನ್ನು ನಿನಗೆ ಹೇಳಿದರೂ ಅರ್ಥವಾಗಲ್ಲ" ಎಂದ ರಾಮಮೂರ್ತಿ.

ನಿಜವೇ ! ನನಗೆ ಸೆಂಟಿಮೆಂಟ್ಸ್ ಇಲ್ಲ. ಅವುಗಳೊಂದಿಗೆ ಜೀವನವನ್ನು ಕೊಂದುಕೊಳ್ಳುವುದಕ್ಕೆ ನನ್ನಿಂದ ಆಗಲ್ಲ. ನಾವು ಸುಖಪಡುವುದಕ್ಕಾಗಿಯೇ ಈ ಲೋಕಕ್ಕೆ ಬಂದಿದ್ದೇವೆ. ಸುಖಪಡಬೇಕು ಅಷ್ಟೇ. ತರ್ಕ ಬೇಡ. ನಮ್ಮ ಸುಖಕ್ಕೆ ಯಾರಾದರೂ ಅಡ್ಡ ಬಂದರೆ ತಲೆ ತೆಗೆಯಬೇಕಷ್ಟೇ."

ರಾಮಮೂರ್ತಿ ಎದ್ದ. "ಬರ್ತೀನಿ ಜಾನ್" ಎಂದು ಹೊರಡುತ್ತಾ "ಒಂದು ಮಾತು" ಎಂದ.

"ಏನು ?" ಕೇಳಿದ ಜಾನ್.

"ಬಾಳಿನಲ್ಲಿ ಎಂತಹ ಮೌಲ್ಯಗಳೂ ಇಲ್ಲದ ನೀನೊಬ್ಬ ಹುಳ. ನೀನೆಂದರೆ ನನಗೆ ಅಸಹ್ಯ, ಗುಡ್‌ಬೈ."

"ನಿಜವೇ ! ನಾನೊಂದು ಹುಳುವೇ ! ಆದರೆ ಹುಳಕ್ಕೂ ಕೂಡಾ ಎಷ್ಟೋ ಅಷ್ಟು ಅಸ್ತಿತ್ವ ಇರುತ್ತದೆ. ಆದರೆ ನಿನ್ನ ಸಂಗತಿಯೇನು ? ನನ್ನಂತವರು ಜೀವನದಲ್ಲಿ ಗೆಲುವನ್ನು ಸಾಧಿಸುತ್ತಾ ಹೋಗುತ್ತಾರೆ. ಗೆದ್ದವರ ಮೇಲೆ ಆರೋಪಗಳನ್ನು ಮಾಡುತ್ತಾ ನಿನ್ನಂತವರು ಬದುಕನ್ನು ಎಳೆಯುತ್ತಾ ಇರುತ್ತಾರೆ. ನೀನೆಂದರೆ ನನಗೆ ಸಹಾನುಭೂತಿ."

ಬಾರ್‌ನಿಂದ ಹೊರಗೆ ಬಂದ ರಾಮಮೂರ್ತಿ.

ಮಳೆ ಕೊಂಚ ಕಡಿಮೆಯಾಯಿತು.

ರಸ್ತೆಯ ಮೇಲೆ ನೀರು ಯದ್ವಾತದ್ವಾ ಹರಿಯುತ್ತಿದೆ.

ನೀರಿನಲ್ಲಿ ನಡೆಯುತ್ತಾ ಕೆಳಕ್ಕೆ ನೋಡಿದ. ತಾನು ನೀರಿನ ಮೇಲೆ ತೇಲುತ್ತಾ ಮುಂದಕ್ಕೆ ಹೋಗುತ್ತಿರುವ ಫೀಲಿಂಗ್.

ಒಬ್ಬ ಹುಚ್ಚ ಮಳೆಯ ನೀರನ್ನು ತೀರ್ಥದಂತೆ ಕುಡಿಯುತ್ತಾ ನಗುತ್ತಿದ್ದಾನೆ.

ಕೊಡೆಯಲ್ಲಿ ತಲೆಯನ್ನು ಬಚ್ಚಿಟ್ಟುಕೊಂಡು ಜನ ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದಾರೆ.

ಒಬ್ಬ ಹತ್ತಿರ ಬಂದು "ದೇವರಿಗೆ ಗುಡಿ ಕಟ್ಟುತ್ತಿದ್ದೇವೆ ಚಂದಾ....ಎನ್ನುತ್ತ ಕೈಯಲ್ಲಿನ ಡಬ್ಬಿಯನ್ನು ಮುಂದಿಟ್ಟ.

ರಾಮಮೂರ್ತಿಗೆ ನಗು ಬಂತು.

"ದೇವರು ಸತ್ತು ಹೋದನೆಂಬ ವಿಷಯ ನಿನಗೆ ಗೊತ್ತಿಲ್ವಾ?" ಎಂದ. ಮನಸಿನಲ್ಲಿ 'ಥ್ಯಾಂಕ್ಯೂ ನೀಷೆ' ಅಂದುಕೊಂಡ.

ಇದನ್ನು ಕೇಳಿ ಹುಚ್ಚ ರಾಮಮೂರ್ತಿಯ ಬಳಿ ಬಂದು "ಮನುಷ್ಯ ಎಂದೋ ಸತ್ತು ಹೋದನೆಂಬ ವಿಷಯ ನಿನಗೆ ಗೊತ್ತಿಲ್ವಾ?" ಎಂದು ದೊಡ್ಡದಾಗಿ ನಕ್ಕು ಹೊರಟು ಹೋಗುತ್ತ ನಿಂತ.

ರಾಮಮೂರ್ತಿಯ ಕಿವಿಯ ಹತ್ತಿರ ಬಂದು "ಇದು ರಹಸ್ಯ ! ಈ ನಾಲ್ಕು ರಸ್ತೆಯ ಕೂಟದಲ್ಲಿ ನಿಂತು ಮನುಷ್ಯನಿಗಾಗಿ ವರುಷಗಟ್ಟಲೆ ಹುಡುಕುತ್ತಿದ್ದೇನೆ ಆದರೆ ಕಾಣಲಿಲ್ಲ. ಪುನರುತ್ಥಾನ ಒಂದು ಕಟ್ಟುಕಥೆ" ಎಂದ.

*[ಕಳೆದು ಹೋಗುತ್ತಿರುವ ಮನುಷ್ಯತ್ವವನ್ನು ವಿಭಿನ್ನ ಶೈಲಿಯಲ್ಲಿ ಅನಾವರಣಗೊಳಿಸಿದ ಕತೆಯಿದು. ಲೇಖಕ ಜಿ.ಆರ್. ಮಹರ್ಷಿಯ ಮೊದಲ ಕತೆ 'ಸೂರಿಗಾಡು' ೧೯೮೭ರಲ್ಲಿ ಪ್ರಕಟವಾಯಿತು. ಇದುವರೆಗೆ ಸುಮಾರು ೨೦ ಕತೆಗಳನ್ನು ಬರೆದಿದ್ದಾರೆ. ರಾಯಲಸೀಮೆಯಿಂದ ಕೇಳಿ ಬರುತ್ತಿರುವ ವಿಶೇಷ ಧ್ವನಿ.]*

□

---

ಬಿ. ಸುಜ್ಞಾನಮೂರ್ತಿ
ಸಹಾಯಕ ನಿರ್ದೇಶಕ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಕಳೆದು ಹೋದ ಸ್ನೇಹಿತೆ

ಕೆರೆಬ್ಬಿಯನ್ ಮೂಲ : **ಲೋರ್ನಾಗೂಡಿಸನ್**
ಅನುವಾದ : **ಕೃಷ್ಣಮೂರ್ತಿ ಚಂದರ್**

ಮೇಲು ಮೈಯಲ್ಲಿ ನನ್ನ ಸ್ನೇಹಿತೆ
ಕಪ್ಪು
ಆಫ್ರಿಕಾದ್ದೇ ಕಣ್ಣು, ಕಿವಿ, ತುಟಿಗಳು
ನಡುರಾತ್ರಿ ಕತ್ತಲ ನವಿರ ಕಪ್ಪು ಆಕೆ
ಬರಿ ರ್‍ಯಾಪ್-ಬ್ರೌನ್ ಹಾಡು ಮಾತಿಗಲ್ಲ ಆಕೆಯ ಸೌಂದರ್ಯ

ಈ ದೇಶ-ಪ್ರಾಂತ್ಯ ಬಿಟ್ಟು ಹಾರಿದಳು ಆಕೆ
ಬಿಸಿಲು ಮೈಯ ಕಪ್ಪಾಗಿಸುವುದಂತೆ
ಮೈಬಣ್ಣ
ಬಿಳಿ ಮಂಜುಗಡ್ಡೆಯಂತಾಗಬೇಕಂತೆ

ತಲೆಕೂದಲ ಬಾಚಿ, ಬಾಚಿ, ಶಿಸ್ತಾಗಿಸಿ
ಬಸವಳಿಸಿ, ನಿಸ್ತೇಜ ನೇರವಾಗಿಸಿ

ಪ್ರತಿನಿತ್ಯ ರಾತ್ರಿಯಲಿ ಬಿಳಿಯ ಹೊದಿಕೆ ಹೊದ್ದಾಕೆ
ಬಿಳಿಯಾಗಿಸುವ ಕ್ರೀಮು, ಲೋಶನ್‌ಗಾಗಿ
ದೇವರಿಗೆ ವಂದನೆ ಸಲ್ಲಿಸಿ;

ಆಕೆಯ ಪ್ರಿಯತಮ ಬಿಳಿಯ
ಅವರೇ ನಮಗೆ ಸರಿ ತಿಳಿಯ
ದಿನೇ ದಿನೇ ನನ್ನ ಸ್ನೇಹಿತೆ ಬೆಳಗಾಗುತಿಹಳು

ಆಪ್ಯದ ಕಿರೀಟ ಹೊತ್ತು ಧರಿಸಿ ನಿಂತ ಎತ್ತರದ
ದುಷ್ಟ ರಾಜಕುವರರ ನಾ ಮೆಚ್ಚಿದರೆ
ಆಕೆಗೆ ನನ್ನತ್ರ ಕರುಣೆಯ ಮುಗುಳ್ನಗೆ
ಮಂಜಿನಗಡ್ಡೆಯ ಮೇಲೆ ಜಾರಿ ಸಾಗುವಾಟದ ಶಿಫಾರಸ್ಸು
ಮತ್ತಿವಳ ಪ್ರೇಮಿ ತಂದಿತ್ತ ಮುತ್ತಿನ ಜಾಹೀರಾತು
ಫಟ್ಟೋಗಳ ಪಾಚಿ, ಪಚ್ಚೆ ಹಸಿರು ಬಣ್ಣ
ಆಕೆ ತೊಡುವುದೇ ಇಲ್ಲ; ಕಪ್ಪು ಜನರ
ಕೆನ್ನಲಿ ಕೆಂಪು ಹಿಂದೆಯೇ ಬಿಟ್ಟು ನಡೆದು ಬಿಟ್ಟಳಲ್ಲ.

ಕಂಡು, ಕೇಳಿಲ್ಲದ ವಿಚಿತ್ರ
ಭೂಖಂಡಗಳ ನಡು
ನನ್ನ ಸ್ನೇಹಿತಳ ಕಳೆದುಕೊಂಡೆ

ಚಿರಶಾಂತಿ, ಸೂರ್ಯನ ಕಾಂತಿಯ
ನಿಜವಾದ ಪ್ರೀತಿ
ನನಗೆ ದಕ್ಕುವುದಾದರೆ
ಅದು ಈ ದ್ವೀಪಗಳಲ್ಲಷ್ಟೇ (೧೯೮೦)



ಡಾ. ಕೃಷ್ಣಮೂರ್ತಿ ಚಂದರ್
ಪ್ರಾಧ್ಯಾಪಕರು, ಇಂಗ್ಲಿಷ್ ವಿಭಾಗ
ಮಾನಸ ಗಂಗೋತ್ರಿ
ಮೈಸೂರು–೬

# ಹಸಿರು ಬೊಟ್ಟು

ಹಿಂದಿ ಮೂಲ : **ಮೃದುಲಾ ಗರ್ಗ್**
ಅನುವಾದ : **ಡಾ. ವಿಮಲ**

ಕಣ್ಣು ತೆರೆದೊಡನೇ ಅಭ್ಯಾಸದಂತೆ ಮೊಟ್ಟ ಮೊದಲಿಗೆ ತನ್ನ ಕೈಮೇಲೆ ಕಟ್ಟಿದ್ದ ಗಡಿಯಾರದ ಕಡೆಗೆ ದೃಷ್ಟಿ ಹೋಯಿತು—ಕೇವಲ ಆರು ಮೂವತ್ತು. ಅವಳು ಮತ್ತೆ ಕಣ್ಣು ಗಟ್ಟಿಯಾಗಿ ಮುಚ್ಚಿಕೊಂಡು ಈಗ ಮಂಚ ಶಬ್ದ ಮಾಡುತ್ತೆ ಮತ್ತು 'ಏನು ಏಳುವುದಿಲ್ಲವೆ' ಎಂದು ಧ್ವನಿ ಕೇಳುತ್ತೆ ಎಂದು ಕಾಯತೊಡಗಿದಳು. ಆದರೆ ಕೆಲಹೊತ್ತು ನಿಃಶಬ್ದವಾಗೇ ಇದ್ದುದರಿಂದ ಕಣ್ಣು ಬಿಟ್ಟು ನೋಡಿದಳು. ಹಾಸಿಗೆಯ ಮೇಲೆ ಅವಳೊಬ್ಬಳೇ ಇದ್ದಳು. ಓಹ್, ನೆನ್ನೆ ರಾತ್ರಿಯಷ್ಟೇ ರಾಜನ್ ದಿಲ್ಲಿಗೆ ಹೋಗಿದ್ದ, ನೆನಪಿರಲಿಲ್ಲ. ಅಂದ ಮೇಲೆ ಏಳುವುದಕ್ಕೇನೂ ಆತುರವಿಲ್ಲ. ಅವಳು ಕೆನ್ನೆಗಳಲ್ಲಿ ಗಾಳಿ ತುಂಬಿ ಉದ್ದನೇ ಉಸಿರು ಬಿಟ್ಟು ಹಾಸಿಗೆ ತುಂಬಾ ಒಮ್ಮೆ ಹೊರಳಾಡಿದಳು. ಇನ್ನೊಂದು ತುದಿಯಲ್ಲಿ ಮುಖದ ಮೇಲೆ ಕೈಯಿಟ್ಟು ಮಲಗಿದಾಗ ಗಡಿಯಾರದ ಟಿಕ್–ಟಿಕ್ ಶಬ್ದ ಜೋರಾಗಿ ಕೇಳತೊಡಗಿತು. ಮುಗುಳ್ನಕ್ಕಳು. ಅವಳಿಗೆ ಯಾವಾಗಲೂ ಗಡಿಯಾರ ಕಟ್ಟಿಕೊಂಡು ಮಲಗುವ ಅಭ್ಯಾಸ. ರಾಜನ್ ಪ್ರತಿದಿನ ಕೋಪಗೊಳ್ತಾನೆ—ಇದೇನಿದು ರಾತ್ರಿಯೆಲ್ಲ ಕಿವಿಯ ಹತ್ತಿರ ಟಿಕ್–ಟಿಕ್ ಅನ್ನುತ್ತಿರುತ್ತೆ! ಇದನ್ನು ತೆಗೀಬಾರದೇ!

ಅವಳು ಕೈ ತೆಗೆದಳು, ದಿಂಬನ್ನು ಎಳೆದುಕೊಂಡು ಹೊಟ್ಟೆಯ ಕೆಳಗೆ ಒತ್ತಿಕೊಂಡು ಮಂಚದ ಉದ್ದ–ಅಗಲಕ್ಕೂ ಕೈಗಳನ್ನು ಚಾಚಿ ಬೋರಲು ಮಲಗಿಕೊಂಡಳು. ಅಬ್ಬಾ, ಬೆಳಗಿನ ಜಾವ ಹೊತ್ತು ಮೀರಿ ಮಲಗುವುದರಲ್ಲಿ ಎಷ್ಟೊಂದು ಆನಂದ! ರಾಜನ್ ಇದ್ದರೆ ಬೆಳಿಗ್ಗೆ ಆರು–ಆರೂವರೆ ಗಂಟೆಗೇ ಕೊರ–ಕೊರ ಶುರುವಾಗುತ್ತೆ....ಊಟ, ತಿಂಡಿ–ಚಹ ತಯಾರಿ ಮತ್ತೆ

ಎಂಟು ಗಂಟೆಗೆಲ್ಲಾ ಆಫೀಸಿಗೆ ರವಾನೆ. ಅದೇನೋ ರಾಜನ್‌ಗೆ ಬೆಳಿಗ್ಗೆ ಬೇಗನೇ ಏಳುವ ಎಂತಹುದೋ ಖಾಯಿಲೆ. ಆದರೆ ಇಂದು ಅವಳು ಸ್ವತಂತ್ರಳು. ತನಗೆ ಇಷ್ಟವಾದದ್ದು ಮಾಡಬಹುದು. ತನ್ನ ಶರೀರವನ್ನು ಹಗುರ ಬಿಟ್ಟು ಮತ್ತೆ ಮಲಗುವ ಸನ್ನಾಹ ಮಾಡತೊಡಗಿದಳು.

ಪುನಃ ಕಣ್ಣು ತೆರೆದಾಗ ಗಂಟೆ ಎಂಟೂವರೆ ಹೊಡೆದಿತ್ತು. ಅವಳು ಒಂದು ಬಟ್ಟಲು ಚಹ ಮಾಡಿಕೊಂಡು ಕಿಟಕಿಯ ಪರದೆ ಸರಿಸಿ ಹೊರಗೆ ನೋಡತೊಡಗಿದಳು. ದೂರ–ದೂರದವರೆಗೆ ಮಬ್ಬು ಕವಿದಿತ್ತು. ಈವತ್ತು ಖಂಡಿತ ಮಳೆ ಬರುತ್ತೆ ಅಂದುಕೊಂಡಳು. ಅವಳಿಗೆ ಈ ಮಸಕು ಕತ್ತಲೆ ಬಹಳ ಪ್ರೀತಿ. ಸ್ವಲ್ಪ ದೂರದಲ್ಲಿ ಏನಿದೆ ಎಂದು ತಿಳಿಯದಾಗ, ಅಲ್ಲಿ ಎಂತಹುದೋ ಅಪರೂಪವಾದ ಮೋಹಕವಾದ ವಸ್ತು ಇರಬಹುದೆಂದು ಆಶೆ ಅನಾಯಾಸವಾಗಿ ಮೂಡುತ್ತದೆ. ಅವಳು ಮುಗುಳ್ನಕ್ಕು ಅಂದುಕೊಂಡಳು—ನಾನು ಸರಿಯೇ, ನನಗೆ ಮಸುಕಿನಲ್ಲಿ ಸ್ಪಷ್ಟತೆ ಮತ್ತು ಸೂರ್ಯನ ಬೆಳಕಿನಲ್ಲಿ ಉಸಿರುಗಟ್ಟುವಿಕೆ!

ಚಹ ಕುಡಿದು ಬಿಸಿ ನೀರಿನಲ್ಲಿ ತುಂಬಾ ಹೊತ್ತು ಸ್ನಾನ ಮಾಡಬೇಕು ಎಂದು ಯೋಚಿಸುತ್ತಾ ಬಕೇಟಿನಲ್ಲಿ ಬಿಸಿ ನೀರು ತುಂಬತೊಡಗಿದಳು. ಮತ್ತೆ ಏಕೋ ಇದ್ದಕ್ಕಿದ್ದಂತೆ ತುಂತುರು–ತುಂತುರಾಗಿ ಬರುತ್ತಿದ್ದ ತಣ್ಣೀರಿನ ಚಿಲುಮೆಯಿಂದ ಮೈಮೇಲೆ ಸುರಿದುಕೊಂಡಳು. ಚಳಿಗೆ ಹಲ್ಲು ಕಡಿಯುತ್ತಲೇ ಒಂದು ಗಜಲ ಗುನುಗುನಿಸತೊಡಗಿದಳು. ದೊಡ್ಡ ಟವಲಿನಲ್ಲಿ ಚೆನ್ನಾಗಿ ಉಜ್ಜಿ ಮೈ ಒರೆಸಿಕೊಂಡಳು. ಇಂದು ಅದ್ಭುತ ಸ್ಫೂರ್ತಿ ಹಾಗೂ ಉತ್ಸಾಹದ ಅನುಭವವಾಗ್ತಿದೆ. ಬಣ್ಣದ ಕುರ್ತಾ ಮತ್ತು ಚೂಡಿದಾರ್ ಪೈಜಾಮ ತೊಟ್ಟು ನೀಲಿ ಬಣ್ಣದ ಬೊಟ್ಟನ್ನು ಹಣೆಯ ಮೇಲಿಡಲೆಂದು ಕೈ ಚಾಚಿದಳು. ಮತ್ತೇನೋ ಯೋಚಿಸಿ ಅದನ್ನು ಅಲ್ಲಿಯೇ ಬಿಟ್ಟು ಒಂದು ದೊಡ್ಡ ಹಸಿರು ಬಣ್ಣದ ಬೊಟ್ಟನ್ನಿಟ್ಟುಕೊಂಡಳು. ರಾಜನ್ ಇದ್ದಿದ್ದರೆ, ಹೇಳ್ತಿದ್ದ—ನೀಲಿ ಬಟ್ಟೆಗೆ ಹಸಿರು....ಏನು ಮ್ಯಾಚಿಂಗೊ? ಕನ್ನಡಿಯಲ್ಲಿ ಕಾಣುತ್ತಿದ್ದ ತನ್ನ ಪ್ರತಿಬಿಂಬವನ್ನು ನೋಡಿ ನಾಲಿಗೆ ಹೊರಚಾಚಿ ರೇಗಿಸಿದಳು. ಮ್ಯಾಚಿಂಗೇ ಮ್ಯಾಚಿಂಗ್ ಎಂದು ಹೇಳುತ್ತಾ ಕಿಲಕಿಲನೇ ನಕ್ಕಳು.

ಮೇಜಿನ ಡ್ರಾವನ್ನು ತೆಗೆದಾಗ ಕಿವಿಗೆ ಹಾಕುವ ದೊಡ್ಡ ರಿಂಗುಗಳು ಕಂಡವು. ತೆಗೆದುಕೊಂಡು ಕಿವಿಗೆ ಜೋತು ಹಾಕಿಕೊಂಡಳು.ವಿವಾಹವಾದ ನಂತರ ಇವನ್ನು ಹಾಕಿಕೊಂಡಿರಲಿಲ್ಲ. ನಕಲಿಯಲ್ಲವೇ? ಮತ್ತೆ ಇರಬೇಕಾದ್ದಕ್ಕಿಂತ ವಿಪರೀತ ದೊಡ್ಡವು....ಎಂದು ರಾಜನ್ ಹೇಳುತ್ತಾನೆ. ಒಂದು ಹಳೆಯ ಬ್ಯಾಗನ್ನು ಕೈಗೆ ತಗುಲಿಸಿಕೊಂಡು ಆಚೆ ಹೊರಟಳು. ವರಾಂಡದಲ್ಲಿ ಮುಂಡೂ ಆರಾಮವಾಗಿ ಸಿಗರೇಟ್ ಸೇದುತ್ತಿದ್ದ....ರಾಜನ್‌ದು. ಅವಳನ್ನು ನೋಡಿದೊಡನೇ ಅಂಗೈಯಲ್ಲಿ ಬಚ್ಚಿಟ್ಟುಕೊಂಡು ಗಂಭೀರವಾಗಿ ಕೇಳಿದ—"ಅಡುಗೆ ಏನು ಮಾಡಲಿ?"

"ಏನೂ ಬೇಡ, ಊಟ ಮಾಡುವುದಿಲ್ಲ. ನಿನಗೆ ರಜೆ"—ಎಂದಳು. ಮುಂಡೂವಿನ ಗಾಬರಿಗೊಂಡ ಮುಖ ನೋಡಿ ನಗುತ್ತಾ ಹೇಳಿದಳು, "ಅಂದರೆ, ನಾನು ಹೇಳಿದ್ದು ನಿನಗೇನು ಬೇಕೋ ಮಾಡಿಕೋ ಅಂತ. ನೀನೇ ತಿನ್ನಬೇಕು. ಬೇಕಾದರೆ ತಿನ್ನು, ಇಲ್ಲ ರಜೆ ತೆಗೆದುಕೋ ತಿಳೀತಾ."

ಎಲ್ಲಿಗೆ ಹೋಗುವುದು ಏನು ಮಾಡುವುದು ಎಂದು ಸರಿಯಾಗಿ ಯೋಚಿಸದೆಯೇ ರಸ್ತೆಯಲ್ಲಿ ಸ್ವಲ್ಪ ದೂರ ನಡೆಯುತ್ತಾ ಹೊರಟಳು. ಆದರೆ ಇಂದಿನ ದಿನವನ್ನು ಹಾಗೆಯೇ ನಷ್ಟ ಮಾಡುವುದಿಲ್ಲವೆಂಬುದು ಮಾತ್ರ ಖಂಡಿತ ತಿಳಿದಿದೆ. ಏನನ್ನೂ ನಿರ್ಧರಿಸುವ ಮೊದಲೇ ಮಳೆ ಬರಲಾರಂಭಿಸಿತು. ಸ್ವಲ್ಪ ದೂರ ಓಡಿ ಟ್ಯಾಕ್ಸಿಯನ್ನು ಕೂಗಿದಳು. ಒಳಗೆ ಕುಳಿತ ನಂತರ ಯೋಚಿಸತೊಡಗಿದಳು, ಈಗ? ಟ್ಯಾಕ್ಸಿಯನ್ನು ಹತ್ತಿದ ನಂತರ ಎಲ್ಲಿಗಾದರೂ ಹೋಗಲು ಹೇಳಲೇಬೇಕಾಗುತ್ತದೆ.

'ಜಹಾಂಗೀರ್ ಆರ್ಟ್ ಗ್ಯಾಲರಿ'—ಬಾಯಿಗೆ ಬಂದದ್ದನ್ನು ಹೇಳಿಬಿಟ್ಟಳು. ಗ್ಯಾಲರಿಯಲ್ಲಿ ಯಾರೋ ಹೊಸ ಚಿತ್ರಕಾರನ ಚಿತ್ರಗಳ ಪ್ರದರ್ಶನ ನಡೆದಿತ್ತು. ಹೆಚ್ಚೇನೂ ಅರ್ಥವಾಗಲಿಲ್ಲ. ಆದರೆ ಖಂಡಿತ ಸಂತೋಷವಾಯಿತು. ಏಕೋ ಏನೋ ಇಂದು ಏನೇ ಮಾಡಿದರೂ ಆನಂದವಾಗ್ತಿದೆ. ಒಂದು ಚಿತ್ರದ ಮುಂದೆ ಬಹಳ ಹೊತ್ತು ನಿಂತು ನೋಡಿದಳು. ಕ್ಯಾನ್‌ವಾಸಿನ ತುಂಬಾ ಬಣ್ಣ ಬಣ್ಣದ ರೇಖೆಗಳು ಈ ಕಡೆಗೂ–ಆ ಕಡೆಗೂ ಓಡುತ್ತಿದ್ದವು. ಇದಂತೂ ಥೇಟ್ ನನ್ನ ಕುರ್ತಾದಂತೆಯೇ ಇದೆ ಎಂದುಕೊಂಡು ಜೋರಾಗಿ ನಕ್ಕಳು....ಎಷ್ಟು ಜೋರಾಗಿ ಅಂದರೆ ಹತ್ತಿರದಲ್ಲಿ ನಿಂತಿದ್ದ ಒಬ್ಬ ದಢೂತಿ ವ್ಯಕ್ತಿ ಅವಳನ್ನು ದುರುಗುಟ್ಟಿ ನೋಡತೊಡಗಿದ. ಇವನೇ ಆ ಚಿತ್ರಕಾರ ಅಲ್ಲ ತಾನೆ? ಪಾಪ! ಚಿತ್ರ ಬಹಳ ದುಃಖಕರವಾಗಿರಬೇಕು. ಖಂಡಿತ.

ಅವಳು ಮುಖ ಗಂಭೀರ ಮಾಡಿ ಆ ದಢೂತಿ ವ್ಯಕ್ತಿಯ ಬಳಿಗೆ ಹೋಗಿ ವಿನಯದಿಂದ "ಸಾರಿ" ಎಂದು ಹೇಳಿ ತಕ್ಷಣ ಅಲ್ಲಿಂದ ಹೊರಗೆ ಬಂದಳು. ಹೊರಗೆ ಬಂದನಂತರ ಒಂದು ವಿಚಾರ ಮೂಡಿತು—ಆತ ಚಿತ್ರಕಾರನಲ್ಲದಿರಬಹುದು. ಕಾರ್ಖಾನೆಯ ಮಾಲೀಕನಾಗಿರಬಹುದು. ಎರಡು ಬಗೆಯ ಮನುಷ್ಯರೇ ಗಡ್ಡ ಬೆಳೆಸುವ ಸಾಹಸ ಮಾಡಬಲ್ಲರು—ಕಲಾಕಾರರು ಮತ್ತು ಸಾಮಂತರು. ಸಾಮಂತರಂತೂ ಈಗಿಲ್ಲ, ಅವರ ಜಾಗವನ್ನು ಈಗ ಈ ಮಾಲೀಕರು ಆಕ್ರಮಿಸಿದ್ದಾರೆ. ಇನ್ನು ಈ ದಿನವೆಲ್ಲ ಆತ ಇದೇ ಯೋಚಿಸುತ್ತಿರುತ್ತಾನೆ 'ಆಕೆ ಸಾರಿ ಏಕೆ ಹೇಳಿದಳು' ಅಂತ. ಅದರಲ್ಲೂ ಲಾಭ ಏನಾದರೂ ಇದೆಯೇ ಅಂತ ಹುಡುಕುತ್ತಿರಬೇಕು. ಅವಳು ದುಪ್ಪಟ್ಟು ಜೋರಾಗಿ ನಕ್ಕು ನೋಡಿದಳು. ಮಳೆ ನಿಂತಿತ್ತು. ಆಕಾಶ ಇನ್ನೂ ಮಬ್ಬಾಗೇ ಕಾಣುತ್ತಿತ್ತು. ಪೂರ್ತಿ ಮಳೆ ಸುರಿದಿಲ್ಲ ಎಂದು ಯೋಚಿಸುತ್ತಾ ರಸ್ತೆ ಹಿಡಿದಳು.

ರಸ್ತೆಯ ಬದಿಯಲ್ಲಿದ್ದ ಒಂದು ರೆಸ್ಟೊರಾಂ ನೋಡಿ ನೆನಪಾಯಿತು ಬಹಳ ಹಸಿವಾಗ್ತಿದೆ ಎಂದು. ಒಳಗೆ ಹೋಗಿ ತಕ್ಷಣ ಆದೇಶ ನೀಡಿದಳು—"ಒಂದು ಪ್ಲೇಟು ಬಿಸಿ ಬೋಂಡ ಮತ್ತು ಒಂದು ಐಸ್‌ಕ್ರೀಮ್. ಒಟ್ಟಿಗೆ."

ಮಾಣಿ ಕೇಳಿದ—"ಒಟ್ಟಿಗೆ?"

"ಹಾಂ. ಏನಾದರೂ ಸಮಸ್ಯೆನಾ?"

"ಇಲ್ಲ. ಇಲ್ಲ. ಈಗ ತಂದೆ."

ಅವಳಿಗೆ ಬಿಸಿ ಮತ್ತು ತಣ್ಣಗಿನದನ್ನು ಒಟ್ಟಿಗೆ ತಿನ್ನುವುದು ತುಂಬಾ ಇಷ್ಟ. ಹಲ್ಲುಗಳು ಹಾಳಾಗ್ತವೆ ಅಂತ ಹೇಳ್ತಾರೆ. ಈವತ್ತು ಎಷ್ಟು ಬೇಗ ಕೆಲಸ ಆಯ್ತು. ರಾಜನ್ ಇದ್ದರೆ ಒಳ್ಳೆಯ ಜಾಗ ನೋಡಿ ಕುಳಿತು ನಿಧಾನವಾಗಿ ತಿಂಡಿಗಳ ಪಟ್ಟಿಯನ್ನು ನೋಡಿದ ನಂತರ ಯೋಚಿಸಿ ಆದೇಶ ನೀಡಲಾಗುತ್ತದೆ.

ತಿಂಡಿ ತಿಂದು ಹೊರಗೆ ಬಂದು ಇಲ್ಲಿಯೇ ಹತ್ತಿರದ ಸಿನಿಮಾ ಮಂದಿರದಲ್ಲಿ ಯಾವುದಾದರೂ ಪಿಕ್ಚರ್ ನೋಡೋಣ ಎಂದು ಯೋಚಿಸಿದಳು. ಪುಣ್ಯಕ್ಕೆ ಒಂದು ಹಳೆಯ ತಮಾಷೆ ಇಂಗ್ಲೀಷ್ ಪಿಕ್ಚರ್ ಸಿಕ್ಕಿತು—'ಡೆನಿ.ಕೆ.'ದು. ರಾಜನ್ ಹೇಳ್ತಾನೆ—"ನಿನಗೆ ಅದು ಹೇಗೆ ಇಷ್ಟವಾಗುತ್ತೋ, ನನಗಂತೂ ಅವನು ಹುಡುಗು-ಹುಡುಗಾಗಿ ಆಡುವುದನ್ನು ನೋಡಿದರೆ ನಗು ಬರೊಲ್ಲ." ಆದರೆ ಅವಳಿಗೆ ನಗು ಬರುತ್ತೆ, ಚೆನ್ನಾಗಿ ನಗು ಬರುತ್ತೆ, ನಗು ಮೇಲೆ ನಗು ಬರುತ್ತಲೇ ಇರುತ್ತೆ....ಒಮ್ಮೊಮ್ಮೆ ವಿನಾ ಕಾರಣ ಸಹ ಈವತ್ತಿನ ಹಾಗೆ.

ಪಿಕ್ಚರ್ ನೋಡುತ್ತಿದ್ದಾಗ ಬೇರೆ ದಿನಗಳಿಗಿಂತ ಹೆಚ್ಚಾಗಿ ಇಂದು ಗಟ್ಟಿಯಾಗಿ ನಗುತ್ತಿದ್ದಳು. ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿಯ ಮುಖ ಕತ್ತಲಿನಲ್ಲಿ ಕಾಣಿಸುತ್ತಿರಲಿಲ್ಲ, ಆದರೆ ನಗುವುದರಲ್ಲಿ ಆತ ಇವಳಿಗಿಂತ ಎರಡು ಹೆಜ್ಜೆ ಮುಂದಿದ್ದ. ಒಮ್ಮೆ ಕಲಾಕಾರನ ಅಭಿನಯಕ್ಕೆ ಅವರಿಬ್ಬರೂ ಎಷ್ಟು ಜೋರಾಗಿ ನಕ್ಕರೂ ಅಂದರೆ ಅವರ ಕೈಗಳು ಪರಸ್ಪರ ತಗುಲಿದವು. 'ಸಾರಿ' ಹೇಳುವುದಕ್ಕೆಂದು ಇಬ್ಬರೂ ತಿರುಗಿದರು. ಆದರೆ ಕ್ಷಮೆ ಕೇಳುವುದರ ಬದಲು ಮತ್ತೊಮ್ಮೆ ಗಟ್ಟಿಯಾಗಿ ನಕ್ಕರು.

ಇದಾದ ನಂತರ ಪ್ರತಿ ಸಲವೂ ಇದೇ ಆಯಿತು....ನಗು ಬಂದಾಗ ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಒಟ್ಟಿಗೆ ನಗುತ್ತಿದ್ದರು.

ಪಿಕ್ಚರ್ ಮುಗಿದ ನಂತರ ಇಬ್ಬರೂ ಜೊತೆಯಾಗೇ ಹೊರಗೆ ಬಂದರು. ನಾಲ್ಕುವರೆ ಗಂಟೆಗೇ ಕತ್ತಲಾದಂತಿತ್ತು. ಆಕಾಶದಲ್ಲಿ ಮೋಡಗಳು ತುಂಬಿದ್ದು ಇನ್ನೇನು ಈಗಲೋ ಆಗಲೋ ಮಳೆ ಬರುವಂತಿತ್ತು.

"ಎಷ್ಟು ಸೊಗಸಾದ ದಿನ"—ಅವಳು ತನ್ನ ಜೊತೆಯಲ್ಲಿದ್ದಾತನಿಗೆ ಹೇಳಿದಳು.

"ಸೊಗಸಾದ್ದೇ?"—ಆತ ಸ್ವಲ್ಪ ಆಶ್ಚರ್ಯದಿಂದ ಕೇಳಿದ, "ಹೀಗೆ ಬಣ್ಣವಿಲ್ಲದೆ?"

"ಹಾಂ, ಎಷ್ಟು ಸುಂದರ....ಸೊಗಸಾದ ಬಣ್ಣವಿಲ್ಲದ ದಿನ!"

ಆತ ನಕ್ಕು ಬಿಟ್ಟ, "ಗೊತ್ತಾಯಿತು. ಸೂರ್ಯನಂತೂ ಪ್ರತಿದಿನ ಮೂಡುತ್ತಾನೆ."

"ಆದರೆ ಮಸುಕು ಯಾವಾಗಲೋ ಒಂದು ಸಲ ಇರುತ್ತೆ....ಎಂಟು ತಿಂಗಳಲ್ಲಿ ಇಂದು ಮೊದಲ ಬಾರಿಗೆ", ಎಂದು ಹೇಳಿದಳು.

"ಇನ್ನು ಮಾನ್‌ಸೂನ್ ಶುರುವಾಗುತ್ತಲ್ಲ?"

"ಹಾಂ, ಈವತ್ತು ಚೆನ್ನಾಗಿ ಮಳೆಯಾಗುತ್ತೆ", ಎಂದು ಹೇಳಿ ಅನಾಯಾಸವಾಗಿ, "ಕಾಫಿ ಕುಡಿಯೋಣ?" ಎಂದಳು.

"ಖಂಡಿತ."

ಸಣ್ಣ-ಸಣ್ಣ ಹನಿಗಳು ಬೀಳಲು ಆರಂಭಿಸಿತು. ಇಬ್ಬರೂ ಓಡಿ ಹೋಗಿ ಅಲ್ಲೇ ಪಕ್ಕದಲ್ಲಿದ್ದ ರೆಸ್ಟೊರಾಂ ಒಳಗೆ ಹೋದರು. ಅವಳು ಕೂದಲು ಒದರಿ ಕೇಳಿದಳು, "ನಿಮ್ಮ ಕೊಡೆ ಎಲ್ಲಿ?"

"ಕೊಡೆ?"

"ಹಾಂ. ನೀವು ಕೊಡೆಯನ್ನು ಯಾವಾಗಲೂ ಜೊತೆಯಲ್ಲಿಟ್ಟುಕೊಳ್ಳಲ್ಲವೇ?"

ಆತ ಜೋರಾಗಿ ನಕ್ಕು ಕೇಳಿದ—"ಇಂಗ್ಲೆಂಡಿನಲ್ಲಿ....?"

ಕಾಫಿ ತರಿಸಿಟ್ಟು ಇಬ್ಬರೂ ಮುಂದೆ ಕಾಣುತ್ತಿದ್ದ ಕಪ್ಪು ಸಮುದ್ರವನ್ನು ನೋಡುತ್ತಾ ತಮ್ಮ-ತಮ್ಮ ಆಲೋಚನೆಗಳಲ್ಲಿ ಮುಳುಗಿದರು.

ಇದ್ದಕ್ಕಿದ್ದಂತೆ ಆತನ ಧ್ವನಿಯನ್ನು ಕೇಳಿ ಬೆಚ್ಚಿಬಿದ್ದಳು—"ಏನು ಯೋಚನೆ ಮಾಡುತ್ತಿದ್ದೀರಿ, ಅದನ್ನು ತಿಳಿಯಲು ಒಂದು ಪೆನಿ ಖರ್ಚು ಮಾಡಲೂ ಸಹ ತಯಾರಿದ್ದೇನೆ."

ನಗುತ್ತಾ "ಕೊಡಿ" ಅಂದಳು. ಆತ ನಿಜವಾಗಿಯೂ ಗಂಭೀರವಾಗಿ ಜೇಬಿನಿಂದ ಒಂದು ಪೆನಿ ತೆಗೆದು ಕೈ ಮುಂದೆ ಮಾಡಿದ.

ಅವಳು ಅದನ್ನು ಅಂಗೈಯಲ್ಲಿ ಮುಚ್ಚಿಟ್ಟುಕೊಂಡಳು.

"ಆದರೆ ನಿಜ ಹೇಳಬೇಕು."

"ನಾನು ಸಮುದ್ರಕ್ಕೆ ಧುಮುಕಿದರೆ ಎಷ್ಟು ದೂರದವರೆಗೆ ಈಜಬಲ್ಲೆ ಅಂತ ಯೋಚಿಸುತ್ತಿದ್ದೆ. ಮತ್ತೆ ನೀವು? ನೀವೇನು ಯೋಚಿಸುತ್ತಿದ್ದಿರಿ? ಆದರೆ ಪೆನಿ ಮಾತ್ರ ಕೊಡೊಲ್ಲ."

ಯಾರೋ ಆತ್ಮೀಯರು ಕೊಟ್ಟಿರುವ ಉಡುಗೊರೆಯೆಂಬಂತೆ ಇನ್ನಷ್ಟು ಗಟ್ಟಿಯಾಗಿ ಮುಷ್ಠಿ ಬಿಗಿದಳು. ಆತ ಕೇಳಿದ "ಬೇಜಾರು ಮಾಡಿಕೊಳ್ಳುವುದಿಲ್ಲ ತಾನೇ?"

"ಇಲ್ಲ" ಎಂದೇನೋ ಹೇಳಿಬಿಟ್ಟಳು. ಆದರೆ ಎದೆ ಹೊಡೆದುಕೊಳ್ಳತೊಡಗಿತು....ಸರಿ ಇನ್ನು ಅದೇ ಹಳೆಯ-ಹರಿದ ಪ್ರೀತಿಯ ಮಾತುಗಳು ಆರಂಭವಾಗುತ್ತೆ.

"ನಾನು ಯೋಚಿಸುತ್ತಿದ್ದೆ-ಮಳೆ ಹೆಚ್ಚಾದರೆ ಇಲ್ಲಿಂದ 'ವೊರ್ಲಿ'ವರೆಗೆ ಟ್ಯಾಕ್ಸಿಯ ಬಾಡಿಗೆ ಎಷ್ಟಾಗಬಹುದು ಅಂತ."

ಅವಳು ಜೋರಾಗಿ ನಕ್ಕಳು....ಕೆಟ್ಟ ಭಾವನೆಯಿಂದಲ್ಲ, ಹರ್ಷದ ಅತಿರೇಕದಿಂದ.

"ದಾರಿಯಲ್ಲಿ ನನ್ನನ್ನು ಮನೆಗೆ ಬಿಟ್ಟು ಹೋದ್ರಿ ಅಂದರೆ, ಅರ್ಥ", ಎಂದು ನಕ್ಕು ಹೇಳಿದಳು.

"ಬಹಳ ಚೆನ್ನಾಗಿದೆ", ಎಂದ ಆತ ಅವಳು ಎಲ್ಲಿ ವಾಸವಾಗಿದ್ದಾಳೆ ಅಂತಲೂ ಕೇಳಲಿಲ್ಲ. ತಾನು ಜೀವನದಲ್ಲಿ ಮೊಟ್ಟ ಮೊದಲ ಬಾರಿಗೆ ಅಂತಹ ವ್ಯಕ್ತಿಯನ್ನು ಭೇಟಿ ಮಾಡಿದ್ದೇನೆ ಎಂದು ಅವಳಿಗನ್ನಿಸಿತು. ಆತನಿಗೆ ಅವಳ ಗಂಡ ಇದ್ದಾನೆಯೇ ಇಲ್ಲವೆ; ಇದ್ದರೆ ಏನು ಕೆಲಸ ಮಾಡ್ತಾರೆ ಎಂದೆಲ್ಲ ತಿಳಿಯುವ ಇಚ್ಛೆ ಇರಲಿಲ್ಲ.

"ಸಮುದ್ರದ ನೀರಿನ ಮೇಲೆ ಬೀಳುತ್ತಿರುವ ಮಳೆಯ ಹನಿಗಳು ಎಷ್ಟು ಚಂದ."

"ಹಾಂ."

ಮತ್ತೆ ಕೆಲಹೊತ್ತು ಇಬ್ಬರೂ ಸುಮ್ಮನಿದ್ದರು.

ಆತ ಹೇಳಿದ—"ಪ್ರಶಾಂತ ಮಹಾಸಾಗರದ ಮೇಲೆ ಹಡಗು ಹೋಗುವಾಗ ಅದರ ಮುಂಭಾಗದಿಂದ ಸೀಳಿಕೊಂಡು ಹರಿಯುವ ನೀರು ಬೆಳ್ಳಿಯಂತೆ ಹೊಳೆಯುತ್ತೆ."

"ಯಾಕೆ?"

"ಫಾಸ್‌ಪೊರೆಸೆನ್ಸ್‌ನ ಕಾರಣ ಇರಬೇಕು. ನೀವು ಎಂದೂ ನೋಡಿಲ್ಲವೆ?"

"ಇಲ್ಲ."

"ಅಂತಹ ಅವಕಾಶ ಸಿಕ್ಕರೆ ತಪ್ಪದೇ ನೋಡಿ."

"ನೀವು ತುಂಬಾ ಓಡಾಡಿದ್ದೀರಾ?" ಎಂದು ಅವಳು ಸ್ವಲ್ಪ ಈರ್ಷೆಯಿಂದಲೇ ಕೇಳಿದಳು.

"ತುಂಬಾ", ಅತಿಥಿ ನೆನಸಿಕೊಂಡು ಮುಗುಳ್ನಗುತ್ತಿದ್ದ.

"ಯಾವ ಜಾಗ ಎಲ್ಲಕ್ಕಿಂತ ಚಂದ ಅನ್ನಿಸಿತು?"

"ಯಾವಾಗ ಎಲ್ಲಿದ್ದರೆ ಅದು."

ಆತ ಮುಜುಗರದಿಂದ ಮುಗುಳ್ನಕ್ಕ....ಅವಳು ಅರ್ಥ ಮಾಡಿಕೊಂಡಳೋ ಇಲ್ಲವೋ ಗೊತ್ತಿಲ್ಲ. ಆದರೆ ಸಮ್ಮತಿ ಸೂಚಿಸುವಂತೆ ತಲೆ ಅಲ್ಲಾಡಿಸಿ ಮುಗುಳ್ನಕ್ಕಳು.

ಕಾಫಿ ಮುಗಿದಿತ್ತು. ಮಾಣಿ ಬಿಲ್ಲು ತೆಗೆದುಕೊಂಡು ಬರುತ್ತಿದ್ದುದನ್ನು ನೋಡಿದಳು. ಹೊರಗಡೆ ಮಳೆ ನಿಲ್ಲುತ್ತಿದೆ. ಮೋಡಗಳೂ ಸಹ ಚದುರುತ್ತಿವೆ. ಇಲ್ಲ, ಜಡಿಮಳೆ ಬರುವುದಿಲ್ಲ. ಆ ಸೂಚನೆ ಸುಳ್ಳಾಯಿತು. ಈಗ ಮೋಡಗಳು ಸರಿದು ಹೋಗುತ್ತವೆ. ಮತ್ತೆ ಅದೇ ತೀಕ್ಷ್ಣ ಪ್ರಕಾಶವನ್ನು ಚೆಲ್ಲುವ ಸೂರ್ಯ ಹೊರ ಬರುತ್ತಾನೆ.

ಬಿಲ್ ಬಂದಾಗ ತಾನೇ ತೆಗೆದುಕೊಂಡು ಹೇಳಿದಳು—"ಆಮಂತ್ರಣ ನನ್ನ ಕಡೆಯಿಂದ

ಬಂದದ್ದು." ಅತಿಥಿ ಏನೂ ವಾದ ಮಾಡಲಿಲ್ಲ. ಸಧ್ಯ....ಒಳ್ಳೆಯದಾಯಿತು. ಈತ ಸಹ ಬೇರೆ ಗಂಡಸರಂತೆ ಹಣ ಕೊಡಲು ಹಟ ಮಾಡಿದ್ದರೇ ಎಲ್ಲ ಒಡೆದುಹೋಗುತ್ತಿತ್ತು.

ಆಗತಾನೇ ಟ್ಯಾಕ್ಸಿ ಹಿಡಿದು ಹೊರಟಿದ್ದರು, ಆಗಲೇ ಮನೆ ಬಂದುಬಿಟ್ಟಿತು. ಇಳಿಯುತ್ತಾ ಹಣ ತೆಗೆಯಲು ಹೋದಾಗ ಆತ ಹೇಳಿದ—"ಇರಲಿ ಬಿಡಿ."

"ಯಾಕೆ?"—ಅವಳ ಹಣೆ ಸುಕ್ಕಾಯಿತು.

"ಈ ದಿನ ನನಗೆ ಬಹಳ ಅಮೂಲ್ಯವಾದದ್ದು."

"ಹೇಗೆ?"

"ನಾನು ಇಂದಿನವರೆಗೂ ಯಾರನ್ನೂ ಹಣೆಗೆ ಹೆಸಿರು ಬೊಟ್ಟು ಇಟ್ಟದ್ದನ್ನು ನೋಡಿಲ್ಲ." ಆತ ಸ್ನಿಗ್ಧ ಸ್ನೇಹಯುಕ್ತ ಸ್ವರದಲ್ಲಿ ಹೇಳಿದ. ಅವಳು ಸ್ವಲ್ಪ ನಿಂತಳು. ಟ್ಯಾಕ್ಸಿ ಹೊರಟುಹೋಯಿತು. ಸ್ವಲ್ಪ ದೂರ ಹೋಗಿ ಕಣ್ಣಿಗೆ ಕಾಣಿಸದೆ ಮಾಯವಾಯಿತು.

□

---

ಡಾ. ಎಂ. ವಿಮಲ
ಹಿಂದಿ ವಿಭಾಗ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು – ೫೬೦೦೫೬

# ಕಲಾ ಹಂಡಿ

ಒರಿಯಾ ಮೂಲ : ಜೆ.ಪಿ. ದಾಸ್
ಅನುವಾದ : ಎಚ್. ನಾಗರಾಜಪ್ಪ

ಬಿಸಾಕು ರಸ್ತೆ ನಕಾಶೆ.
ಅಲ್ಲಿಗೆ ತಲುಪಲು,
ಹೆಲಿಕಾಪ್ಟರ್ ಬೇಕಿಲ್ಲ ;
ಹಸಿವು ಎಲ್ಲಿದೆಯೊ
ಅದೇ ಕಲಾಹಂಡಿ.

ಮಳೆರಾಯ
ಮುಖ ತಿರುಗಿಸಿದ ;
ಹಸಿರೆಲೆ ಒಂದೂ
ಉಳಿದಿಲ್ಲ ಮರದ ಮೇಲೆ.
ಇಡೀ ಹಳ್ಳಿಯೇ ಸ್ಮಶಾನ.
ನೆಲ ಬರಿದಿದೆ,
ನದಿ ಬತ್ತಿ ಬರಿದಾಗಿದೆ.
ಯೋಜನೆಗಳೆಲ್ಲ ಹುಸಿಯಾಗಿವೆ ;
ಬಡತನದ ರೇಖೆ
ಇನ್ನೂ ಕೆಳಕ್ಕೆ ಕುಸಿದಿದೆ.

ನೀನೆಲ್ಲಿ ನೋಡುವೆಯೊ,
ಅಲ್ಲೆಲ್ಲ ಕಲಾಹಂಡಿ :
ಜೀವಂತ ಅಸ್ಥಿಪಂಜರಗಳ
ಗುಳಿಬಿದ್ದ ಕಣ್ಣಲ್ಲಿ,
ಮೈಮುಚ್ಚದ ನಜ್ಜುಗುಜ್ಜು ದೇಹಗಳ
ಚಿಂದಿ ಜನರಲ್ಲಿ,
ಹಸಿವಿಗಾಗಿ ಗಿರವಿ ಇಟ್ಟ
ಪಾತ್ರೆ ಪರಡಿಗಳಲ್ಲಿ,
ಛಾವಣಿ ಹೊದಿಸಿದ
ಮುರುಕು ಗುಡಿಸಲುಗಳಲ್ಲಿ,
ಎರಡು ಮಡಕೆಗಳ
ಒಡೆತನದ
ವಿಶೇಷ ಸಮೃದ್ಧಿಯಲ್ಲಿ !

ಕಲಾಹಂಡಿ ಎಲ್ಲೆಲ್ಲೂ :
ಅನ್ನಛತ್ರದಲ್ಲಿ ನೆರೆದ
ಹಸಿದ ಜನರ ಗುಂಪಿನಲ್ಲಿ,
ಮಕ್ಕಳನ್ನು ಹರಾಜಿಗಿಟ್ಟ
ಮಾರುಕಟ್ಟೆ ಸ್ಥಳಗಳಲ್ಲಿ,
ಸೂಳೆಗೇರಿಗೆ ಮಾರಾಟವಾದ
ತರುಣಿಯರ ನಿಟ್ಟುಸಿರಿನಲ್ಲಿ,
ಮನೆಮಾರು ಬಿಟ್ಟು ಗುಳೆ ಹೊರಟ
ಅಸಹಾಯಕ ಜನರ
ಮೌನ ಮೆರವಣಿಗೆಯಲ್ಲಿ.

ಬಾ,
ಕಲಾಹಂಡಿಯನ್ನು ಹತ್ತಿರದಿಂದ ನೋಡು :
ಸುಳ್ಳು ಪತ್ರಿಕಾ ಹೇಳಿಕೆಗಳ
ಮೊಸಳೆ ಕಣ್ಣೀರಿನಲ್ಲಿ,
ಕಂಪ್ಯೂಟರ್ ಪ್ರಿಂಟ್ ಔಟ್‌ಗಳ
ಉತ್ಪ್ರೇಕ್ಷಿತ ಅಂಕಿಅಂಶಗಳಲ್ಲಿ,
ಸಭೆಗಳಲ್ಲಿ ವ್ಯಕ್ತಗೊಂಡ

ಚಿಲ್ಲರೆ ಅನುಕಂಪದಲ್ಲಿ,
ಮತ್ತು, ಯೋಜನೆಗಳ ಹರಿಕಾರರ
ಹುಸಿ ಭರವಸೆಗಳಲ್ಲಿ.

ಕಲಾಹಂಡಿ ನಮಗೆ ತೀರಾ ನಿಕಟ :
ನಮ್ಮ ಆತ್ಮಗಳ
ಆಗೀಗಿನ ವಿಷಾದದಲ್ಲಿ,
ಆತ್ಮಸಾಕ್ಷಿಯ
ಅನಿರೀಕ್ಷಿತ ನೋವಿನಲ್ಲಿ,
ಆತ್ಮಸಾಕ್ಷಿಯ
ಅಂತರಾತ್ಮದ
ಅಪರೂಪದ ಅನುತಾಪದಲ್ಲಿ,
ಗಾಢ ನಿದ್ದೆಗೆಡಿಸಿ ಬೆಚ್ಚಿ ಬೀಳಿಸುವ
ದುಃಸ್ವಪ್ನಗಳಲ್ಲಿ,
ರೋಗರುಜಿನದಲ್ಲಿ, ಹಸಿವಲ್ಲಿ
ಅಸಹಾಯಕತೆಯಲ್ಲಿ.
ಮುಂಬರುವ ರಕ್ತಸಿಕ್ತ
ಭಯಾನಕ ಸೋಲಿನ ಭೀತಿಯಲ್ಲಿ.

ಇಪ್ಪತ್ತೊಂದನೇ ಶತಮಾನದ
ಈ ವೈಭವೋಪೇತ ಹೆಬ್ಬಾಗಿಲ ಮೂಲಕ
ನಡೆವುದಾದರೂ ಹೇಗೆ ನಾವು
ಕಲಾಹಂಡಿಯನ್ನು ಬಿಟ್ಟು ಹಿಂದೆ ?

□

---

ಎಚ್. ನಾಗರಾಜಪ್ಪ
ಅಸಿಸ್ಟೆಂಟ್ ಎಡಿಟರ್ (ಕನ್ನಡ)
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ–೫, ಗ್ರೀನ್ ಪಾರ್ಕ್, ನವ ದೆಹಲಿ – ೧೧೦ ೦೧೬

# ಕಡುಗಣ್ಣಾವ–ಒಂದು ಪ್ರವಾಸ ಟಿಪ್ಪಣಿ

ಮಲೆಯಾಳಂ ಮೂಲ : **ಎಂ.ಟಿ. ವಾಸುದೇವನ್ ನಾಯರ್**

ಅನುವಾದ : **ಡಾ. ಕಮಲಾಕ್ಷ ಕೆ.**

ಎರಡು ಜತೆ ಉಡುಪುಗಳನ್ನೂ ಒಂದು ಕ್ಯಾಮರಾವನ್ನೂ ತುರುಕಿದ ಚೀಲವನ್ನು ಹೆಗಲಿಗೇರಿಸಿ ಹಿಮಾಲಯದ ತಪ್ಪಲುಗಳಲ್ಲಿ ಅಲೆಯುತ್ತ ನಡೆದಿದ್ದ ಕಾಲದಲ್ಲಿ ಪ್ರಾಯ ಇಪ್ಪತ್ತೆರಡು ವರ್ಷ. ಇಜಾತ್ ನಗರದಿಂದ ಅಲ್ಮೋರಾಕ್ಕೆ ಸಪುರ ಕಾಲು ಹಾದಿಯಲ್ಲಿ ಕುದುರೆ ಸವಾರಿ ಮಾಡಿದ್ದಿದೆ. ಕಂಚಿನ ಪಾತ್ರೆಯಲ್ಲಿನ ಭಂಗಿ ಮಿಶ್ರಿತ ಹಾಲು ಕುಡಿದು ಮಲಗಿ ಎಚ್ಚರವಾದಾಗ ಕೊಲ್ಲಿಯ ಆಳಪ್ರಪಾತದ ಮೇಲ್ಭಾಗದ ಕಗ್ಗಲ್ಲಕಟ್ಟೆಯ ಮೇಲೆ ಅಪಾಯಕಾರಿಯಾಗಿ ಮಲಗಿದ್ದುದು ಗಮನಕ್ಕೆ ಬಂದದ್ದಿದೆ. ಅದೆಲ್ಲ ಹಿಂದೆ ಈಗ ಪ್ರವಾಸವೆಂದರೆ ನುಣುಚಿಕೊಳ್ಳುವುದೇ ಹೆಚ್ಚು. ಅನ್ಯಜಾಗಗಳಲ್ಲಿ ರಾತ್ರೆ ಹೊತ್ತು ತಂಗುವುದೂ ವಿರಳ. ಸಣ್ಣ ಉಪ್ಪರಿಗೆ ಮೆಟ್ಟಿಲುಗಳನ್ನು ಏರಿದರೂ ಸಾಕು, ಶ್ವಾಸಸಂಚಾರ ಸರಿಯಾಗಲು ಮೂರು ನಾಲ್ಕು ನಿಮಿಷ ನಿಲ್ಲಬೇಕು. ಬ್ಲಡ್ ಪ್ರೆಶರ್‌ನ ಮಾತ್ರೆಗಳನ್ನೂ ಇನ್ಸುಲಿನ್ ಚುಚ್ಚುಮದ್ದಿನ ಟ್ಯೂಬುಗಳನ್ನು ಜತೆಗೆ ಒಯ್ಯುವುದೆಂದರೆ ಮತಾರಗಳೆ. ಹೀಗಿದ್ದರೂ ಶ್ರೀಲಂಕಾದಿಂದ ಬಂದ ಆಮಂತ್ರಣವನ್ನು ಸ್ವೀಕರಿಸಿದ. ಆಗ್ನೇಯ ಏಷ್ಯಾದ ಅಭಿವೃದ್ಧಿಯಲ್ಲಿ ಪತ್ರಿಕೆಗಳ ಪಾತ್ರದ ಕುರಿತು ಅದ್ಭುತವಾದ ಜ್ಞಾನವನ್ನೋ ಸಲಹೆಯನ್ನೋ ನೀಡುವುದಕ್ಕಲ್ಲ, ಆಮಂತ್ರಣ ಬಂದುದು ಶ್ರೀಲಂಕಾದಿಂದ ಎಂಬ ಕಾರಣಕ್ಕಾಗಿ. ಅಲ್ಲಿ ಆತ ಕಾಣಬೇಕೆಂದು ಸದಾ ಹಂಬಲಿಸಿದ್ದ ಒಂದು ಜಾಗವಿದೆ—ಕಡುಗಣ್ಣಾವ.

ವಿಮಾನ ನಿಲ್ದಾಣಕ್ಕೆ ಎರಡು ಗಂಟೆ ಮೊದಲು ತಲುಪಿದರೆ ಸಾಕೆಂದು ಮದರಾಸು ಕಛೇರಿಯ ಸಹೋದ್ಯೋಗಿಗಳು ಹೇಳಿದ್ದರು. ವಿದೇಶೀ ಪ್ರವಾಸಿಗಳು ಮೂರು ಗಂಟೆ ಮೊದಲೇ

ರಿಪೋರ್ಟ್ ಮಾಡಬೇಕೆಂದು ನಿಯಮವಿದ್ದರೂ ಯಾರೂ ಅದನ್ನು ಪಾಲಿಸುವುದಿಲ್ಲ. ಆದರೂ ಸಾಕಷ್ಟು ಮುಂಚಿತವಾಗಿಯೇ ತಲುಪಿದ. ಎಲ್ಲರ ತಪಾಸಣೆ ಮುಗಿದು ಏಣಿ ಸರಿಸುವ ಮೊದಲು ತನ್ನ ಹೆಸರು ಕೂಗುತ್ತಿದ್ದುದು ಕಿವಿಗೆ ಬಿದ್ದ ಬಳಿಕವೇ ಬೇಗ ಬೇಗ ಸಾಗಿ ಓಡೋಡುತ್ತ ವಿಮಾನವನ್ನು ಏರಿ ಕುಳಿತುಬಿಡುತ್ತಿದ್ದ ಕಾಲವೊಂದಿತ್ತು. ಈಗ ಅವಸರ ಅವಸರವಾಗಿ ಏನೇ ಮಾಡಿದರೂ ಎದೆಯ ಡವಡವ ತೀವ್ರವಾಗುತ್ತದೆ.

ಡಿಪಾರ್ಚರ್ ಲೌಂಚ್ ಬಹುಮಟ್ಟಿಗೆ ಖಾಲಿಯಾಗಿಯೇ ಇತ್ತು. ವಿಮಾನ ಸರಿಯಾದ ಸಮಯಕ್ಕೇ ಬಂತು. ಪ್ರಯಾಣಿಕರು ಒಮ್ಮೆಲೇ ತುಂಬಿಕೊಂಡರು. ತಮ್ಮ ಪಾತ್ರೆ ಪಡಿಗಳೊಂದಿಗೆ ಗಲಭೆಯೆಬ್ಬಿಸುತ್ತ ಶ್ರೀಲಂಕನ್ನರ ಒಂದು ಗುಂಪು ಬಂತು.

ಹೊಸ ರಿಕ್ರೂಟ್‌ಗಳಿಗೆ ಪತ್ರಿಕೋದ್ಯಮದ ಕುರಿತು ಕ್ಲಾಸು ಮಾಡುವಾಗ ಹೇಳುವ ಮಾತಿದೆ: ಯಾವಾಗಲೂ ಕಣ್ಣನ್ನೂ ಕಿವಿಯನ್ನೂ ತೆರೆದಿಟ್ಟುಕೊಳ್ಳಿ. ವರದಿ ಮಾಡಲು ಯೋಗ್ಯವಾದ ಒಂದು ಕಥೆ ಯಾವುದೇ ಕ್ಷಣದಲ್ಲಿ ನಿಮ್ಮ ಸುತ್ತಮುತ್ತ ಇದ್ದೇ ಇರುತ್ತದೆ.

ಇವರು ನಿರ್ಗತಿಕ ವಲಸೆಗಾರರೇ? ಅಲ್ಲ. ನಿರ್ಗತಿಕ ವಲಸೆಗಾರರನ್ನು ಒಯ್ಯುವ ವಿಮಾನದಲ್ಲಿ ಇವರನ್ನು ಮರಳಿಸುತ್ತಿದ್ದಾರೆ. ಮದ್ರಾಸ್ ಮಾರ್ಕೆಟ್‌ನಿಂದ ಮಿಕ್ಸಿಗಳು, ಗ್ರೈಂಡರ್‌ಗಳು ಮಾತ್ರವಲ್ಲದೆ ತರಕಾರಿಯನ್ನು ಕೂಡ ಇವರು ಒಯ್ಯುತ್ತಿದ್ದಾರಲ್ಲ! ಬೇಕಾದರೆ ಇವರಲ್ಲಿ ಯಾರಾದರೂ ಒಂದಿಬ್ಬರ ಬಳಿ ಹೋಗಿ ಸಲುಗೆ ಬೆಳೆಸಿ ಮಾತನಾಡಿಸಬಹುದು. ವಸ್ತುಗಳ ಬೆಲೆಯಲ್ಲಿನ ತಾರತಮ್ಯದ ಬಗ್ಗೆ. ನಮ್ಮ ಪ್ರಧಾನಮಂತ್ರಿ ಹತ್ಯೆಯಾದ ಸುದ್ದಿ ತಿಳಿದಾಗಿನ ಅವರ ಅನಿಸಿಕೆಯ ಕುರಿತು ತಡವಾಗಿಯಾದರೂ ಒಂದು 'ಪ್ರತಿಕ್ರಿಯೆ' ಸಿದ್ಧವಾದರೆ ಹೇಗೆ? ಇಲ್ಲ...ಒಂದು ವರದಿ ಬರೆಯುವುದಿಲ್ಲ...

ಶ್ರೀಲಂಕನ್ನರ ಪೈಕಿ ಹೆಂಗುಸರೂ ಇದ್ದರು. ಆತ ತಾಯಿಯ ಕುರಿತು ನೆನಪಿಸಿಕೊಂಡ. ಆಕೆ ಹೇಳುತ್ತಿದ್ದುದು 'ಶಿಂಗಿಳಿತಿ' ಎಂದಾಗಿತ್ತು. ಶಿಂಗಳರ ಮತ್ತು ಶಿಂಗಳಿತಿಯರ ದೇಶ.

ಅವರ ಗುಂಪಿಗೆ ಕೊನೆಯದಾಗಿ ಸೇರಿಕೊಡವರು ಎರಡು ಬೌದ್ಧ ಭಿಕ್ಷುಗಳು. ಅವರು ಈತ ಕುಳಿತಿದ್ದ ಸೀಟಿನ ಬಳಿ ಹೋಗಿ ಹತ್ತಿರದಲ್ಲೇ ಇದ್ದ ಎರಡು ಖಾಲಿ ಸೀಟುಗಳಲ್ಲಿ ಪಾತ್ರೆ ಪಡಿಗಳನ್ನು ಇಳಿಸುತ್ತಿದ್ದಾಗಲೇ ಗಮನಿಸಿದ್ದು—ಅವರಲ್ಲೊಬ್ಬಳು ಭಿಕ್ಷುಣಿ.

ಎಂಭತ್ತೊಂದರಲ್ಲೇ ಒಂದು ಬಾರಿ ಈ ಪ್ರವಾಸ ಸಿದ್ಧವಾಗಿತ್ತು. ಪತ್ರಿಕಾ ವರದಿಗಾರನಾದ ಗೋವದ ಒಬ್ಬ ಸಹೋದ್ಯೋಗಿ, ಸಿಲೋನ್ ಒಬ್ಸರ್ವರ್‌ನಲ್ಲಿ ಕೆಲಸ ಮಾಡಿದ್ದವನು, ಬೇಕಾದ ಅನುಕೂಲತೆಗಳನ್ನು ಮಾಡಿಕೊಡುತ್ತೇನೆಂದು ಹೇಳಿದ್ದ. ಬೇಕಾದ ಜಾಗಗಳಿಗೆ ಕರೆದೊಯ್ಯುವ ಜವಾಬ್ದಾರಿಯನ್ನೂ ವಹಿಸಿದ್ದ. "ಭಾರತೀಯ ಪತ್ರಿಕಾವರದಿಗಾರನೊಬ್ಬನ ಪತ್ತೇದಾರಿ ಸಾಹಸ"ವನ್ನು ಬರೆಯಲು ಸಿದ್ಧನೂ ಆಗಿದ್ದ. ಅಂತ್ಯರ್ಯುದ್ಧ ಕಾರಣವಾಗಿ ತುರ್ತು ಪರಿಸ್ಥಿತಿ ಘೋಷಿಸಿದ್ದು ಪ್ರಯಾಣ ಹೊರಡಬೇಕಾದ ಮೂರು ದಿನ ಹಿಂದೆ. ಪಿರೇರಾ ಸಂಪರ್ಕಿಸಿ ಹೇಳಿದ್ದ—

ಪ್ರವಾಸ ಮುಂದೆ ಹಾಕೋಣ. ನೆರೆಯ ದೇಶವಲ್ಲವೆ? ಯಾವಾಗ ಬೇಕಿದ್ದರೂ ಹೋಗಬಹುದಲ್ಲ— ಎಂದು ಭಾವಿಸಿ ಇಷ್ಟರತನಕ ಪ್ರವಾಸವನ್ನು ಮುಂದೆ ಹಾಕಿದ್ದೇ ತಪ್ಪಾಯಿತು.

ಶ್ರೀಲಂಕಾಕ್ಕೆ ಹೊರಟ ವಿಮಾನ ಬೋರ್ಡಿಂಗ್ ಅನೌನ್ಸ್ ಮಾಡಿತು. ಪ್ರವಾಸಿಗಳ ಗುಂಪು ಕ್ಯೂ ಪಾಲಿಸದೆ ಒಟ್ಟಿಗೆ ಮುನ್ನುಗ್ಗುತ್ತಿದೆ. ಹಳದಿ ಬಟ್ಟೆ ಧರಿಸಿದ ಭಿಕ್ಷುಣಿಯೂ ಬಲಪ್ರದರ್ಶನ ವಿಚಾರದಲ್ಲಿ ಒಂದಿಷ್ಟು ಹಿಂದಿಲ್ಲ.

ಹತ್ತಿರವಿದ್ದ ಯುವಕ ನಕ್ಕ : "ಲುಕೆಟ್ ದೇಟ್"

ಆತನೂ ನಕ್ಕ : "ಟು ಕೊಲಂಬೋ?"

"ಯಸ್"

"ಅಲ್ಲಿ ಈಗ ವಾತಾವರಣ ಹೇಗಿದೆ?"

ಯಾವ ವಾತಾವರಣದ ಕುರಿತು ಕೇಳುತ್ತಿರುವುದು? ರಾಜಕೀಯ ವಿದ್ಯಮಾನಗಳ ಬಗ್ಗೆಯೋ ಮಳೆಗಾಲದ ಬಗ್ಗೆಯೋ?

"ಗೊತ್ತಿಲ್ಲ"

ಮನದಲ್ಲೆ ಹೇಳಿಕೊಂಡ—ಕೊಲಂಬೋ ಎಂದಲ್ಲ ಹೇಳಬೇಕಾದ್ದು, ಕಲಂಬೋ! ಕಿಟಕಿಯ ಬಳಿಯ ಸೀಟಾಗಿದ್ದರೂ ಹೊರಗಿನ ದೃಶ್ಯ ಕಾಣದಂತೆ ರೆಕ್ಕೆ ಮೇಲೇರಿ ನಿಂತಿತು. ಪರವಾಯಿಲ್ಲ, ಒಂದು ಪ್ರವಾಸ ಕಥನ ಬರೆಯುವ ಉದ್ದೇಶವಿಲ್ಲ. 'ಆನ್ ಡ್ಯೂಟಿ'ಯ ಕರ್ತವ್ಯಕ್ಕಾಗಿ ಹೋದ ದೇಶಗಳ ಕುರಿತು ಹಿಂದೆ ಏನೇನೋ ಬರೆದದ್ದಿದೆ. ವಿಮಾನ ನಿಲ್ದಾಣಕ್ಕೆ ಇಳಿಯುವಾಗ ಕಂಡ ಮೊದಲ ಮುಖದಿಂದಲೇ ಕೆಲವೊಮ್ಮೆ ಆರಂಭಿಸಿದ್ದಿದೆ.

ವಾಚು ನೋಡಿ ಲೆಕ್ಕ ಹಾಕಿದ. ಇನ್ನೂ ಹತ್ತು ನಿಮಿಷ ಬೇಕಾಗಬಹುದೆಂದು ಭಾವಿಸುತ್ತಿದ್ದಂತೆ ಮೊದಲ ಸೂಚನೆ ಬಂತು. ಆತ ಅವಸರವಸರವಾಗಿ ಇಮಿಗ್ರೇಶನ್‌ಗಿರುವ ಅರ್ಜಿ ಭರ್ತಿ ಮಾಡಿದ. ಹ್ಯಾಂಡ್‌ಬ್ಯಾಗನ್ನು ಮತ್ತೊಮ್ಮೆ ತೆರೆದು ನೋಡಿದ. ಪಾಸ್‌ಪೋರ್ಟು, ಟಿಕೆಟು, ಸೆಮಿನಾರ್‌ನ ಕುರಿತಾದ ಮಾಹಿತಿ ಕೇಂದ್ರದ ಪತ್ರಗಳು, ಫ್ಯಾಕ್ಸ್ ಸಂದೇಶಗಳು—ಎಲ್ಲವೂ ಭದ್ರವಾಗಿವೆ. ದೇಹ ಶಿಥಿಲವಾಗುವಾಗ ಅನಗತ್ಯ ಆತಂಕಗಳು ಭಯಗಳು ಇದ್ದದ್ದೇ. ರಾತ್ರೆ ಬಾಗಿಲ ಚಿಲಕ ಹಾಕಿದೆ ಎಂದು ಮಗಳು ಹೇಳಿದರೂ ಸ್ವತಃ ಇನ್ನೊಮ್ಮೆ ದೃಢಪಡಿಸಿಕೊಳ್ಳುವುದು ಯಾಕೆ?

ಡಾಕ್ಟರ್ ರಾಮಚಂದ್ರನ್ ಹೇಳಿದ್ದರು : "ಮಿ. ವೇಣುಗೋಪಾಲನ್, ಪ್ರಾಯವಾಗುವಾಗ ಕೆಲವರಿಗೆ ಹಾಗೇನೆ"

ಏರ್ ಇಂಡಿಯಾದವರು ತಿಳಿಸಿದ್ದ ತಾರೀಕಿನಲ್ಲಿನ ಪ್ರಮಾದ. ಟೋಕಿಯೋ ವಿಮಾನ

ನಿಲ್ದಾಣದಿಂದ ಹೊರಹೋದಾಗ ಬರಮಾಡಿಕೊಳ್ಳಲು ಯಾರೂ ಇಲ್ಲ. ಏಷ್ಯಾ ಸೆಂಟರಿಗೆ ಟ್ಯಾಕ್ಸಿಯಲ್ಲಿ ಹೋದ. ಮತ್ತೊಂದು ಗಂಟೆಯೊಳಗೆ, ಮುಂದಿನ ದಿನ ಬರಬಹುದೆಂದು ಲೆಕ್ಕ ಹಾಕಿದ್ದ ಗೆಳೆಯನ ಮನೆಬಾಗಿಲು ಬಡಿದು ಮನೆಯಾಕೆಯನ್ನು ದಿಗ್ಭ್ರಮೆಗೊಳಿಸಿದ. ಅಂದೆಲ್ಲ ಸಾಹಸವು ಸಹಯಾತ್ರಿಕನಾಗಿ ಸದಾ ಜತೆಗಿರುತ್ತಿತ್ತು.

ಸೆಮಿನಾರ್‌ನ ಜನಗಳು ಕಾಯುತ್ತಿರಬಹುದಲ್ಲವೆ? ತಲ್ಲಣ ಆರಂಭವಾಯಿತು. ವಿಮಾನ ನಿಲ್ದಾಣದಲ್ಲಿ ಪೆಟ್ಟಿಗೆ ಬರುವುದನ್ನೆ ಕಾಯುತ್ತಿದ್ದಾಗ ನೆನೆದ. ಇಲ್ಲಿ ಯಾವಾಗಲೋ ಒಂದು ಬಾಂಬು ಸ್ಫೋಟಿಸಿ ತುಂಬ ಜನ ಸತ್ತಿದ್ದಾರಲ್ಲವೆ? ಅದು ಯಾವಾಗ? ತಿಂಗಳುಗಳ ಹಿಂದೆ ಪ್ರಸಿಡೆಂಟ್ ಪ್ರೇಮದಾಸ ಸತ್ತದ್ದು. ನಗರ ಮಧ್ಯದಲ್ಲಿ ಒಂದು ಬಾಂಬ್. ಕೊಲೆ ದಾಂಧಲೆ ನಡೆಸುತ್ತ ಅಸುರರೂ ರಾಕ್ಷಸರೂ ಆಳಿದ ಈ ದ್ವೀಪಕ್ಕೆ ಹಿಂದೆ ಬುದ್ಧ ಬಂದ ಕಥೆ ನೆನಪಾಯಿತು.

ಕ್ರೂರಿಗಳ ಗುಂಪು ಸತ್ತುವರಿದಾಗ ಬುದ್ಧ ಮುಗುಳ್ನಕ್ಕ. ಆಗ ಬಿರುಗಾಳಿಯೆದ್ದಿತು. ಕೋಲ್ಮಿಂಚು ಫಳಾರನೆ ಮಿಂಚಿತು. ರಾಕ್ಷಸರು ಹೆದರಿ ನಡುಗಿದರು.

"ನನಗೆ ಕುಳಿತುಕೊಳ್ಳಲು ಒಂದು ಜಾಗ ಕೊಡಿ" ಬುದ್ಧನೆಂದ. "ನಮಗೆ ಭಯದಿಂದ ವಿಮೋಚನೆ ಕೊಡಿ. ಈ ದ್ವೀಪವನ್ನೆಲ್ಲ, ಬುದ್ಧಮಹಾತ್ಮಾ, ತಮಗೆ ನೀಡುತ್ತೇವೆ."

"ಇನ್ನೂ ನಿಮಗೆ ಭಯವಿಲ್ಲ."

ಹೆದರಬಾರದು, ಆತ ಸ್ವಯಂ ಆಜ್ಞಾಪಿಸಿಕೊಂಡ. ಬದುಕೆಂದರೆ ಸಾವಿನೊಂದಿಗೆ ಸಂಧಿ ಮಾಡಿಕೊಂಡ ಮಧ್ಯಂತರವಷ್ಟೆ? ಬರ್ಗ್‌ಮ್ಯಾನ್‌ನ 'ಸೆವೆನ್ತ್ ಸೀಲ್'ನ ಚದುರಂಗದಾಟ ನೆನಪಾಗಿ ಬಿಟ್ಟಿತು. ಭಯದಿಂದ ವಿಮುಕ್ತಿ ಪಡೆಯಲು ಈಗ ವೇದಾಂತ ಹಾಗೂ ಬೌದ್ಧತತ್ವಗಳ ಓದು.

ಅಪಾಯವು ಇಲ್ಲಿ ಯಾವಾಗಲೂ ಹೊಂಚು ಹಾಕುತ್ತಿದೆ ಎಂದು ತಿಳಿದುಕೊಳ್ಳಬೇಕು. ಹೊರರಾಜ್ಯಗಳಿಂದ ಬರುವ ಯಾವುದೇ ಆಮಂತ್ರಣಗಳನ್ನು ಬಿಡದ ಚೀಫ್ ಎಡಿಟರ್ ಈ ಸೆಮಿನಾರಿಗೆ ತನ್ನನ್ನು ನಿಯೋಜಿಸಿದ್ದುದು ಅದರಿಂದಲೇ ಇರಬೇಕು. ಕಡುಗಣ್ಣಾವದ ಗುಟ್ಟು ಅವರಲ್ಲೇನೂ ಹೇಳಿದ್ದಿಲ್ಲ. ಎಂಥ ನಿರಾಳ. ಹೆಸರು ಬರೆದ ಒಂದು ಫಲಕವನ್ನು ಹಿಡಿದಿದ್ದ ಒಬ್ಬ ಯುವಕ ಕಾದು ನಿಂತಿದ್ದಾನೆ. ಅವನ ಬಳಿಗೆ ಸೂಟ್‌ಕೇಸ್ ಎಳೆಯುತ್ತ ಹೋದ.

"ಪಿ.ಕೆ. ವೇಣುಗೋಪಾಲ್ ನಾನೇ". ಸೂಟ್‌ಕೇಸಿನ ಜವಾಬ್ದಾರಿ ಆತ ವಹಿಸಿಕೊಂಡ. ಹೊರಗೆ ಬಂದ.

ಎಂದಿಗೂ ಹೋಗಲು ಸಾಧ್ಯವೇ ಆಗದೆಂದು ಭಾವಿಸಿದ್ದ ದೇಶಕ್ಕೆ ಇಗೋ ಬಂದುದಾಯಿತು. ತಡವಾಗಿಯಾದರೂ ಶ್ರೀಲಂಕಾ ಆಮಂತ್ರಿಸಿದೆ. ಟ್ಯಾಕ್ಸಿ ಹೊರಟಿತು. ಗೂಡಂಗಡಿಗಳೂ ಸಣ್ಣ ವರ್ಕ್‌ಶಾಪ್‌ಗಳೂ ಬೀದಿಯನ್ನು ನೋಡುತ್ತಿದ್ದಾಗ ಅನ್ನಿಸಿತು—ಚಂಜರಕುಳಂ ಪೇಟೆಯ ಹಾಗೆಯೇ

ಇದೆ. ವಿಮಾನ ನಿಲ್ದಾಣ ಇಷ್ಟು ದೂರದಲ್ಲಿದೆ ಎಂದು ಭಾವಿಸಿರಲಿಲ್ಲ. ನಗರಕ್ಕೆ ಮೂವತ್ತೈದು ನಿಮಿಷ. ಹೋಟೆಲಿನ ರಿಜಿಸ್ಟರ್‌ನಲ್ಲಿ ಸಹಿ ಹಾಕುವಾಗ—

"ವೆಲ್‌ಕಂ ಮಿ. ವೇಣುಗೋಪಾಲನ್! ನಾನು ಆರ್ಲ್ಗೀ ಗುಣತಿಲಕೆ."

ಎರಡು ಬಾರಿ ದೂರವಾಣಿಯಲ್ಲಿ ಮಾತನಾಡಿದ್ದೆ. ಗುಂಡಗಿನ ಕಣ್ಣುಗಳು. ಗದ್ದದ ಎಲುಬಲ್ಲಿ ಗಮನಕ್ಕೆ ಬಾರದೆ ಬಾಕಿಯಾಗಿದೆ ಎಂಬಂತೆ ಚಿಕ್ಕದೊಂದು ಗಡ್ಡದ ಸೂಚನೆ. ಯಾವನೋ ಹಳೆಯ ನೀಗ್ರೋ ಗಾಯಕನೊಬ್ಬನ ಚಹರೆಯಿರುವಂತೆ ಅನಿಸಿತು, ಹೆಸರು ನೆನಪಿಲ್ಲ.

ಕಪ್ಪು ಸೂಟಿನೊಳಗೆ ಆತ ಸಂಪೂರ್ಣ ಬೆವರಿ ಒದ್ದೆಯಾಗುತ್ತಿದ್ದಾನೆನ್ನಿಸಿತು. ನಾಲ್ಕನೇ ಅಂತಸ್ತಿನ ಕೊಠಡಿಯಲ್ಲಿ ನಿಂತು ನೋಡಿದರೆ ಸಮುದ್ರದ ಒಂದು ಭಾಗ ಕಾಣಬಹುದು. ಮೇಲೆ ಬಾವುಟ ಹಾರುತ್ತಿರುವ ಕಟ್ಟಡ. ಅದರ ಮೇಲಿಂದ ಒಂದು ಹೆಲಿಕಾಪ್ಟರ್ ಹಾರುತ್ತಿರುವುದನ್ನು ನೋಡುತ್ತ ನಿಂತಿದ್ದಂತೆ ಗುಣತಿಲಕೆ ಹೇಳಿದ :

"ಸೆಕ್ಯೂರಿಟಿ. ಪ್ರೆಸಿಡೆಂಟರ ಕಛೇರಿ."

ವೇಣು ಕಿಟಿಕಿಯ ಕರ್ಟನ್ ಸರಿಸಿದ.

"ನೋಡಿ. ನೇವೆಲ್ ಬೋಟುಗಳು ಮುಂಭಾಗದಲ್ಲಿ ಗಾರ್ಡ್ ಡ್ಯೂಟಿಯಲ್ಲಿವೆ."

ಶ್ರೀಲಂಕಾಕ್ಕೆ ಮೊದಲ ಬಾರಿ ಬರುತ್ತಿರುವುದೆಂದು ಹೇಳಿದ. ಹಿಂದೆ ಯಾವಾಗಲೋ ಬರಬೇಕೆಂದು ಭಾವಿಸಿದ್ದ. ಯಾಕೋ ಸಾಧ್ಯವಾಗಲಿಲ್ಲ. ಪೂರ್ವ ಕಥೆಗಳನ್ನು ಈಗ ಬಿಚ್ಚುವುದು ಬೇಡವೆಂದು ನಿರ್ಧರಿಸಿದ. "ಭಯಂಕರ ಜನದಟ್ಟಣೆಯಿರುವ ದಿನವಿದು. ಹಾಗಾಗಿ ಏರ್‌ಪೋರ್ಟಿಗೆ ಬರಲಾಗಲಿಲ್ಲ".

"ಪರವಾಯಿಲ್ಲ. ಇಲ್ಲಿಗೆ ತಲಪಿ ಆಯಿತಲ್ಲ ಮಿ. ಗುಣತಿಲಕೆ."

"ಏನೂ ಮುಜುಗರವಿಲ್ಲದೆ ನನ್ನನ್ನು ಆರ್ಲ್ಗೀ ಎಂದು ಕರೆಯಿರಿ ಸಾಕು. ನಾವು ಏನಾದರೂ ಒಂದಿಷ್ಟು ಕುಡಿಯೋಣ."

ರೂಮಿನ ಸಣ್ಣ ಫ್ರಿಜ್‌ನಿಂದ ಆತ ಎರಡು ಟಿನ್ ಬಿಯರುಗಳನ್ನು ಹೊರತೆಗೆದ.

ವೇಣು ಬೇಡವೆಂದ.

"ಆರೆಂಜ್ ಜ್ಯೂಸ್? ಕೋಕ್?"

ಏನೂ ಬೇಡ. ಪ್ರತಿದಿನ ಚುಚ್ಚಿಕೊಳ್ಳುವುದು ನಲವತ್ತು ಯೂನಿಟ್ ಇನ್ಸುಲಿನ್. ತಾಪತ್ರಯಗಳ ಕಥೆ ಕೇಳಿಸಬೇಕಾಗಿಲ್ಲ. "ವಿದ್ ಯುವರ್ ಪರ್ಮಿಷನ್"

ಆಶ್ಲೀ ಮೊದಲ ಬಿಯರ್, ಟಿನ್ನಿನಲ್ಲೆ ಕುಡಿದ, ನಿಮಿಷವೊಂದರಲ್ಲಿ. ಎರಡನೆಯದನ್ನು ಒಡೆದು ಗ್ಲಾಸಿಗೆ ಸುರಿದು ಒಂದು ಸಿಗರೇಟು ಹಚ್ಚಿದ.

"ಈಗ ಒಂದಿಷ್ಟು ನಿರಾಳವಾಯಿತು. ಎಂಥ ದಿನ ಇದು!"

"ಈಗ ಸ್ಥಿತಿಗತಿಗಳು ಹೇಗಿವೆ? ಒಟ್ಟಿನಲ್ಲಿ ಶಾಂತವಾಗಿದೆಯೆ?"

"ಸ್ಥಿತಿಗತಿ ಯಾವಾಗಲೂ ಶಾಂತವೇ. ಆಕಸ್ಮಿಕಗಳು ಯಾವಾಗ ಬೇಕಾದರೂ ಸಂಭವಿಸಿಯೂ ಬಿಡಬಹುದು. ಅದೋ ಆ ಮೇಲ್ಮನೆ ಕಾಣುತ್ತಿದೆಯಲ್ಲ, ಗೋಪುರದಂಥ ಮೇಲ್ಮನೆ. ಅದರ ಕೆಳಗೆಯೇ ರಾಮದಾಸ್‌ರನ್ನು ಕೊಲ್ಲಲು ಬಾಂಬು ಸ್ಫೋಟಿಸಿದ್ದು. ಕೆನಡಿ ಹೇಳಿದ್ದು ಸರಿ—ಯಾರಿಗಾದರೂ ನನ್ನನ್ನು ಕೊಲ್ಲಬೇಕಾದರೆ ಎಂಥ ರಕ್ಷಣಾ ವ್ಯವಸ್ಥೆಗೂ ಅದನ್ನು ತಡೆಯಲು ಸಾಧ್ಯವಿಲ್ಲ. ನನ್ನ ಪ್ರಾಣಕ್ಕೆ ಬದಲಾಗಿ ಸ್ವತಃ ಜೀವ ತೆರಲು ಒಬ್ಬನು ಸಿದ್ಧನಾಗಿ ಬಿಟ್ಟರೆ ಅಷ್ಟೇ ಸಾಕು."

ಆಶ್ಲೀ ಗುಣತಿಲಕೆ ಇನ್ಫರ್ಮೇಶನ್ ಇಲಾಖೆಯಲ್ಲಿ ಅಧಿಕಾರಿ. ಪ್ರಾಯ ಮೂವತ್ತೈದು ದಾಟಿರಲಾರದು. ಪ್ರಾಯ ಸಂದ ಅಧಿಕಾರಿಯೊಬ್ಬನ ಪ್ರೌಢ ಧ್ವನಿಯಲ್ಲಿ ಆತ ಮಾತನಾಡುತ್ತಿರುವುದನ್ನು ವೇಣುಗೋಪಾಲ ಗಮನಿಸಿದ.

"ಹನ್ನೆರಡು ವರ್ಷದವರನ್ನು ಈಗ ಎಲ್.ಟಿ.ಟಿ.ಇ. ರಿಕ್ರೂಟ್ ಮಾಡುತ್ತಿರುವುದು. ಸೈನಿಕ ಕ್ಯಾಂಪಿನ ಸಮೂಹಹತ್ಯೆ ನಡೆದ ಮೇಲೆ ಪ್ರತೀಕಾರ ತೀರಿಸಲು ಹದಿನೈದು ವರ್ಷದವರು ನಮ್ಮ ರಿಕ್ರೂಟಿಂಗ್ ಆಫೀಸುಗಳಲ್ಲಿ ಪ್ರತಿದಿನ ಕ್ಯೂ ನಿಲ್ಲುತ್ತಾರೆ. ಶೆಲ್ಲಿ ಹೇಳಿದ್ದನ್ನು ಕೇಳಿದ್ದೀರಾ?"

"ಯಾರು?"

"ಶೆಲ್ಲಿ. ಪಿ.ಬಿ. ಶೆಲ್ಲಿ. ಇಂಗ್ಲಿಷ್ ಕವಿ. ಯುದ್ಧವು ಆಡಳಿತ ನಡೆಸುವವರಿಗೆ ವಿನೋದ, ಪುರೋಹಿತರಿಗೆ ಆನಂದ, ನ್ಯಾಯವಾದಿಗಳಿಗೆ ತಮಾಷೆ. ಬಾಡಿಗೆ ಕೊಲೆಗಡುಕರಿಗೆ ವ್ಯಾಪಾರ ಕೂಡ."

ಐದು ನಿಮಿಷಗಳೊಳಗೆ ಆತ ಕೆನಡಿಯನ್ನೂ ಶೆಲ್ಲಿಯನ್ನೂ ಕೋಟ್ ಮಾಡಿದ್ದಾನೆ. ಅತಿಥೇಯನಾಗಿ ಆಶ್ಲೀ ಸಿಕ್ಕಿದ್ದಕ್ಕೆ ಯಾರಿಗೋ ಕೃತಜ್ಞತೆ ಸಲ್ಲಿಸದೆ ಇರುವುದು ಹೇಗೆ?

"ಮಿ. ಆಶ್ಲೀ, ನಾನು ಪತ್ರದಲ್ಲಿ ಬರೆದಿದ್ದೆ. ನನಗೆ ಕೆಲವು ಜಾಗಗಳನ್ನು ನೋಡಲು—"

"ನಾಳೆಯ ಸೆಮಿನಾರ್ ಕಳೆದರೆ ಸ್ಯಾಟರ್‌ಡೇ ಸಂಡೇ–ನಾವು ಸೈಟ್ ಸೀಯಿಂಗ್‌ಗೇ ಕಾದಿರಿಸಿದ್ದೇವೆ. ನೋಡಬೇಕಾದ್ದು ಈ ದೇಶದಲ್ಲಿ ತುಂಬಾ ಇದೆ. ಟೂರಿಸಂ ಇಲಾಖೆಯ ಒಬ್ಬರು ಜತೆಗಿರುತ್ತಾರೆ."

"ಪ್ಲೀಸ್ ಮಿ. ಆಶ್ಲೀ ನೀವೂ ಬನ್ನಿ."

"ನೋಡೋಣ, ಐತಿಹಾಸಿಕ ಸ್ಮಾರಕಗಳನ್ನು ಎಷ್ಟು ಸಲ ನೋಡಿದರೂ ನನಗೆ ಬೇಜಾರಿಲ್ಲ. ನೋಡೋಣ. ಯಾವುದಾದರೂ ನಿರ್ದಿಷ್ಟ ಜಾಗಗಳು?"

"ಕ್ಯಾಂಡಿ"

"ಅದನ್ನು ಎಲ್ಲರೂ ನೋಡುತ್ತಾರೆ. ಹದಿನಾಲ್ಕನೇ ಶತಮಾನದ ರಾಜಧಾನಿ. ಮೂರು ಗಂಟೆಗಳ ದೂರ. ಮತ್ತೆ?—"

ಸಂದೇಹಪಡುತ್ತ ಹೇಳಿದ : "ಅದರ ಹತ್ತಿರವೇ ಎಂದು ಕಾಣುತ್ತದೆ. ಕಡುಗಣ್ಣಾವ"

"ಓ ಕಡುಗಣ್ಣಾವ ನಾವು ಆ ದಾರಿಯಾಗಿ ಹೋಗಲಿದ್ದೇವೆ. ನನಗೊತ್ತು ನನಗೊತ್ತು."

ಆಶ್ಲೀಯ ಮಾವ ಅಲ್ಲಿಯವರು. ಕೊಲಂಬೋವಿಗೆ ಅವರು ವಾಸ್ತವ್ಯ ಬದಲಾಯಿಸಿದ್ದು ಎಂಟು ಹತ್ತು ವರ್ಷಗಳ ಹಿಂದೆ.

"ಅವರೀಗ—"

"ತೀರಿಕೊಂಡರು. ಕಳೆದ ಡಿಸೆಂಬರ್‌ನಲ್ಲಿ."

ಕೇರಳದಿಂದ ಬಂದ ವಯಸ್ಕ ಪತ್ರಕರ್ತನೊಂದಿಗೆ ಕಡುಗಣ್ಣಾವ ಯಾಕಪ್ಪ ಬೇಕಾಯಿತು ಎಂದು ಆತ ಕೇಳಬಹುದೆಂದು ಭಾವಿಸಿದ. ಕೆಲವು ನೆಂಟರು ಅಲ್ಲಿ ಇದ್ದರು. ಎಂದಷ್ಟೇ ಉತ್ತರ ಹೇಳೋಣ ಎಂದೂ ಲೆಕ್ಕ ಮಾಡಿಟ್ಟ. ಆಶ್ಲೀ ವಾಚು ನೋಡಿದ ಎದ್ದು ನಿಂತ.

"ನಾಳೆ ಐದಕ್ಕೆ ಸೆಮಿನಾರ್. ನಾಲ್ಕಕ್ಕೆ ಸಿದ್ಧವಾಗಿ ಬಂದರೆ ಸಾಕು."

ಆತ ವಿಸಿಟಿಂಗ್ ಕಾರ್ಡ್ ಕೊಟ್ಟು ಹೇಳಿದ : "ಅದರ ಮಧ್ಯೆ ಏನಾದರೂ ಅಗತ್ಯವಿದ್ದರೆ ಕರೆಯಿರಿ. ಹೇವ್ ಎ ನೈಸ್ ರಸ್ಟ್."

ಉಳಿದ ಬಿಯರ್ ಟಿನ್ನುಗಳನ್ನು ಫ್ರಿಜ್‌ನ ಮೇಲಿಟ್ಟು ಹೊರಗೆ ಹೋದ. "ಬೈ".

ಸ್ವಲ್ಪ ಹೊತ್ತಿನ ಬಳಿಕ ಕೆಳಗಿಳಿದು ಬಂದು ಹೋಟೆಲಿನ ಲಾಬಿಯಲ್ಲಿ ಸುಮ್ಮನೆ ನಡೆದ. ಪುಸ್ತಕಗಳು, ಸ್ಟೇಷನರಿ ಇತ್ಯಾದಿಗಳನ್ನು ಮಾರುವ ಫ್ಲೋರಿಗೆ ಹತ್ತಿದ. ಇಂಡಿಯಾಕ್ಕೆ ಹೋಲಿಸಿದರೆ ಬೆಲೆ ಎಲ್ಲದಕ್ಕೂ ಸ್ವಲ್ಪ ಹೆಚ್ಚು ಅನ್ನಿಸಿತು.

ಹೋಟೆಲಿನ ಹೊರಗೆ ಸ್ವಲ್ಪ ಹೊತ್ತು ನಿಂತ. ಸಮುದ್ರ ತೀರದಲ್ಲಿ ಚಾಚಿಕೊಂಡ ರಸ್ತೆಯ ದೀಪಗಳು ಒಮ್ಮೆಲೆ ಹತ್ತಿಕೊಂಡುವು. ಮುಂದೆ ಒಂದು ಮಿಲಿಟರಿ ಚೆಕ್‌ಪೋಸ್ಟ್. ಆತ ಹಿಂದಿರುಗಿ ನಡೆದು ರೂಂ ತಲುಪಿದ. ಏಳು ಗಂಟೆಗೆ ರೂಂ ಸರ್ವಿಸಿನ ಊಟಕ್ಕೆ ಆರ್ಡರ್ ಮಾಡಿದ. ಡ್ರೆಸ್ ಬದಲಾಯಿಸಿ ಲುಂಗಿಯುಟ್ಟುಕೊಂಡು ಸೋಫಾದಲ್ಲಿ ನಿರಾಳವಾಗಿ ಕಾಲು ಮಡಚಿ ಮಲಗಿದ.

ಬೀಗದ ಕೈಗೊಂಚಲನ್ನು ಬೆರಳಲ್ಲಿ ತಿರುಗಿಸುತ್ತ ಸಣ್ಣ ಕಬ್ಬಿಣದ ಪೆಟ್ಟಿಗೆಯ ಮೇಲೆ ಕುಳಿತ

ಹುಡುಗಿಯ ಮುಖ ಹೇಗಿತ್ತು? ಶಿಂಗಳತಿ ಹುಡುಗಿಯ ಮುಖ? ಆಗ ಮನೆಯಲ್ಲಿ ಎರಡು ಕ್ಯಾಲೆಂಡರ್‌ಗಳಿದ್ದುವು. ಒಂದು ಬೇಬಿ ಸರೋಜಳ ಚಿತ್ರದ್ದು ಆಗಿತ್ತೆ? ಅಥವಾ ಅಶ್ವತ್ಥಮ್ಮಳೋ? ಸಿನೆಮಾದ ಯಾರೋ ಆಗಿದ್ದರು. ಇನ್ನೊಂದು ಕ್ಯಾಲೆಂಡರ್—ತನ್ನ ತಾಯಿಯ ಆಭರಣದ ಪೆಟ್ಟಿಗೆಯಲ್ಲಿ ಯಾರೋ ಹುಡುಕಾಟ ನಡೆಸುತ್ತಿರುವಾಗ ಕೆಂಪಡರಿದ ಕಣ್ಣುಗಳಿಂದ ಶ್ರೀಕೃಷ್ಣ ಆತಂಕಪೂರ್ವಕವಾಗಿ ನೋಡುತ್ತಿರುವಂತಿದೆ. ಸಿಲೋನ್‌ನಿಂದ ಬಂದ ಮಗುವಿನ ಮುಖ ಕ್ಯಾಲೆಂಡರಿನಲ್ಲಿದ್ದ ಮುಖಕ್ಕಿಂತ ಸುಂದರವಾಗಿತ್ತು ಎಂಬುದು ನಿಜ. ಚೌಕ ಮುಖ. ಕೊರಳವರೆಗೂ ಬರುವಂತೆ ಕೂದಲು...ಈಗ ಚಿತ್ರ ತುಂಬ ಅಸ್ಪಷ್ಟವಾಗಿದೆ, ಮನಸ್ಸಿನಲ್ಲಿ.

ಸದ್ಯದ ಪ್ರವಾಸ ನಿಶ್ಚಯವಾದ ಬಳಿಕ ವೇಣುಗೋಪಾಲ ದೇವಿಯಕ್ಕನ ಮನೆಗೆ ಹೋಗಿದ್ದ. ದೇವಿಯಕ್ಕ ಅವನ ತಂದೆಯ ಸೊಸೆ. ಅವಳ ಕಿರಿಯ ಮಗಳ ಮದುವೆ ಸಮಾರಂಭದಲ್ಲಿ ತನಗೆ ಪಾಲ್ಗೊಳ್ಳಲು ಸಾಧ್ಯವಾಗುತ್ತಿಲ್ಲ ಎಂದು ತಿಳಿಸುವುದಕ್ಕಾಗಿ ಹೋದುದು.

“ಇದೂ ಒಂದು ಮುಗಿದುಬಿಟ್ಟರೆ ದೊಡ್ಡ ಸಮಾಧಾನ. ಯಾಕೋ ಒಳ್ಳೆಯ ಕಾಲ ಬಂದುದಕ್ಕೆ ಹೀಗೊಂದು ಆಲೋಚನೆ ಬಂತು.”

ಮದುವೆಗೆ ಬರುವುದು ಸಂಶಯ ಎಂದ.

“ಮಕ್ಕಳು ಬಂದಾರು...ನಾನು...ಆಗ ನಾನು ಸಿಲೋನ್‌ನಲ್ಲಿರುತ್ತೇನೆ.” ದೇವಿಯಕ್ಕನಿಗೆ ಸಂಕಟವಾಯಿತು.

“ನೌಕರಿ ಸಂಬಂಧಿ ಜಂಜಡ. ಒಂದು ಮೀಟಿಂಗು. ಪತ್ರಿಕೆಯವರದು. ಮಾತ್ರವಲ್ಲ ಸಿಲೋನ್‌ನಲ್ಲಿ ನಡೆಯುವುದರಿಂದ...”

“ಸಿಲೋನ್‌ಗೆ ನೀನು ಹಿಂದೆ ಹೋಗಿಲ್ಲವೆ?”

“ಇಲ್ಲ. ಹೋಗಬೇಕೆಂದು ಹಲವು ಬಾರಿ ಪ್ಲಾನ್ ಹಾಕಿದ್ದೆ. ಹೋಗಲು ಆಗಿಲ್ಲ.”

ದೇವಿಯಕ್ಕನಿಗೆ ನೆನಪಾಯಿತು. ಕುಟ್ಟಣ್ಣನೂ ರಾಜಣ್ಣನೂ ಚಿಕ್ಕವರಿದ್ದರು. ಅಪ್ಪುವಿನ ಹೆರಿಗೆಯಲ್ಲಿ ದೊಡ್ಡತ್ತೆ ಸಿಲೋನ್‌ನಿಂದ ಬಂದಿದ್ದರು.

ಮದುವೆಯ ಸಿದ್ಧತೆಯ ಬಗ್ಗೆ ವಿಚಾರಿಸಲು ಆಗ ಕೆಲವು ನೆಂಟರು ಬಂದರು.

“ಹೋ! ವೇಣುವನ್ನು ನೋಡಿ ಖುಷಿಯಾಯಿತು.”

ದೇವಿಯಕ್ಕ ಅವರಿಗೆಂದಳು : “ವೇಣು ಸಿಲೋನಿಗೆ ಹೋಗ್ತಾನೆ. ಮದುವೆಗೆ ಬರಲಾಗುವುದಿಲ್ಲವಂತೆ. ಇವನಿಗೆ ದೊಡ್ಡಮಾವನ ಊರಿಗೆ ಹೋಗಬಹುದು, ಅಲ್ಲವೆ?”

ಆತ ನಕ್ಕ : “ಹೋಗಿ ನೋಡಬಹುದು, ಒಂದು ವೇಳೆ.”

"ದೊಡ್ಡ ಮಾವನ ಊರಿನ ಹೆಸರು...ನನಗೆ ನೆನಪಾಗುತ್ತಿಲ್ಲ. ಏನೋ ಒಂದು..."

"ಕಡುಗಣ್ಣಾವ್"

ಆ ಹೆಸರು ಮರೆತು ಹೋಗದು. ಅಮ್ಮನಿಗೆ ಅಣ್ಣಂದಿರು ವಿಳಾಸ ಬರೆದು ಕೊಡುವ ಪತ್ರಗಳನ್ನು ಅಂಚೆಪೆಟ್ಟಿಗೆಗೆ ಹಾಕುತ್ತಿದ್ದುದು ವೇಣು.

ನೆರೆಮನೆಯ ವಿಶಾಲಾಕ್ಷಿಯಮ್ಮ ಕೇಳಿದಳು : "ಹಿಂದೊಮ್ಮೆ ಅಲ್ಲಿಂದ ಒಬ್ಬಳು ಹುಡುಗಿ ಬಂದಿದ್ದಳಲ್ಲ ದೇವಿ?"

ದೇವಿಯಕ್ಕ ಹೇಳಿದಳು : "ಅವರೆಲ್ಲ ಈಗ ಇದ್ದಾರೋ ಎಂದು ಯಾರಿಗೆ ಗೊತ್ತು! ಕಾಲ ಎಷ್ಟಾಯಿತು! ಲೀಲ ಎಂದಾಗಿತ್ತು ಅವಳ ಹೆಸರು."

ವೇಣುಗೋಪಾಲ ಹಿಂದೆ ಲೆಕ್ಕ ಹಾಕಿದ್ದ. ಅಪ್ಪನಿಗೆ ಸಂಬಂಧವಿತ್ತು ಎನ್ನಲಾಗುತ್ತಿದ್ದ ಶಿಂಗಳಿತಿ ಬದುಕಿರುವ ಸಾಧ್ಯತೆಯಿಲ್ಲ. ಬದುಕಿದ್ದರೂ ತೊಂಬತ್ತು ವರ್ಷ ಪ್ರಾಯವಾಗಿರಬಹುದು.

"ಲೀಲನಿಗೆ ನನ್ನ ಪ್ರಾಯ. ಹಾಗಾದರೆ ಬದುಕಿರಲೂಬಹುದು."

ವೇಣುಗೋಪಾಲನಿಗೆ ಆಶ್ಚರ್ಯವಾಯಿತು. ಅವಳ ಕುರಿತು ಹಿಂದೆ ಅನೇಕರೊಡನೆ ಹೇಳಿದ್ದಿದೆ. ಹೇಳಲು ರೋಚಕವಾದ ಕಥೆ. ಒಬ್ಬಾಕೆ ಅಮ್ಮನಿಗೆ ನಾಲ್ಕು ಜನ ಗಂಡುಮಕ್ಕಳು. ಹೆಣ್ಣು ಮಗುವೊಂದು ಆಗಲೆಂದು ತುಂಬ ಆಸೆ. ವರ್ಷಗಳ ಬಳಿಕ ಗಂಡ ವಿದೇಶದಿಂದ ಬಂದಾಗ ಜತೆಯಲ್ಲೊಂದು ಹುಡುಗಿ. ಅದು ಅಪ್ಪನ ಸಂತತಿ ಎಂಬ ಅಪವಾದ ಹರಡಿದಾಗ ಮನೆಯಲ್ಲಿ ಜಗಳ, ಗಲಾಟೆ.

ವೇಣುಗೋಪಾಲನ ನೆನಪಲ್ಲಿ, ಯಾಕೋ ಆ ಹುಡುಗಿ ತನಗಿಂತ ಕಿರಿಯಳು ಎಂಬ ಭಾವನೆ.

"ದೇವಿಯಕ್ಕ. ಅವರು....ಆ ಹುಡಗಿ ನನಗಿಂತ ಸಣ್ಣವಳಲ್ಲವೆ?"

"ಹೇಯ್. ನಿನಗಾಗ ಒಂಬತ್ತು. ನಾವು ಮಾರಾರ್ ಮನೆಯ ಅಂಗಳದಲ್ಲಿ ಆಡುವಾಗ ಅದು ಮೈನೆರೆತದ್ದು. ನನಗೆ ಚೆನ್ನಾಗಿ ನೆನಪಿದೆ."

ಹುಡುಗಿ ತಂದೆಯ ಮನೆಗೆ ತಲಪಿದ ಅನಂತರದ ಕಥೆಗಳೂ ಕೆಲವೊಮ್ಮೆ ಕೇಳಿಬರುತ್ತಿದ್ದುವು. ತೆಂಕುಮನೆ*ಯಲ್ಲಿನ ಅಕ್ಕಿ ಕಣಜದ ಕೆಳಗೆ ಕುಳಿತೇ ಇದ್ದುಬಿಟ್ಟುದು. ಎರಡು ದಿನ ಪೂರ್ತಿ ಬಚ್ಚಲಿಗಾಗಲಿ ಕಕ್ಕೂಸಿಗಾಗಲಿ ಹೋಗಲಿಲ್ಲ. ಕುಳಿತದ್ದೆ ಕುಳಿತದ್ದು. ದೇವಿಯಕ್ಕನೂ ಅಮ್ಮನೂ ಚಿಕ್ಕಮ್ಮನೂ ಎಲ್ಲರೂ ಪ್ರಯತ್ನಿಸಿ ನೋಡಿದರು. ಹೆಂಗಸರು ಅಳುಕುತ್ತ ಅಳುಕುತ್ತ ಅಪ್ಪನ ಬಳಿ ಹೋಗಿ ವಿವರ ಹೇಳಿದರು. ಬಳಿಕ ಅಲ್ಲಿನ ಹುಡುಗಿಯರ ಜತೆ ಹೊರಗೆ ಇಳಿಯಲು ಪ್ರಾರಂಭಿಸಿದ್ದು.

* ತೆಂಕುಮನೆ – ಪಾರಂಪರಿಕ ಚೌಕಟ್ಟಿನ ಮನೆಗಳಲ್ಲಿನ ತೆಂಕುಪಾರ್ಶ್ವದ ಭಾಗ. ಪತ್ತಾಯಪ್ಪೊರೆ–ಭತ್ತದ ಕಣಜಗಳನ್ನು ಇರಿಸಲು ಪ್ರತ್ಯೇಕವಾಗಿ ನಿರ್ಮಿಸುತ್ತಿದ್ದ ಕಟ್ಟಡ.

“ಆಗ ಅದಕ್ಕೆ ಸುಮಾರು ಹನ್ನೆರಡು ಹದಿಮೂರು ವರ್ಷ ಪ್ರಾಯ ಇರಬಹುದು. ಖಂಡಿತ ಮೈ ಕೈ ಚೆನ್ನಾಗಿ ತುಂಬಿಕೊಂಡಿತ್ತು.”

ಸಿಲೋನ್‌ನಿಂದ ಬಂದ ಹುಡುಗಿ ಮೈನೆರೆತ ಘಟನೆ ಇದುವರೆಗೆ ತಿಳಿದಿರಲಿಲ್ಲ. ಹಾಗಾದರೆ...ವೇಣುಗೋಪಾಲ ಲೆಕ್ಕ ಹಾಕಿದ. ಅರುವತ್ತೆರಡೋ ಅರುವತ್ತಮೂರೋ ವಯಸ್ಸಾಗಿರಬೇಕು.

ಅಪ್ಪ ಬಂದ ರಾತ್ರೆಯ ಗೌಜಿಯ ಬಗ್ಗೆ ನೆನಪಿದೆ. ಬಡಗು ಅಂಗಳದಲ್ಲಿ ಎರಡು ಕೋಳಿಗಳನ್ನು ಕೊಲ್ಲಲಾಗಿತ್ತು. ಅಪ್ಪ ತಂದಿದ್ದ ಗ್ರಾಮೋಫೋನಲ್ಲಿ ದೊಡ್ಡಣ್ಣ ರಿಕಾರ್ಡುಗಳನ್ನು ಹಾಕಿದ. ಮೇಲಿನ ತೆಂಕುಕೋಣೆಯಲ್ಲಿ ಮಾವಂದಿರಿಗೂ ಅಧಿಕಾರಿಗಳಿಗೂ ಅಪ್ಪ ಪಾರ್ಟಿ ಕೊಡಿಸಿದ್ದರು. ರಾತ್ರೆ ಬಹಳ ಹೊತ್ತಿನವರೆಗೆ ತಮಿಳು ಹಾಡುಗಳು ಪತ್ತಾಯಪ್ಪೊರೆಯ ಮೇಲಿನಿಂದ ಕೇಳುತ್ತಿದ್ದುವು. ಆ ರಾತ್ರೆ ಯಾವಾಗಲೋ ಅತಿಥಿಗಳೆಲ್ಲ ಹೋದ ಬಳಿಕ ಅಪ್ಪನೂ ಅಮ್ಮನೂ ಜಗಳವಾಡಿದರು. ಹೊರಗಿನ ಕೋಣೆಯಲ್ಲಿ ಮಲಗಿದ್ದ ನನಗೆ ನಿದ್ದೆ ತಿಳಿದಾಗ ಕೇಳುತ್ತಿದ್ದುದು ಅಮ್ಮ ಏರುದನಿಯಲ್ಲಿ ಮಾತನಾಡುತ್ತಿರುವುದು. ಶಿಂಗಳಿತಿಯ ವಿಚಾರ ಜತೆಗೆ ಬಂದ ಮಾವ ಹೇಳಿದ್ದು.

ಮರುದಿನ ಹುಡುಗಿಯನ್ನು ಕರೆದುಕೊಂಡು ಅಪ್ಪ ತನ್ನ ಸ್ವಂತ ಊರಾದ ವನ್ನೇರಿಗೆ ಹೋದರು. ಮೂರು ತಿಂಗಳು ಅಲ್ಲಿದ್ದ ಬಳಿಕ ಹಿಂದಿರುಗಿ ಹೋದರೆಂದು ತಿಳಿದುಬಂತು.

ಮಕ್ಕಳು ಯಾರೂ ವನ್ನೇರಿಗೆ ಹೋಗಲಿಲ್ಲ. ಹೋಗಲು ಎಲ್ಲರಿಗೂ ಆಸೆಯಿತ್ತು. ಅದರಲ್ಲೂ ಪುಟ್ಟ ಹುಡುಗನಾದ ವೇಣುಗೋಪಾಲನಿಗೆ. ಕಾರಣ, ಅಪ್ಪನ ಮನೆಯಲ್ಲಿ ಸಂಜೆಗೆ ಫಲಾಹಾರವಿರುತ್ತದೆ. ಈಚಲ ಮರದ ಹುಡಿಯಿಂದಲೋ ರಾಗಿಯ ಎಳೆಯ ಹುಲ್ಲಿನಿಂದಲೋ ಮಾಡಿದ ದಪ್ಪ ದೋಸೆ ಅಲ್ಲಿನ ವಿಶೇಷ. ಮತ್ತೋಕ್ಕ್* ಹುಡಿಯಿಂದ ಪಾಯಸ ಮಾಡುವ ಒಂದು ಅದ್ಭುತ ವಿದ್ಯೆ ಕೂಡ ಅಡುಗೆ ಮನೆಯ ಅಧಿಕಾರ ವಹಿಸಿದ್ದ ಅಮ್ಮು ಅಕ್ಕನಿಗೆ ಗೊತ್ತು. ಆಕೆ ಕೆಲವೊಮ್ಮೆ ಅಯಿನಿಬೀಜ ಹುರಿದುಕೊಟ್ಟಾಳು. ಅಕ್ಕನ ಕಿರಿಯ ಮಗಳು.

ಆದರೆ ಅಮ್ಮ ಎಲ್ಲರಿಗೂ ಕೇಳಿಸುವಂತೆ ಹೇಳಿದಳು. “ಇದ್ದ ಗಂಜಿ ಅನ್ನ ತಿಂದುಕೊಂಡು ಇಲ್ಲೇ ಇದ್ದರೆ ಸಾಕು. ಯಾರೂ ಅಲ್ಲಿಗೆ ಹೋಗುವುದು ಬೇಡ.”

ಊಟ ಮಾಡಿದ ಪಾತ್ರೆಗಳನ್ನು ಬೇರರ್ ಒಯ್ದಿದ್ದ. ಕಿಟಕಿಯ ಕರ್ಟನ್ ಸರಿಸಿ ಗಾಜಿನ ಮೂಲಕ ಹೊರಕ್ಕೆ ನೋಡುತ್ತ ನಿಂತ. ಹೆಲಿಕಾಪ್ಟರ್‌ನ ಸದ್ದು ಆಗಲೂ ಕೇಳುತ್ತಿತ್ತು. ಗನ್ ಬೋಟುಗಳು ಈಗ ಕಾಣುವುದಿಲ್ಲ. ಕೆಳಗೆ ರಸ್ತೆಗಳ ಬದಿಗಳಲ್ಲಿ ಸೇನೆ ಕಾವಲು ನಿಂತಿರುವ ಬೂತ್‌ನಲ್ಲಿ ಬೆಂಕಿಯುಂಡೆಯ ಹಾಗೆ ಒಂದು ಸಿಗರೇಟು ಉರಿಯುತ್ತಿದೆ.

---

* ಮತ್ತೋಕ್ಕ್–ಗೆಣಸು ವರ್ಗದ ಒಂದು ಗಡ್ಡೆ. ಅಯಿನಿ–ನೇರಳೆಯಂತಹ ಹಣ್ಣು.

ವಾಹನ ಸಂಚಾರ ಹೆಚ್ಚು ಕಮ್ಮಿ ನಿಂತೇ ಹೋಗಿದೆ. ಆದರೆ ಪಟ್ಟಣ ನಿದ್ರಿಸುತ್ತಿಲ್ಲ. ಮುಂಜಾನೆಯ ಬೆಳಕು ಕಾಣುವುದಕ್ಕಾಗಿ ಕರ್ಟನ್ ಒಂದಿಷ್ಟು ಸರಿಸಿ ಆತ ಮಲಗಿಕೊಂಡ.

ಬೆಳಗ್ಗೆ ಆರ್ಲ್ಲೀ ಗುಣತಿಲಕೆಗೆ ಫೋನ್ ಮಾಡಿದ. ಯಾರೂ ತೆಗೆಯುತ್ತಿಲ್ಲ. ಮೂರನೇ ಬಾರಿ ಪ್ರಯತ್ನಿಸಿದಾಗ ಸಿಕ್ಕಿತು.

"ಡಿಡ್ ಯು ಸ್ಲೀಪ್ ವೆಲ್?"

"ಯಸ್, ಫೈನ್."

ಸೆಮಿನಾರ್‌ನ ಪೇಪರ್ ಮೊದಲೇ ಪ್ರತಿ ತೆಗೆದು ವಿತರಣೆ ಮಾಡಬೇಕೆ? ಬೇಡ. ಬಾಂಗ್ಲಾ ದೇಶ್‌ನವ ತಲುಪಿಲ್ಲ. ಬಾಂಬೆಯಿಂದ ಪಟೇಲ್ ಬಂದಿದ್ದಾರೆ...

"ಆರ್ಲ್ಲೀ, ಊರು ನೋಡುವ ಕಾರ್ಯಕ್ರಮ...."

"ಮಾಡೋಣ. ಮಾಡೋಣ. ಡೋಂಟ್ ವರಿ. ನಾಲ್ಕು ಗಂಟೆಗೆ ಕಾರ್ ಬರುತ್ತದೆ. ಬಿ ರೆಡಿ".

ಸಾರ್ಕ್ ರಾಷ್ಟ್ರಗಳ ಪತ್ರಿಕೆಗಳ ಸೆಮಿನಾರಲ್ಲಿ ಒಬ್ಬ ಪಿ.ಕೆ. ವೇಣುಗೋಪಾಲನ್ ನಾಯರ್ ಕೂಡಾ ಇರುತ್ತಾರೆ ಎಂದು ಕೇಳಿದಾಗ-ಉಳಿದ ಮಲೆಯಾಳಿಗಳಲ್ಲಿ ಯಾರಾದರೂ ಬರಬಾರದೆಂದಿಲ್ಲ. ವಯಸ್ಸಾದವರಲ್ಲಿ ಯಾರಿಗಾದರೂ, ಒಂದು ವೇಳೆ ಅಪ್ಪನ ಪರಿಚಯ ಇದ್ದಿದ್ದರೆ—

ಸಿಲೋನ್ ಮಲೆಯಾಳಿಗಳ ಮಧ್ಯೆ ಅಪ್ಪ ಸ್ವಲ್ಪ ಪ್ರಖ್ಯಾತರೇ ಆಗಿದ್ದರು ಎಂದು ದೊಡ್ಡಣ್ಣ ಹೇಳುತ್ತಾನೆ. ಮಲೆಯಾಳಿ ಹೈಕಮಿಷನರಿಗೆ ನೀಡಿದ ಸ್ವಾಗತ ಸಮಾರಂಭದ ಫೋಟೋವನ್ನು ಒಮ್ಮೆ ಅಣ್ಣ ಅಪ್ಪನ ಪೆಟ್ಟಿಗೆಯಲ್ಲಿ ಕಂಡದ್ದಿದೆ. ಅದರಲ್ಲಿ ಹಿಂದಿನ ಸಾಲಲ್ಲಿ ನಿಂತಿರುವವರಲ್ಲಿ ಅಪ್ಪ ಇದ್ದರು ಎನ್ನುವುದರಲ್ಲಿ ಅಣ್ಣನಿಗೆ ಸಂದೇಹವಿಲ್ಲ.

ರಾಜಣ್ಣನಿಗೆ ಎಲ್ಲದರಲ್ಲೂ ಸಂಶಯ. "ಅಪ್ಪನ ವಿಳಾಸವೇ ಅದಕ್ಕೆ ಸಾಕ್ಷಿಯಲ್ಲವೆ? ಕೆ.ಎಂ. ನಾಯರ್, ಕಡುಗಣ್ಣಾವ, ಸಿಲೋನ್-ಎಂದಿಷ್ಟೇ ಇದ್ದುದಲ್ಲವೇ ವಿಳಾಸ?" ಅಣ್ಣ ವಾದಿಸಿದ.

ವಯಸ್ಸಾದ ಮಲೆಯಾಳಿಗಳು ಯಾರಾದರೂ ಸಿಕ್ಕಾರು ಎಂಬ ದುರ್ಬಲ ನಿರೀಕ್ಷೆಯಿತ್ತು.

ಮೂರುದಿನ ಕುಳಿತು ಸಿದ್ಧಪಡಿಸಿದ ಪ್ರಬಂಧವನ್ನು ತೆಗೆದುಕೊಂಡು ಸೆಮಿನಾರ್‌ಗೆ ಹೋದಾಗ ಒಟ್ಟು ಹದಿನೈದು ಜನ ಸೇರಿದರು. ಹಾಲ್‌ನ ಹೊರಗೆ ನಿಂತುಕೊಂಡ. ಇಲ್ಲ ಮಲೆಯಾಳಿಯ ಹೆಸರು ನೋಡಿ ಯಾರೂ ಬಂದಿಲ್ಲ. ವೇದಿಕೆಯಲ್ಲಿ ಆರು ಜನ ಹಳೆಯ ಪಟ್ಟಭದ್ರ ವ್ಯವಸ್ಥೆಯ ಬೆಂಬಲಿಗರು ಮತ್ತು ಹೊಸದಾಗಿ ಆವಿರ್ಭವಿಸಿದ ನೂತನ ಶಕ್ತಿಗಳ ಪರಸ್ಪರ ಸಂಘರ್ಷದ ಕುರಿತು...ಮುಂತಾಗಿ ಉದ್ಘಾಟನ ಭಾಷಣ ಮಾಡಿದ ಶ್ರೀಲಂಕಾದ ಅಧಿಕಾರಿ ಮಾತನಾಡುತ್ತಿದ್ದಾಗ ಎಲ್ಲವನ್ನೂ ಕೇಳುತ್ತಿರುವ, ಗಮನ ಕೊಡುತ್ತಿರುವ ಭಂಗಿಯಲ್ಲಿ ಕುಳಿತಿದ್ದ.

ಸಮ್ಮೇಳನ ನಿರೀಕ್ಷಿಸಿದುದಕ್ಕಿಂತಲೂ ಮೊದಲೇ ಮುಗಿದುಹೋಯಿತು.

ಆಶ್ಲೀ ಸಭಾಸದರ ಜತೆಗಿದ್ದ. ಬೆಳಗ್ಗೆ ಎಂಟು ಗಂಟೆಗೆ ಹೊರಡಬಹುದು. ರಾತ್ರೆ ಅನುರಾಧ ಪುರದಲ್ಲಿ ತಂಗುವುದು. ಟೂರಿಸಂ ಇಲಾಖೆಯ ಅತಿಥಿಯಾಗಿ ಪ್ರಯಾಣ. ಅವರದೇ ವಾಹನ.

"ಆಶ್ಲೀ, ನೀವು ಬರಬೇಕು."

"ನೋಡೋಣ."

"ಹಾಗೆಂದರಾಗದು."

ಮೊದಲೇ ಫೋನ್ ಮತ್ತು ಪತ್ರಗಳ ಮೂಲಕ ಸಂಪರ್ಕಿಸಿದ್ದರಿಂದ ಇರಬೇಕು ಆತ ಒಬ್ಬ ಹತ್ತಿರದ ಗೆಳೆಯನೆಂಬಂತೆ ಅನಿಸುತ್ತಿತ್ತು.

ರಾತ್ರೆ ಮಳೆ ಬಂತು. ಆದರೆ ಬೆಳಗ್ಗೆ ಆಕಾಶ ಶುಭ್ರವಾಗಿತ್ತು.

ಬೆಳಗ್ಗೆ ಎಂಟೂವರೆಗೆ ಆಶ್ಲೀ ಟೂರಿಸಂ ಇಲಾಖೆಯ ಕಾರಲ್ಲಿ ಬಂದ.

ಪ್ರಯಾಣದ ನಡುವೆ ಆಶ್ಲೀಯ ಕೌಟುಂಬಿಕ ವಿವರಗಳನ್ನು ಕೇಳಿದ. ಇಬ್ಬರು ಮಕ್ಕಳು ಹುಡುಗಿಯರು. ಹೆಂಡತಿ ಒಂದು ಬ್ಯಾಂಕಲ್ಲಿ ನೌಕರಿ ಮಾಡುತ್ತಿದ್ದಾಳೆ. ಆಶ್ಲೀ ವಿದ್ಯಾಭ್ಯಾಸ ಮಾಡಿದ್ದು ಲಂಡನ್‌ನಲ್ಲಿ. ಲಂಡನ್‌ನ ಸಿಲೋನ್ ಎಂಬೆಸಿಯಲ್ಲಿ ಎರಡು ವರ್ಷ ನೌಕರಿ ಮಾಡಿದ್ದ.

ಆಶ್ಲೀಗೆ ಸಿಲೋನ್‌ನ ಇತಿಹಾಸ ಐತಿಹ್ಯಗಳು ನಿಖರವಾಗಿ ಗೊತ್ತಿದೆ. ವರ್ಷ, ಇಸವಿ ಕೂಡ ಬೆರಳ ತುದಿಯಲ್ಲಿ. ದೇವನಾಂಪ್ರಿಯ ತಿಸ್ಸನ ಕಾಲಘಟ್ಟದ ಕುರಿತು ಚಾರಿತ್ರಿಕ ಸ್ಮಾರಕಗಳ ನಡುವೆ ನಡೆಯುತ್ತ ಆತನೆಂದ...ಮಿಹಿಂದಲೆ. ಮೊದಲ ಬೌದ್ಧವಿಹಾರ. ಅಶೋಕನ ಮಗನಾದ ಮಹೇಂದ್ರ ಇಲ್ಲಿ ಬೌದ್ಧಮತದ ಸಂದೇಶವಾಹಕನಾಗಿ ಬಂದುದು. ಮಹೇಂದ್ರನ ಹೆಸರಿನ ನೆನಪಿಗಾಗಿ ಮಿಹಿಂದಲೆ. ಮಗಳು ಸಂಗಮಿತ್ರಳು ಜೊತೆಗೆ ತಂದಿದ್ದ ಬೋಧಿವೃಕ್ಷದ ಗೆಲ್ಲನ್ನು ಇಲ್ಲಿ ಸ್ಥಾಪಿಸಿದುದು.

"ಬೇಕಾದರೆ ಟಿಪ್ಪಣಿ ಮಾಡಿಕೊಳ್ಳಿ. ಸಂಗಮಿತ್ರ ಬಿ.ಸಿ. ಮೂರನೇ ಶತಮಾನ. ಸುತ್ತಲೂ ಈ ಆವರಣ ಕಟ್ಟಿಸಿದ್ದು ವಿಕ್ರಮರಾಜಸಿಂಹ."

ಆಶ್ಲೀಗೆ ಬೇಸರವಾಗಬಾರದೆಂದು ಆತ ಟಿಪ್ಪಣಿ ಬರೆದುಕೊಂಡ, ಅಗತ್ಯವಿದ್ದಲ್ಲ.

ಆವರಣದ ಸುತ್ತಲೂ ಸೇನೆ ಬೀಡುಬಿಟ್ಟಿತ್ತು. ಒಮ್ಮೆ ತೀರ್ಥಯಾತ್ರಿಕರಿಂದ ತುಂಬಿದ ಒಂದು ಟೂರಿಸ್ಟ್ ಬಸ್ ಬಂದು ನಿಂತಿತು. ಬಸ್ಸಿನಿಂದಿಳಿದ ಅವರು ತಮ್ಮ ಹಳದಿ ಬಟ್ಟೆಗಳನ್ನು ಸರಿಸಿದಾಗ ಎ.ಕೆ. ೪೭ ರೈಫಲ್‌ಗಳನ್ನು ಹಿಡಿದಿದ್ದ ತಮಿಳು ಉಗ್ರಗಾಮಿಗಳಾಗಿದ್ದರು. ಗುಂಡು ತಗಲಿ ಸತ್ತದ್ದು ಅರುವತ್ತೇಳು ಜನ. ಪ್ರಾರ್ಥಿಸುವವರೂ ಬೀದಿ ಬದಿಯಲ್ಲಿ ಪೂಜೆಗೆ ಬೇಕಾದ ಹೂಗಳನ್ನು ಮಾರುತ್ತಿದ್ದವರೂ ಅದರಲ್ಲಿ ಸೇರಿದ್ದರು. ಇದರ ಬಳಿಕ ಸೇನೆ ಕಾವಲು ಕಾಯಲು ಪ್ರಾರಂಭಿಸಿದುದು.

ಬೋಧಿವೃಕ್ಷದ ಮುಂದಿನ ಮಂಟಪದಲ್ಲಿ, ಹೂವಿನ ಹರಿವಾಣವೊಂದನ್ನು ಕೊಂಡುಕೊಂಡು, ಆರ್ಲ್ವೀ ಗುಣತಿಲಕೆ ಐದು ಹೂಗಳನ್ನಿಟ್ಟು ಪ್ರಾರ್ಥಿಸುತ್ತ ಒಂದು ನಿಮಿಷ ನಿಂತ.

"ಆರ್ಲ್ವೀ ನೀವು?..."

"ನಾನು ಬೌದ್ಧ."

ಬ್ರಿಟಿಷ್ ಆಡಳಿತ ಕಾಲದಲ್ಲಿ ಶಾಲಾ ಪ್ರವೇಶಕ್ಕಾಗಿ ಅನೇಕರು ಕ್ರಿಶ್ಚಿಯನ್ ಹೆಸರುಗಳನ್ನು ಸ್ವೀಕರಿಸಿದರು. ತಲೆಮಾರುಗಳ ಬಳಿಕ ಆ ಹೆಸರುಗಳಲ್ಲಿ ಬದಲಾವಣೆಗಳಾದುವು, ಅಷ್ಟೆ. ನನ್ನ ಅಜ್ಜನೂ ಆರ್ಲ್ವೀ ಆಗಿದ್ದರು.

ಸಮಾಧಿಸ್ಥನಾದ ಬುದ್ಧನ ಪ್ರತಿಮೆಯನ್ನೂ ತಾಮ್ರದ ಅರಮನೆಯನ್ನೂ ನೋಡುತ್ತ ನಡೆಯುವಾಗ ಆರ್ಲ್ವೀ ಎಂದ :

ಬೌದ್ಧಮತ ಸ್ವೀಕರಿಸಿದ ರಾಜ ಸೇನೆಯನ್ನು ಬರ್ಖಾಸ್ತುಗೊಳಿಸಿದ. ಸೈನಿಕರು ಸರೋವರ, ಕಾಲುವೆ ಮುಂತಾದುವುಗಳ ನಿರ್ಮಾಣದಲ್ಲಿ ನಿರತರಾದರು. ಕೃಷಿಕರಾದರು. ಕುದುರೆ ವ್ಯಾಪಾರಕ್ಕಾಗಿ ತಮಿಳುನಾಡಿನಿಂದ ಬಂದ ಇಬ್ಬರು ಸೇನೆಯೇ ಇಲ್ಲದ ರಾಷ್ಟ್ರವೊಂದನ್ನು ನೋಡಿ ಲೆಕ್ಕಹಾಕಿದರು. ಹಿಂತಿರುಗಿ ಹೋಗಿ ಆರು ದೋಣಿಗಳಲ್ಲಿ ಸ್ವಲ್ಪ ಸೇನೆಯೊಂದಿಗೆ ಬಂದು ರಾಷ್ಟ್ರವನ್ನು ವಶಪಡಿಸಿಕೊಂಡರು. ಅದೇ ಮೊದಲನೆಯ ಆಕ್ರಮಣದ ಕಥೆ.

"ಸದಾ ಆಕ್ರಮಣಕ್ಕೆ ಅವಕಾಶ ಕಾಯುತ್ತ ಇದ್ದವರು ನೀವು." ಆರ್ಲ್ವೀ ನಗುತ್ತ ಹೇಳಿದ.

ಹಳೆಯ ವಿಹಾರಗಳ ಅವಶೇಷಗಳ ಮಧ್ಯೆ ನಡೆಯುತ್ತ ವೇಣು ಬಳಲಿಬಿಟ್ಟಿದ್ದ.

ನುವಾರಮೇವಾ ಸರೋವರ ತೀರದ ರಸ್ಟ್‌ಹೌಸಲ್ಲಿ ತಂಗಲು ಏರ್ಪಾಡಾಗಿತ್ತು.

'ಓಲ್ಡ್ ಆರ್ಕ್'ನ ಬಾಟಲಿ ಹೊರತೆಗೆಯುತ್ತ ಆರ್ಲ್ವೀ ಎಂದ :

"ಫಾರಿನ್ ವಿಸ್ಕಿಗಿಂತ ನನಗೆ ಇದೇ ಇಷ್ಟ."

ಜತೆಗೂಡಲು ಸಾಧ್ಯವಾದಾಗ ತನ್ನ ಅನಾರೋಗ್ಯದ ಪ್ರಸ್ತಾಪ ಮಾಡಿ ತಪ್ಪಿಸಿಕೊಂಡ. ಹೊರಗೆ ಕತ್ತಲಾಗಿತ್ತು.

"ನಾಳೆ ಅಮಾವಾಸ್ಯೆ."

ಮರುದಿನದ ಕಾರ್ಯಕ್ರಮಗಳ ಕುರಿತು ತಿಳಿದುಕೊಳ್ಳುವ ಕಾತರ.

"ನಾನು ಹೇಳಿದ್ದು ನೆನಪಿದೆಯಲ್ಲವೆ ಆರ್ಲ್ವೀ?..."

"ಓ.ಎಸ್. ಕಡುಗಣ್ಣಾವ. ನಾವು ಆ ದಾರಿಯಾಗಿ ಹೋಗಲಿದ್ದೇವೆ. ಕಡುಗಣ್ಣಾವದಲ್ಲಿ ಒಳ್ಳೇ ಖುಷಿ. ಘಾಟಿಯ ಮೇಲಿನಿಂದ ಎಂಥ ಸುಂದರ ನೋಟ. ಆದರೆ ಬೇರೇನೂ ಇಲ್ಲ."

ಅಳುಕುತ್ತ ಅಳುಕುತ್ತ ವೇಣುವೆಂದ : "ನನ್ನ ಅಪ್ಪ ಹಿಂದೆ ಅಲ್ಲಿ ಕೆಲವು ಕಾಲ ಉದ್ಯೋಗ ಮಾಡಿದ್ದರೆಂದು ಕೇಳಿ ಬಲ್ಲೆ. ಬೇರೆಯೂ ಕೆಲವು ಜನ ಊರವರು. ಒಬ್ಬ ಮಾವ..."

"ದೆಟೀಸ್ ಇನ್ಕ್ರೆಡಿಬ್‌ಲ್! ನಾವು ಹೋಗುವ."

ಕಾಲೇಜು ಬಿಟ್ಟ ಮೇಲೆ ಅಪ್ಪ ಮರಳಿ ಬಂದದ್ದು. ಆಶ್ಲೀ ಇತಿಹಾಸ ಪೂರ್ವದ ಕಥೆಗಳನ್ನು ಹೇಳುವಾಗ ಆತ ಕುತೂಹಲ ಪೂರ್ವಕವಾಗಿ ಕೇಳುತ್ತಿರುವಂತೆ ತೋರಿಸಿಕೊಂಡ.

ಮೂವತ್ತೊಂದು ವರ್ಷ ಸಿಲೋನ್‌ನಲ್ಲಿ ಕಳೆದು ಮರಳುವಾಗ ತುಂಬ ಹಣ ತರಬಹುದೆಂದು ಮನೆಯವರೂ ಊರವರೂ ಲೆಕ್ಕ ಹಾಕಿದ್ದರು. ತಾಯಿ ತೀರಿಕೊಂಡಿದ್ದಳು.

ತಾಯಿ ಬದುಕಿದ್ದ ಕಾಲದಲ್ಲಿ ಅಪ್ಪ ಇನ್ನೆರಡು ಬಾರಿ ಊರಿಗೆ ಬಂದಿದ್ದರು. ಮನೆಗೆ ಬೆಳಗ್ಗೆ ಬಂದರೆ ಸಂಜೆಗೆ ವನ್ನೇರಿಗೆ ವಾಪಸ್. ಅಡುಗೆಮನೆಯಲ್ಲಿ ವಿಶೇಷವಾಗಿ ಎರಡು ಬಗೆ ಪಲ್ಯಕ್ಕೂ ಮೊಟ್ಟೆ ಹುರಿಯಲೂ ಅಮ್ಮನ ಆಜ್ಞೆಯಾಗುತ್ತಿತ್ತು. ಆದರೆ ಅಪ್ಪನ ಎದುರು ಬಂದದ್ದಿಲ್ಲ. ಊಟ ಸಿದ್ಧವಾದಾಗ ಅಂದಾಳು : "ಎಲೆ ಹಾಕಿದೆ. ಅಪ್ಪನನ್ನು ಕರೆದುಬಿಡು."

ಅಮ್ಮನ ಸಹಾಯಕ್ಕೆ ನಿಂತಿದ್ದ ಮೀನಾಕ್ಷಿಯಕ್ಕ ಇಕ್ಕಿದ್ದಳು.

ದೇವಿಯಕ್ಕನ ಅಣ್ಣ, ಅಪ್ಪನ ಹಿರಿಯ ಅಳಿಯ ಅಪ್ಪನ ದುಡ್ಡಿನ ಗಂಟಿನ ವಿಷಯವನ್ನು ಖಾಸಗಿಯಾಗಿ ವಿಚಾರಿಸಿದ. ನೇರವಾಗಿ ಬ್ಯಾಂಕಿಗೆ ಕಳುಹಿಸಿರಬಹುದೆಂದು ಗುಟ್ಟಾಗಿ ಹೇಳಿದ.

ಪ್ರತಿದಿನ ಊರ ಮುಖ್ಯಸ್ಥರೆಲ್ಲ ಔತಣಕ್ಕೆ ಬಂದರು. ಪತ್ತಾಯಪ್ಪೋರೆಯ ಮುಂದೆ ಸಾಯಂಕಾಲವಾಗುತ್ತಿದ್ದಂತೆ ಬ್ರಾಂಡಿ ಬಾಟಲುಗಳು ತೆರೆದುಕೊಳ್ಳುತ್ತಿದ್ದುವು. ಗೀರು ಹಾಕಿ ಹುರಿದ ಮೊಟ್ಟೆ, ಹಪ್ಪಳ ಇತ್ಯಾದಿ ಕುರುಕು ತಿಂಡಿಗಳನ್ನು ಮೇಲಕ್ಕೆ ಒಯ್ಯುತ್ತಿದ್ದವನು ವಿಜಯಣ್ಣ. ಸಿಲೋನ್‌ನಿಂದ ತಂದ ಬಾಟ್ಲಿಗಳು ಮುಗಿದಾಗ ತ್ರಿಶೂರಿನಿಂದ ಅವನ್ನು ಖರೀದಿಸಲು ಹೋದುದೂ ಅವನೇ. ಹತ್ತು ದಿವಸಗಳ ಬಳಿಕ ಉಣ್ಣೇರಿ ಭಟ್ಟಿಯಿಳಿಸಿದ. ಶರಾಬು ಬಾಟ್ಲಿಗಳನ್ನು ಊರ ಮುಖ್ಯಸ್ಥರ ಮುಂದಿಟ್ಟು ಅಪ್ಪ ಹೇಳಿದರು : "ಉಣ್ಣೇರಿ ಇದ್ದಾನಲ್ಲವೆ? ನಮ್ಮ ಆಚೆಗಿನ ಬಯಲ ಉಣ್ಣೇರಿ. ಅವನ ಶರಾಬಿನ ಮುಂದೆ ಎಂಥ ಫಾರಿನ್ ಬ್ರಾಂಡಿ ಕೂಡ ನಿಲ್ಲಲಾರದು." ಮುಖ್ಯಸ್ಥರೆಲ್ಲ ಹೌದೆಂದು ಸಮ್ಮತಿಸಿದರು. ಮರುದಿನ ಸಂಜೆಯಿಂದ ಅಪ್ಪ ಒಬ್ಬಂಟಿಯಾದರು.

ಓಲ್ಡ್ ಆರ್ಕ್ ಅರ್ಥವಾದಾಗ ಆಶ್ಲೀ ಎದ್ದು ನಿಂತ. ಅವನ ಹಣೆಯಿಂದ ಬೆವರು ಹರಿಯುತ್ತಿತ್ತು. ಲಂಡನ್‌ನಲ್ಲಿ ವಾಸಿಸುತ್ತಿದ್ದಾಗಿನ ಒಂದು ಪ್ರಣಯ ಕಥೆಯನ್ನು ಹೇಳಬೇಕೆನಿಸುತ್ತಿತ್ತು ಆಶ್ಲೀಗೆ. ಅದನ್ನು ಮಾರನೆಯ ದಿನ ಹೇಳೋಣ ಎಂದು ಮುಂದೂಡಿದ.

ಡೈನಿಂಗ್ ಹಾಲಲ್ಲಿ ಕುಳಿತು ಊಟ ಮಾಡುವಾಗ ಆಶ್ಲೀ ಮೌನವಾಗಿದ್ದ. ಮರಳಿ ಮೆಟ್ಟಿಲೇರುವಾಗ ಅವನ ಕಾಲು ನಡುಗುತ್ತಿತ್ತು. ಅವನನ್ನು ಆಧರಿಸಿದಾಗ ನಕ್ಕ.

"ಪರವಾಯಿಲ್ಲ. ಓಲ್ಡ್ ಆರ್ಕ್ ಚೆನ್ನಾಗಿ ಒದೆಯುತ್ತಿದೆ."

ಬಾಗಿಲು ತೆಗೆಯಲು ಅವನಿಗೆ ಸಹಾಯ ಮಾಡಬೇಕಾಯಿತು.

"ಗುಡ್ ನೈಟ್"

"ಗುಡ್ ನೈಟ್"

ಮುಂಭಾಗದ ತನ್ನ ಕೋಣೆಯಲ್ಲಿ ಒಬ್ಬನೇ ಆದಾಗ ಶೂಸ್ ಬಿಚ್ಚಿದ. ಕಾಲುಗಳಿಗೆ ಮೋಕ್ಷ, ನಿರ್ವೃತಿ, ದೀರ್ಘ ಪ್ರಯಾಣ ತನಗೆ ಹೇಳಿಸಿದ್ದಲ್ಲ ಎನ್ನುವುದು ದೃಢಪಟ್ಟಿತ್ತು.

ಪತ್ತೇದಾರಿ ಕಾದಂಬರಿಗಳನ್ನು ಹಗಲು ರಾತ್ರೆಯೆನ್ನದೆ ಓದುತ್ತಿದ್ದ ವಿಜಯಣ್ಣ ಮನೆಯ ಹಿರಿಯರ ಶುಭಾಶೀರ್ವಾದಗಳೊಂದಿಗೆ ನಿಜವಾದ ಪತ್ತೇದಾರಿ ಕೆಲಸ ಆರಂಭಿಸಿದ. ಅಪ್ಪನ ವಿಳಾಸಕ್ಕೆ ಬರುವ ಪತ್ರಗಳನ್ನೆಲ್ಲ ಅಂಚೆಯವನಿಂದ ಬಗಲಿಗೆ ಹಾಕಿಕೊಳ್ಳುತ್ತಿದ್ದ. ಅಡುಗೆ ಮನೆಯಲ್ಲಿ ಆವಿಗೆ ಒಡ್ಡಿ ಅವನ್ನು ತೆರೆದು ಓದಿದ ಬಳಿಕ ಪತ್ತಾಯಪ್ಪೋರೆಗೆ ಒಯ್ಯುವುದು. ಹೆಚ್ಚಿನ ವಿವರಗಳೇನೂ ಸಿಗಲಿಲ್ಲ. ಬೀಗದ ಕೈಗಳ ಗೊಂಚಲು ಸದಾ ಅಪ್ಪನ ವಶದಲ್ಲೆ ಇತ್ತು. ಹಳೆಯ ಬೀಗದ ಕೈಗಳನ್ನು ಉಲ್ಟಾ ಪಲ್ಟಾ ಬಳಸಿದ ವಿಜಯಣ್ಣ ಒಮ್ಮೆ ಅಪ್ಪನ ಪೆಟ್ಟಿಗೆ ತೆರೆದೇಬಿಟ್ಟ. ಪೆಟ್ಟಿಗೆಯಲ್ಲಿ ದಾಖಲೆ ಪತ್ರಗಳಾವುವೂ ಇರಲಿಲ್ಲ. ವ್ಯವಹಾರ ನಿಲ್ಲಿಸಿ ಕ್ಯಾನ್ಸಲ್ ಮಾಡಿದ್ದ ಕೋರಿಯಿಕ್ಕೋಡು ಇಂಪೀರಿಯಲ್ ಬ್ಯಾಂಕಿನ ಒಂದು ಹಳೆಯ ಪುಸ್ತಕ ಮಾತ್ರ. ಮಾಧವ ಮಾವನ ವಿಳಾಸವಾದರೂ ಸಿಕ್ಕೀತೆಂದು ಆಶಿಸಿದ್ದು ಕೂಡ ಸುಮ್ಮನೆ.

ಪತ್ರಿಕೆಯ ದೆಹಲಿ ಆಫೀಸಿನಲ್ಲಿ ವೇಣು ಉದ್ಯೋಗದಲ್ಲಿದ್ದಾಗ ವಿಜಯಣ್ಣ ತೀರಿಕೊಂಡುದು. ಮುಂದಿನ ಬಾರಿ ಬಂದಾಗ ವಸ್ಸೇರಿಗೆ ಹೋದ. ಚಿಕ್ಕಂದಿನಲ್ಲಿ ಕಥೆಗಳನ್ನು ಹೇಳುತ್ತಿದ್ದ ವಿಜಯಣ್ಣನನ್ನು ನೆನೆದು ತಂಗಿಯಂದಿರು ಅತ್ತರು. ಅದರ ಮಧ್ಯೆ ಪತ್ತೇದಾರಿ ವೀರನಾದ ಕಾಲವನ್ನೂ ನೆನೆದು ನಕ್ಕರು.

"ಅಪ್ಪ ಹಿಂದೆ ಏನನ್ನೂ ತಾರದೆ ಇರುತ್ತಿದ್ದುದು ಯಾಕೆಂದು ನಿನಗೆ ಗೊತ್ತಾ ವೇಣು?"

ಅಪ್ಪ ಊರಿಗೆ ತಲಪಿದ ಮೇಲೆ ಹಣದ ಮುಗ್ಗಟ್ಟಿತ್ತು. ತೆಂಗಿನ ಕಾಯಿಯ ಕರಾರಿನವನಿಂದ ಅಪ್ಪ ಹಣ ಪಡೆದುಕೊಳ್ಳಲು ತೊಡಗಿದಾಗ ಅದುವರೆಗೆ ಮನೆಯ ಆಡಳಿತ ನೋಡಿಕೊಂಡಿದ್ದ ಚಿಕ್ಕಪ್ಪ ಎಂದರು : "ಇನ್ನು ನೀನಿದ್ದಿ ಅಣ್ಣ. ನೀನು ಕಾರುಬಾರು ನೋಡಿದರಾಯಿತು." ಹಾಗೆ ಹೇಳಿ ದೂರದ ಹಿಂಡತಿ ಮನೆಗೆ ವಾಸ ಬದಲಾಯಿಸಿದರು. ತೋಟದಿಂದ ಬರುವ ಉತ್ಪತ್ತಿಯಲ್ಲಿ ಹೇಗೋ ಹೊಂದಿಸಿಕೊಂಡು ಬದುಕಲಾರಂಭಿಸಿದರು.

ವಿಜಯಣ್ಣ ಕೊನೆಗೂ ಪತ್ತೆ ಹಚ್ಚಿದ್ದ. ತುಂಬ ವರ್ಷಗಳ ಬಳಿಕದ ಸ್ಥಿತಿ ಏನೆಂದು ತಿಳಿಯದು. ಬರುವಾಗ ಆಸ್ತಿಯಿತ್ತು. ಒಂದು ರಬ್ಬರ್ ತೋಟ. ಎಲ್ಲವನ್ನೂ ಶಿಂಗಳೆತಿಯ ಮಕ್ಕಳಿಗೆ ಕೊಟ್ಟು ಅವರಿಗೆ ಮದುವೆಯನ್ನೂ ಮಾಡಿಸಿ ಅಪ್ಪ ಸಿಲೋನ್ ಬಿಟ್ಟುದು..."

ಅದು ವೇಣುವಿಗೆ ಒಂದು ಹೊಸಸಂಗತಿ.

"ಹೇಗೆ ತಿಳಿಯಿತು?"

"ಸಿಲೋನಿನ ಹಲವು ವಿಳಾಸಗಳಿಗೆ ವಿಜಯಣ್ಣ ಪತ್ರ ಬರೆದಿದ್ದ. ಹಾಗೆ ತಿಳಿದುದಾಗಿರಬಹುದು."

ನೆಲದಲ್ಲಿ ಕುಳಿತಿದ್ದ ಅತ್ತೆ ಎಂದರು : "ಅದು ಕಷ್ಟಪಡದೆ ಹಾಗೇ ಬದುಕಿಕೊಂಡಿರಲಿ. ನಮ್ಮದೇ ರಕ್ತವಾಗಿರಲಿ ಬಿಡಲಿ ಒಂದು ಮಗುವಲ್ಲವೆ?"

ಆಗ ವೇಣುವಿಗೆ ಸಂಕಟವಾಯಿತು. ಮುನ್ನೂರು ರೂಪಾಯಿ ಸಂಬಳ ಸಿಗುತ್ತಿದ್ದಾಗ ಕೂಡ ಅಪ್ಪನಿಗೆ ನೂರು ರೂಪಾಯಿ ಕಳುಹಿಸುತ್ತಿದ್ದ. ಆದರೂ ಮಕ್ಕಳು ಯಾರೂ ಗಮನ ಕೊಡುತ್ತಿಲ್ಲ, ವಿಚಾರಿಸುತ್ತಿಲ್ಲ ಎಂದು ಕಂಡ ಕಂಡವರಲ್ಲಿ ದೂರಿಕೊಳ್ಳುತ್ತಿದ್ದರು. ಅಲ್ಲಿದ್ದ ರಬ್ಬರ್ ತೋಟ ಮಾರಾಟ ಮಾಡಿದ್ದಾರೆ. ಸಿಕ್ಕಿದ ದುಡ್ಡಿನ ಲೆಕ್ಕವಿಲ್ಲ. ಅದು ಬೇರೆ. ಅಸಮಾಧಾನ ರೋಷವಾಗಿ ಮಾರ್ಪಟ್ಟಿತು.

ಮರುದಿನ ಕಡುಕೆಂಪು ಬಣ್ಣದ ಒಂದು ಟೀ ಷರ್ಟು ಮತ್ತು ಜೀನ್ಸ್ ಧರಿಸಿದ ಆಶ್ಲೀ ಬೆಳಗ್ಗೆಯೇ ಬಾಗಿಲು ತಟ್ಟಿದ.

"ರೆಡಿ ಮಿಸ್ಟರ್ ವೇಣು?"

ಆತ ರೆಡಿಯಾಗಿರಲಿಲ್ಲ.

ಪ್ರೊಳನರುವಕ್ಕೆ. ಪರಾಕ್ರಮ ಸಾಗರವನ್ನು ನಿರ್ಮಿಸಿದ ರಾಜ ಪರಾಕ್ರಮ ಬಾಹು. ಮಧ್ಯರಾತ್ರೆ ಆಳುಗಳನ್ನು ಕರೆದು ಕಗ್ಗಲ್ಲಿನಲ್ಲಿ ತನ್ನ ಸಾಹಸಗಳನ್ನು ಕೊರೆಯಿಸಿದ್ದ ನಿಶ್ಶಂಕ ಮಲ್ಲ.

"ನಾವು ಕಡುಗಣ್ಣಾವಕ್ಕೆ ಎಷ್ಟು ಹೊತ್ತಿಗೆ ತಲಪಬಹುದು?"

"ಮುಂದಿನ ಸ್ಟಾಪ್ ಕ್ಯಾಂಡಿ. ಕ್ಯಾಂಡಿಯಲ್ಲಿ ಮಧ್ಯಾಹ್ನದ ಊಟ. ಅದರ ಸಮೀಪವೇ ಕಡುಗಣ್ಣಾವ. ಸಿಗರಿಯ ನೋಡಬೇಡವೆ?"

ಅಷ್ಟೇನೂ ಉತ್ಸಾಹ ತೋರಿಸಲಿಲ್ಲ....

ಐದನೇ ಶತಮಾನದ ರಾಜ ದತ್ತಸೇನನ ಕಥೆಯನ್ನು ಆಶ್ಲೀ ಹೇಳಿದ.ಹದಿನೆಂಟು ಬಾರಿ ತಮಿಳು ಸೇನೆಗಳೊಂದಿಗೆ ಹೋರಾಡಿದ ಅರಸ. ಅಳಿಯನೂ ಇಟ್ಟುಕೊಂಡವಳ ಮಗನೂ ಸೇರಿ ರಾಜನನ್ನು ಸೆರೆಯಲ್ಲಿಟ್ಟರು. ಪಟ್ಟ ಮಹಿಷಿಯ ಮಗ ಭಾರತಕ್ಕೆ ಪಲಾಯನ ಮಾಡಿದ.

ಅಧಿಕಾರ ವಹಿಸಿಕೊಂಡ ಮೇಲೆ ಅರಮನೆಯಲ್ಲಿ ಚಿನ್ನ, ರತ್ನಗಳು, ಸಂಪತ್ತು ಯಾವುದೂ ದೊರಕದಾಗ ಕಾಶ್ಯಪ ಅಸ್ವಸ್ಥನಾದ. ಆಗಾಗ ಅಪ್ಪನ ವಿಚಾರಣೆ ಮಾಡಿದ. ನಿಧಿಗಳೆಲ್ಲಿ?

ದತ್ತಸೇನನ ಕಥೆಯಲ್ಲಿ ವೇಣುವಿಗೆ ಥಕ್ಕನೆ ಆಸಕ್ತಿ ಉಂಟಾಯಿತು. ಅಪ್ಪನ ನಿಧಿ ಸಿಗದೆ ರೋಷಾಕುಲರಾದ ಮಕ್ಕಳು ಎಲ್ಲ ಕಾಲದಲ್ಲೂ ಇದ್ದರು.

"ಆಮೇಲೆ?"

"ತಾನು ನಿರ್ಮಿಸಿದ್ದ ವಿಶಾಲವಾದ ಕೆರೆಯತನಕ ಹೋಗಗೊಟ್ಟರೆ ನಿಧಿಯನ್ನು ತೋರಿಕೊಡುವೆನೆಂದು ಅರಸ ಹೇಳಿದ. ರಥವೇರಿಸಿ ರಾಜನನ್ನು ಅಲ್ಲಿಗೆ ಕಳುಹಿಸಲಾಯಿತು. ಕೆರೆಗೆ ತಲಪಿದ ಅರಸ ಉಲ್ಲಾಸ ಭರಿತನಾದ. ಕೆರೆಯಲ್ಲಿಳಿದು ನೀರು ಕುಡಿದ. ಈಜಿದ. ಮಿಂದ. ಕೆರೆಯ ನೀರಲ್ಲಿ ಓಲಾಡುತ್ತ ಹೇಳಿದ—ಇಗೋ ಇದೇ ನನ್ನ ನಿಧಿ." ಕಾಶ್ಯಪ ಕೂಡಲೇ ಅವನನ್ನು ಜೀವಂತವಾಗಿರುವಾಗಲೇ ಕಲ್ಲುದಾಸಿಯಲ್ಲಿ ಹಾಕಿ ಮುಚ್ಚಿಸಿದನೆಂದು ಕಥೆ.

ಹಾಗಾದರೆ ಸಿಗರಿಯ ನೋಡೋಣವೆಂದು ತೀರ್ಮಾನಿಸಿದ. ಕಾಡಿನ ಮಧ್ಯದ ಒಂದು ಒಂಟಿಕಲ್ಲುಬೆಟ್ಟ ಸಿಗರಿಯ. ಸುತ್ತಲೂ ಹಳೆಯ ಕುಂದಕಗಳ, ಕೋಟೆಗೋಡೆಗಳ ಅವಶೇಷಗಳು. ಭಾರತಕ್ಕೆ ಓಡಿಹೋಗಿದ್ದ, ಸಿಂಹಾಸನದ ನಿಜವಾರಸುದಾರನ ಕುರಿತು ಭಯಪಡುತ್ತ, ಕಾಶ್ಯಪ ಈ ಬೆಟ್ಟದ ಮೇಲೆಯೇ ಒಂದು ಅರಮನೆ ನಿರ್ಮಿಸಿದ. ಒಂದೇ ದಾರಿ. ಅದು ಸಿಂಹದ ಬಾಯಿಯ ಮೂಲಕ. ಒಮ್ಮೆಗೆ ಒಬ್ಬನಿಗೆ ಮಾತ್ರ ಏರಿಹೋಗಲು ಸಾಧ್ಯವಾಗುವಂತೆ ದಾರಿ ನಿರ್ಮಿಸಿ ಮೇಲೆ ಕುಳಿತು ರಾಜ್ಯವಾಳಿದ.

"ಮೊಗಲ್ಲನನ್! ಮೊಗಲ್ಲನನ್ ಮರಳಿಬಂದ. ಸೈನ್ಯ ಸಮೇತನಾಗಿ ಬಂದು ಸವಾಲು ಹಾಕಿದಾಗ ಕಾಶ್ಯಪ ಬೆಟ್ಟದ ಮೇಲಿನ ಅರಮನೆಯಿಂದ ಇಳಿದು ಬಂದ. ಯುದ್ಧದಲ್ಲಿ ಸೋತಾಗ ತನ್ನದೇ ಖಡ್ಗದಿಂದ ಕೊರಳಿಗೆ ಇರಿದುಕೊಂಡು ಆತ್ಮಹತ್ಯೆ ಮಾಡಿದ."

ಸಿಂಹದ್ವಾರದ ಇಕ್ಕಟ್ಟಿನ ಮುಂದೆ ವೇಣು ನಿಂತ. ದೊಡ್ಡ ಸಿಂಹ ಪ್ರತಿಮೆಯ ಎಡದ ಮುಂಗಾಲಿನ ಅವಶೇಷ ಈಗಲೂ ಇದೆ. ಮೂರು ಉಗುರುಗಳು ಅವುಗಳ ಮಧ್ಯೆ ನಿಂತು ಅವನ್ನು ತಡವುತ್ತ ಆರ್ಲೀ ಹೇಳಿದ : "ನೋಡಿ ಉಗುರಿನೊಳಗೆ ನನ್ನ ಮೊಣಕಾಳುಗಳು. ಸಿಂಹದ ಗಾತ್ರವನ್ನು ನೀವು ಊಹಿಸಿಕೊಳ್ಳಿ."

ಮೇಲಿರುವ ಇಕ್ಕಟ್ಟಾದ ಬದಿಯಲ್ಲಿ ಹತ್ತು ಜನ ಸುಂದರಿಯರ ಚಿತ್ರಗಳಿದ್ದುವು. ಮುಂಭಾಗದಲ್ಲಿ ಗಾಜಿನ ಹಾಗೆ ನಯವಾದ ಗೋಡೆಯಲ್ಲಿ ಪ್ರವಾಸಿಗಳು ಕಾಲಕಾಲಗಳಲ್ಲಿ ಬರೆದುದನ್ನು ಹಾಗೆಯೇ ಉಳಿಸಲಾಗಿದೆ.

"ಬನ್ನಿ."

ವೇಣು ಕಷ್ಟಪಟ್ಟು ಮೇಲೇರಿದ.

ಆರ್ಲೀ ಕೆಲವು ಬರಹಗಳನ್ನು ಓದಿ ಹೇಳಿದ—"ಕೆಳಗೆ ಸಿಂಹರಾಜನನ್ನು ನೋಡಿದೆ. ಮೇಲಿನ ರಾಜನ ಜಾಗ ನೋಡಬೇಕೆಂದಿಲ್ಲ"–ಒಬ್ಬ ಬರೆದಿದ್ದಾನೆ.

ಆಶ್ಲೀ ಬಹಳ ಹೊತ್ತು ಗೋಡೆ ಬರಹಗಳನ್ನು ಓದುತ್ತ ಆಸ್ವಾದಿಸುತ್ತ ನಿಂತ.

"ನೋಡಿ. ಇದು ಒಂಬತ್ತನೆಯ ಶತಮಾನದ್ದು. ಈತ ಕವಿಯಾಗಿದ್ದಿರಬೇಕು. ಈ ಸಾಲನ್ನು ನೋಡಿ: ನನಗೆ ಇಲ್ಲಿ ಕನಸಲ್ಲಿ ಒಂದು ಆಕಾಶ ಸಿಕ್ಕಿತು."

ಕೆಳಗೆ ಕಗ್ಗಲ್ಲಕೋಟೆ ಹಾಳುಬಿದ್ದಿರುವ ಈ ಜಾಗದಲ್ಲಿ ಮೊಗಲ್ಲನನ ಸೇನೆ ಜಮಾಯಿಸಿರಬೇಕು.

"ಇಷ್ಟು ಸಮೀಪ ತಲಪುವ ತನಕ ಕಾಶ್ಯಪನ ಸೈನಿಕರು ಏನು ಮಾಡುತ್ತಿದ್ದರು?"

ಅಮಾವಾಸ್ಯೆಯ ರಾತ್ರಿ ಸೇನೆ ತಲಪಿದ್ದು. ಆಶ್ಲೀ ವಿವರಿಸಿದ.

ಮಧ್ಯಾಹ್ನ ಕ್ಯಾಂಡಿಗೆ ತಲಪಿತು. ಬುದ್ಧನ ಹಲ್ಲನ್ನು ಸಂರಕ್ಷಿಸಿರುವ ಮಹಾದೇವಾಲಯದಲ್ಲಿ ಆಶ್ಲೀ ಐದು ಬಿಳಿ ಹೂಗಳನ್ನು ಸಮರ್ಪಿಸಿ ಪ್ರಾರ್ಥನೆಗೆ ತೊಡಗಿದ.

ಸರೋವರ ತೀರದಲ್ಲಿ ಕೆಳಗಿನ ಉದ್ಯಾನಗಳನ್ನೂ ಕ್ಯಾಂಡಿಯಲ್ಲಿ ರಾಣಿಯರ ಸ್ನಾನಗೃಹಗಳನ್ನೂ ದೂರದಿಂದಲೇ ತೋರಿಸುತ್ತ ಆಶ್ಲೀ ಹೇಳಿದ : "ಇಲ್ಲಿಗೆ ಲಾರೆನ್ಸ್ ಬಂದಿದ್ದ. ಡಿ.ಹೆಚ್. ಲಾರೆನ್ಸ್–೧೯೨೨ರಲ್ಲಿ."

ಪ್ರಿನ್ಸ್ ಆಫ್ ವೇಲ್ಸ್‌ನಿಗಾಗಿ ನರ್ತಿಸಿದವರನ್ನು ಕಂಡು ಲಾರೆನ್ಸ್‌ಗೆ ಸಿಟ್ಟೇರಿತು. ಯಾವ ಆಸಕ್ತಿಯನ್ನೂ ತೋರದೆ ಕುಳಿತಿದ್ದ ಆಂಗ್ಲ ರಾಜಕುಮಾರ. ಶ್ರಮವಹಿಸಿ ನರ್ತಿಸುವ ಕ್ಯಾಂಡಿಯನ್ ಕಲಾವಿದರು.

"೧೯೨೨....ನೋಡಿ ಆಶ್ಲೀ...೧೯೨೨ರಲ್ಲೇ ನಮ್ಮ ಅಪ್ಪ ಸಿಲೋನ್‌ಗೆ ಬಂದುದು." "ಸಾಕಷ್ಟು ಸಂಪಾದಿಸಿರಬಹುದು."

ಆತ ನಗುತ್ತ ವೇಣುವಿನ ಭುಜ ತಟ್ಟಿದ.

ಆಗ ಹಿಂದೆ ಕೇಳಿದ್ದ ಅಪ್ಪನ ಕಥೆಯನ್ನು ವೇಣು ಹೇಳಿದ. ಅಪ್ಪನಿಗೆ ಯಾವುಯಾವುದೋ ಬೇರೆ ಬೇರೆ ಆಸ್ತಿಗಳಿದ್ದುವು. ಒಂದು ತೋಟ. ಎರಡು ಅಂಗಡಿಗಳು. ಅದನ್ನೆಲ್ಲ ಇಲ್ಲೆ ಒಬ್ಬಾಕೆ ಹುಡುಗಿಗೆ ಕೊಟ್ಟುಬಿಟ್ಟರು ಅಂತ ಊರಲ್ಲಿ ಸುದ್ದಿ. ಕಡುಗಣ್ಣಾವ ಹುಡುಗಿ.

"ನಿಮ್ಮ ಅಪ್ಪನ ಮಗಳು?"

"ಹಾಗೂ ಒಂದು ಸುದ್ದಿಯಿದೆ. ಅವಳ ತಾಯಿ ತುಂಬ ಕಾಲ ಅಪ್ಪನ ಜತೆಗಿದ್ದರು, ಏನಿದ್ದರೂ"

"ರೈಟ್! ನಾವು ಕಂಡುಹುಡುಕಿಯೇ ಸಿದ್ಧ! ವಶಪಡಿಸಿಕೊಂಡ ಸಂಪತ್ತಿನಲ್ಲಿ ನನಗೂ ಹಕ್ಕು ಇದೆಯೆಂದು ಹೇಳಿ ಅಂಗಳದಲ್ಲಿ ನಿಂತ ಮೊಗಲ್ಲನನ್ ಯುದ್ಧಕ್ಕೆ ಆಹ್ವಾನಿಸುತ್ತಾನೆ. ಹೇಯ್, ಇವತ್ತು ಅಮಾವಾಸ್ಯೆ!"

ಆರ್ಶ್ಲೀ ತುಂಬ ಹುರುಪಿನಿಂದ ಬಗಲ ಚೀಲದಿಂದ ಒಂದು ಬಿಯರ್ ಟಿನ್ ತೆಗೆದು ಮುಚ್ಚಳ ಹಾರಿಸಿದ.

"ಮಾರ್ಚ್ ಟು ಕಡುಗಣ್ಣಾವ! ಮಿಸ್ಟರ್ ಮೊಗಲ್ಲನಸ್, ಗೆಟ್ ರೆಡಿ!"

ಆತನ ನಗುವಿನಲ್ಲಿ ವೇಣುವಿಗೆ ಪಾಲ್ಗೊಳ್ಳಲು ಸಾಧ್ಯವಾಗಲಿಲ್ಲ. ಹಳೆಯ ಕಥೆಗಳನ್ನೆಲ್ಲ ಯಾಕಾದರೂ ಹೇಳಿದೆನೆಂದು ಅವನಿಗೆ ಅನಿಸುವಂತಾಯಿತು. ಹೀಗೇ ಊರು ನೋಡಿ—

ಬೊಟಾನಿಕಲ್ ಗಾರ್ಡನನ್ನೂ ಆರ್ಕಿಡ್‌ಗಳನ್ನೂ ಕಾಣಲು ಆರ್ಶ್ಲೀಗೆ ಆಸಕ್ತಿ ಇದ್ದುದು.

ಪಟ್ಟಣವನ್ನು ಹಿಂದೆ ಬಿಟ್ಟು ಅರಣ್ಯಮಾರ್ಗವಾಗಿ ಸಂಚರಿಸಿ, ಪುಟ್ಟ ಎರಡು ಬೆಟ್ಟಗಳನ್ನೇರಿ ಮೇಲೆ ತಲಪಿದಾಗ ಆರ್ಶ್ಲೀ ಕಾರು ನಿಲ್ಲಿಸುವಂತೆ ಹೇಳಿದ.

ಕಡುಗಣ್ಣಾವ ಎಂಬ ಮಾತಿಗೆ ಅರ್ಥ ಗೊತ್ತೆ? ದಾರಿಯ ದೇವಾಲಯ, ಎಂದು. ಅಲ್ಲಿ ನಿಂತರೆ ಕ್ಯಾಂಡಿ ನಗರದ ಅಂಚಿನಲ್ಲಿ ಹೆಂಚು ಹೊದಿಸಿದ ಉಪ್ಪರಿಗೆ ಮನೆಗಳನ್ನು ಹಸಿರು ಹಬ್ಬಿರುವುದರ ಎಡೆಯಲ್ಲೂ ಚೆದರಿಕೊಂಡಂತೆ ಕಾಣಬಹುದು. ನಗರವನ್ನು ಸುತ್ತುವರಿದು ಹರಿಯುವ ಮಹಾಬಲಿಪ ಹೊಳೆಯ ಒಂದು ತಿರುವು ಕೂಡ ಅಲ್ಲಿಂದ ಕಾಣಸಿಗುವುದು.

ಚಿಕ್ಕ ಅಂಗಡಿ ಬೀದಿಯೊಂದರ ನಡುವೆ ಕಾರು ನಿಲ್ಲಿಸಿ ಆರ್ಶ್ಲೀಯೆಂದ : "ಇದೇ ಕಡುಗಣ್ಣಾವ."

ಆತ ನಿಧಾನವಾಗಿ ಕಾರಿನಿಂದ ಇಳಿದ. ಹೆಚ್ಚೆಂದರೆ ಮೂವತ್ತು ಅಂಗಡಿಗಳು ಮಾತ್ರ ಇರುವ ಸಣ್ಣ ಅಂಗಡಿ ಬೀದಿ. ಎರಡು ಕಟ್ಟಡಗಳು ಮಾತ್ರ ಕಾಂಕ್ರೀಟಿನವು. ಬಾಕಿಯವೆಲ್ಲ ಹೆಂಚು ಹೊದಿಸಿದ ಮಾಡಿನವು.

"ಇದೇನಾ?"

"ಹೌದು ಇದೇ."

ದೂರ ಗುಡ್ಡದಲ್ಲಿ ಇಳಿಜಾರುಗಳಲ್ಲಿ ಚಹಾತೋಟಗಳು. ಅದರ ಆಚೆ ಕಾಡುಗಳು.

"ತಂದೆಯವರು ಹೆಸರು?"

"ಕೆ.ಎಂ. ನಾಯರ್."

ಮೂರು ಟ್ಯಾಕ್ಸಿಗಳು ಆಲದ ಬುಡದಲ್ಲಿವೆ. ಆರ್ಶ್ಲೀ ಅವುಗಳ ಡ್ರೈವರರ ಜತೆ ಮಾತನಾಡಿದ. ಬಳಿಕ ಅಂಗಡಿಗಳ ನೇರಕ್ಕೆ ನಡೆದುಹೋದ.

ವೇಣು ದಿಗ್ಭ್ರಾಂತನಾದ. ಅಪ್ಪ ಪ್ರತಾಪಸಿಂಹ ಮೆರೆದರೆಂದು ಕೇಳಿದ ನಗರ ಇದೇನಾ? ತನ್ನ ಊರಲ್ಲಿ ಹಳೆಯ ಪಡುವಂಗಡಿ ಕೂಡ ಇದಕ್ಕಿಂತ ದೊಡ್ಡದಿದೆ.

ಕೆಳಗೆ ಎರಡು ಅಂಗಡಿಗಳು. ಅದರ ಮೇಲೆ ಊರಿಂದ ಕರೆತಂದ ಕೆಲಸಗಾರರು ವಾಸಿಸುತ್ತಿದ್ದರಂತೆ. ಆತ ಅಸ್ವಸ್ಥನಾಗಿ ಸುತ್ತಲೂ ನೋಡುತ್ತ ನಿಂತ. ಮೇಲಂತಸ್ತುಳ್ಳ ಕಟ್ಟಡಗಳು ಒಟ್ಟು ಎರಡೇ ಇದೆ. ಕಪ್ಪು ಹೆಂಚುಗಳ ಕೆಳಗೆ ಚಿಕ್ಕ ಚಿಕ್ಕ ದಳಿ*ಗಳನ್ನು ಕಾಣಬಹುದು.

ಆಶ್ಲೀ ಬರಲು ಒಂದಿಷ್ಟು ಹೆಚ್ಚು ಹೊತ್ತು ತೆಗೆದುಕೊಂಡ. ಕಾಲರಿಲ್ಲದ ಷರ್ಟು ಮತ್ತು ಲುಂಗಿ ಧರಿಸಿದ ಒಬ್ಬ ಪ್ರಾಯಸ್ಥ ಜೊತೆಗಿದ್ದಾನೆ. ನರೆತ ದೊಡ್ಡ ಗಿರಿಜಾ ಮೀಸೆ. ಆದರೆ ಆತನ ಕಣ್ಣುಗಳು ಸೌಮ್ಯವಾಗಿದ್ದುವು.

ಆಶ್ಲೀಯೆಂದ : "ನನ್ನ ಫಾದರ್-ಇನ್-ಲಾರನ್ನು ಈತನಿಗೆ ಗೊತ್ತು. ಈತನಲ್ಲಿ ಕೇಳಬೇಕಾದ್ದನ್ನು ಕೇಳಿ. ನಾನು ನಿಮಗೆ ದುಭಾಷಿಯಾಗುತ್ತೇನೆ."

ವೇಣು ಆತಂಕಕ್ಕೊಳಗಾದ.

"ಹಿಂದೆ ಇಲ್ಲಿ ಕೆಲವು ಮಲೆಯಾಳಿಗಳು ಇದ್ದರಲ್ಲವೆ ಎಂದು ಕೇಳಿ. ಈಗಲೂ ಯಾರಾದರೂ..."

ಆಶ್ಲೀ ತುಂಬ ಹೊತ್ತು ಮಾತನಾಡಿದ. ವೇಣು ಉತ್ಕಂಠಿತನಾಗಿ ನಿಂತಿದ್ದ. ಮುಂದುವರಿಸುತ್ತ ಆಶ್ಲೀಯೆಂದ : "ವೇಣು, ಈತ ಹೇಳುವುದು ಇಲ್ಲಿ ಈಗ ಕೊಚ್ಚಿಯನ್ನರು ಯಾರೂ ಇಲ್ಲವೆಂದು. ಕೊಚ್ಚಿಯನ್ನರು ಎಂದು ಇಲ್ಲಿನವರು ನಿಮ್ಮವರನ್ನು ಹೇಳುವುದು."

"ಹಿಂದೆ ಬಹಳ ಹಿಂದೆ. ಸುಮಾರು ನಲುವತ್ತು ವರ್ಷ ಹಿಂದೆ?"

ಪುನಃ ಅವರು ತಮ್ಮೊಳಗೆ ಮಾತನಾಡಿಕೊಂಡರು.

"ಹಿಂದೆ ಒಬ್ಬ ವ್ಯಾಪಾರಿಯಿದ್ದರು. ಮತ್ತೆ ಒಬ್ಬ ಕಟ್ಟಾಡಿಯೋ...ಎಂದರೆ ಮಂತ್ರವಾದಿ." ಆತ ತೋರಿಸಿದ ಕಟ್ಟಡಕ್ಕೆ ಉಪ್ಪರಿಗೆಯಿಲ್ಲ. ಹೆಂಚು ಹಾಕಿದ, ಮೂರು ಕೋಣೆಗಳ ಒಂದು ಕಟ್ಟಡ.

ಗಿರ್ಜಾ ಮೀಸೆಯವನ ಜತೆ ಆಶ್ಲೀ ಮತ್ತು ಸಂಶೋಧನೆಗೆ ಇಳಿದಾಗ ಹೇಳಿದ : "ಬೇಡ ಮಿಸ್ಟರ್ ಆಶ್ಲೀ, ನಾವು ಹಿಂತಿರುಗೋಣ."

"ಎಲ್ಲ ಮಂತ್ರವಾದಿಗಳೂ ನಿಮ್ಮ ಊರವರಾಗಿದ್ದರು."

ಒಂದು ವೇಳೆ....

ಅಮ್ಮನ ಒಬ್ಬ ಅಣ್ಣ ಸ್ವಲ್ಪ ಕಾಲ ಅಪ್ಪನ ಜತೆ ನೌಕರಿ ಮಾಡಲು ಹೋದರು. ಮತ್ತೆ

---

* ದಳಿ-ಮರದ ರೀಪುಗಳಿಂದ ತಯಾರಿಸಿದ ಕಿಟಕಿಯಾಕಾರಾದ ರಚನೆ.

ಬೇರಾದರು. ವಿಧವೆ ಶಿಂಗಳೆ ಶಿಮೊಬ್ಬಳಲ್ಲಿ ಪಾರುಪತ್ಯಗಾರನಾಗಿದ್ದರೆಂದು ಪ್ರತೀತಿ. ಸ್ವಲ್ಪ ಕಾಲ ಮಂತ್ರವಾದಿಯಾಗಿಯೂ ತಿರುಗಾಡಿದ್ದರಂತೆ. ಅವರು ಮರಳಿ ಬರಲೇ ಇಲ್ಲ.

ಆಶ್ಲೀ ಈಗ ಮತ್ತೊಬ್ಬನನ್ನು ಜತೆಯಲ್ಲಿ ಕರೆದುಕೊಂಡು ಬಂದ. ಜೀನ್ಸ್‌ಧಾರಿ ಯುವಕ. ತುಟಿಯಿಂದ ಸಿಗರೇಟು ತೆಗೆಯದೆ ಚಪ್ಪಲಿಯನ್ನು ನೆಲದಲ್ಲಿ ಎಳೆದಾಡುತ್ತ ಆಶ್ಲೀ ಹೇಳುವುದಕ್ಕೆಲ್ಲ ತಲೆಯಾಡಿಸುತ್ತ ಹಿಂದೆಯೇ ಬಂದ. ಬಂದಾತ ವೇಣುವನ್ನೊಮ್ಮೆ ನೋಡಿದ. ಅವನ ನಗುವಿನಲ್ಲಿ ಸ್ವಲ್ಪ ಗೇಲಿ ಬೆರೆತುಕೊಂಡಿತ್ತು. ಆಶ್ಲೀಯ ನಿರ್ದೇಶಾನುಸಾರ ಆತ ಕಾರಿನ ಮುಂದಿನ ಸೀಟಲ್ಲಿ ಕುಳಿತ. ಸಿಗರೇಟು ತುಂಡು ಹೊರಗೆಸೆದು ಇನ್ನೊಂದು ಸಿಗರೇಟು ಹೊತ್ತಿಸಿದ. ಡ್ರೈವರಿಗೂ ಒಂದನ್ನು ಚಾಚಿದ. ಡ್ರೈವರ್ ನಿರಾಕರಿಸಿದ.

"ಇನ್ನು ಯಾವ ಕಡೆ?"

ಆತಂಕದಿಂದಲೇ ವೇಣು ಕೇಳಿದ.

"ಪತ್ತೆಯಾಗದೆ ಮಿಸ್ಟರ್ ಮೊಗಲ್ಲನಸ್ ಮರಳಲುಂಟೆ? ಮಿಸ್ಟರ್ ವೇಣು, ಜಾಗದ ಹೆಸರು ಇದೇ ಹೌದಲ್ಲವೆ?"

ತಪ್ಪಿಸಿಕೊಳ್ಳಲು ಉಪಾಯವೊಂದು ಸಿಕ್ಕಿತೆಂಬಂತೆ ವೇಣುವೆಂದ : "ಈಗ ನನಗೂ ಸಂಶಯವಾಗುತ್ತದೆ. ಆಶ್ಲೀ, ನಾವು ಹಿಂತಿರುಗೋಣ."

"ಈತ ಹೇಳುವ ಒಂದು ಜಾಗ ನೋಡಿಬಿಡೋಣ. ಹತ್ತಿರವೇ ಅಂತೆ, ಒಬ್ಬ ಕೊಚ್ಚಿಯಾನನ ಆಳುಗಳು ಯಾರೋ ಅಲ್ಲಿದ್ದಾರಂತೆ."

ಐದು ನಿಮಿಷ ಕಳೆದಾಗ ಕಾರು ನಿಂತಿತು. ಅವರು ಇಳಿದಾಗ ವೇಣು ಮನಸ್ಸಿಲ್ಲದ ಮನಸ್ಸಿನಿಂದ ಜತೆಗೆ ನಡೆದ. ಕಾಲು ಹಾದಿಗೆ ಇಳಿಯುವಲ್ಲಿ ಬಿಳಿ ಬಟ್ಟೆಯಲ್ಲಿ ಬರೆದ ಬ್ಯಾನರುಗಳು ತೆಂಗು ಕಂಗುಗಳಲ್ಲೆಲ್ಲ ಕಂಡವು. ಸತ್ತ ಮನೆಯ ಪರಿಸರದಲ್ಲಿ ಪ್ರೇತಾತ್ಮಕ ಅಂತ್ಯಗೌರವ ಸಲ್ಲಿಸಲು ಬಂಧುಗಳೂ ಗೆಳೆಯರೂ ನಡೆಸುವ ವಿಧಿಯಿದು–ಎಂದು ಆಶ್ಲೀ ವಿವರಿಸಿದ.

ಹುಡುಕುತ್ತ ಹೋದ ವ್ಯಕ್ತಿ ಕಾಣುವುದು...ಹೆಣವನ್ನು ಹಿಂದೆ ಕೆಲವು ಕಥೆಗಳಲ್ಲಿ ಓದಿದ್ದ ನೆನಪಾಯಿತು.

"ನಾವು—ನಾವು ಸತ್ತ ಮನೆಗೋ?" ವೇಣು ಗಲಿಬಿಲಿಯಿಂದ ಕೇಳಿದ.

"ಹೇಯ್, ಅಲ್ಲ. ಅದರ ಆಚೆಗಿನ ಮೂರನೇ ಮನೆ."

ಸತ್ತ ಮನೆಯ ಪರಿಸರದಲ್ಲಿ ಒಂದಷ್ಟು ಸೈಕಲ್‌ಗಳೂ, ಸ್ಕೂಟರ್‌ಗಳೂ, ಕೆಲವು ಜನ ದಾರಿಯ ಬದಿಯಲ್ಲಿ ಗುಂಪಾಗಿ ನಿಂತಿದ್ದಾರೆ. ಯುವಕನ ಪರಿಚಯದವನೊಬ್ಬ ಅವನಲ್ಲಿ ಏನೋ ಕೇಳಿದ. ಮೂರನೆಯ ಮನೆಯೂ ಬಹಳ ಸಣ್ಣದಾಗಿತ್ತು. ಕಾಲುದಾರಿ ಮತ್ತು ಮನೆಯ ಬಾಗಿಲಿನ

ಮಧ್ಯದ ಜಾಗದಲ್ಲೆಲ್ಲ ಗಿಡಗಳು. ಮನೆಯ ಒಂದು ಬದಿಯ ಕೊಳದ ಸಮೀಪ ಯಾರೋ ಒಬ್ಬ ಕುಳಿತುಕೊಂಡು ಒಂದು ಬಿದಿರ ದೋಟಿಯಿಂದ ಹಾವಸೆ ಸಂಗ್ರಹಿಸುತ್ತಿದ್ದಾನೆ. ಮೊಣಕಾಲವರೆಗಿನ ಲುಂಗಿ ಅವನ ವೇಷ. ಮುಖ ಕಾಣುತ್ತಿಲ್ಲ. ಎರಡು ಬಣ್ಣಗಳಲ್ಲಿರುವ ದೇಹದಲ್ಲಿ ಎಲುಬುಗಳು ಎದ್ದು ಕಾಣುತ್ತಿವೆ. ಆಶ್ಲೀಯೂ ಯುವಕನೂ ಅವನ ಬಳಿ ನಡೆದರು. ವೇಣು ಅಂಗಳಕ್ಕಿರುವ ಇಕ್ಕಟ್ಟಾದ ಜಾಗದಲ್ಲೆ ನಿಂತ. ಅವರು ಏನೋ ಕೇಳುತ್ತಿದ್ದಾರೆ. ಆತ ಮುಖ ತಿರುಗಿಸುತ್ತಿಲ್ಲ, ಉತ್ತರಿಸುತ್ತಲೂ ಇಲ್ಲ ಎಂಬಂತಿದೆ. ಹಾವಸೆ ಎಳೆದು ಹಾಕುವುದರಲ್ಲೆ ಮಗ್ನ. ಬಳಿಯಲ್ಲಿ ಇಬ್ಬರು ಇದ್ದಾರೆ ಎಂಬುದೇ ತಿಳಿದಿಲ್ಲವೆಂದು ತೋರುತ್ತಿದೆ.

ಕೊನೆಗೆ ಆಶ್ಲೀಯ ದನಿ ತುಂಬ ಏರಿತು, ವಾಗ್ಯುದ್ಧವೊಂದರ ಆರಂಭದ ಹಾಗೆ. ದೋಟಿಯನ್ನು ಬಲದ ಕೈಯಿಂದ ಎಡದ ಕೈಗೆ ವರ್ಗಾಯಿಸಿ ಆತ ನಿಧಾನಕ್ಕೆ ಆಗಂತುಕರತ್ತ ನೋಡಿದ. ಅಲ್ಲಲಿ ನರೆತ ಕುರುಚಲು ಗಡ್ಡವಿದ್ದ ಮುಖ. ಚಂಚಲ ಕಣ್ಣುಗಳಲ್ಲಿ ರೋಷ ಏರುತ್ತಿರುವಂತೆ...ಆತ ಆಗಂತುಕರಿಬ್ಬರ ಕಾಲಮೇಲೇ ಬಿತ್ತು ಎಂಬಂತೆ ಉಗುಳು ಹಾರಿಸಿ ಮೇಲೆ ನೋಡಿ ಏನೋ ಗಟ್ಟಿಯಾಗಿ ಹೇಳಿದ. ಮತ್ತೆ ಪುನಃ ಕೊಳದತ್ತ ತಿರುಗಿ ಹಾವಸೆಯನ್ನು ತಿರುಪಿ ಮುದ್ದೆ ಮಾಡಿ ಎಳೆಯತೊಡಗಿದ. ಇನ್ನೂ ನಾಲ್ಕೈದು ನಿಮಿಷ ಅಲ್ಲಿ ನಿಂತಿದ್ದು ಆಶ್ಲೀ ಹಿಂತಿರುಗಿ ಬರಲಾರಂಭಿಸಿದ. ಯುವಕ ಆ ಅಪರಿಚಿತನಿಗೆ ಒಂದು ಸಿಗರೇಟು ಕೊಡಲು ಪ್ರಯತ್ನಿಸಿದ. ಆತ ಅಲುಗಾಡದೆ ತನ್ನ ಕೆಲಸ ಮುಂದುವರಿಸಿದಾಗ ಆಶ್ಲೀಯ ಬಳಿ ನಗುತ್ತ ಬಂದು ಸೇರಿದ.

ಆಶ್ಲೀಯೆಂದ : "ಆತನಿಗೆ ತಲೆ ಸರಿಯಿಲ್ಲ, ಪಾಪ."

ಕಾರಿನ ಬಳಿಗೆ ಹಿಂತಿರುಗುವಾಗ ದಾರಿ ತೋರಿಸುವುದಕ್ಕಾಗಿ ಬಂದಿದ್ದ ತರುಣ ಏನೋ ಹೇಳುತ್ತಿದ್ದ. ರಸ್ತೆ ತಲಪಿತು. ಆಶ್ಲೀ ಆ ತರುಣನ ಕೈಕುಲುಕಿ ಧನ್ಯವಾದ ಹೇಳಿದ. ಕಾರಲ್ಲಿ ಅವರಿಬ್ಬರೇ ಆದಾಗ ವೇಣುವಿಗೆ ಎರಡು ಸಂಗತಿಗಳನ್ನು ಕೇಳಬೇಕೆನಿಸಿತು. ಒಂದು ಆ ಮನುಷ್ಯನ ಹೆಸರು. ಎರಡನೆಯ ಸಂಶಯವನ್ನು ಮೊದಲೇ ಕೇಳಿದ.

"ಆತ ಮಾಡುತ್ತಿದ್ದುದೇನು? ಹಾವಸೆಯನ್ನು ಸಂಗ್ರಹಿಸುತ್ತಿದ್ದನಲ್ಲವೆ?"

"ಹೂಂ. ಹಾವಸೆ. ಈ ಹಾವಸೆಯನ್ನು ಕೆಲವರು ಬೇಯಿಸಿ ತಿನ್ನುತ್ತಾರೆ, ಕೆಲವು ಬಡವರು"

ಹೆಸರು ಕೇಳುವುದು ಬೇಡವೆಂದು ತೀರ್ಮಾನಿಸಿದ.

ಸ್ವಲ್ಪ ಹೊತ್ತಿನ ಮೌನದ ಬಳಿಕ ಆಶ್ಲೀ ಎಂದ :

"ಈತನ ತಾಯಿ ಒಬ್ಬ ಕೊಚ್ಚಿಯನನ ಮಗಳಂತೆ. ತುಂಬ ಹಿಂದೆಯೇ ತೀರಿಕೊಂಡಳು. ಅಂಗಡಿ ಬೀದಿಯವರು ಹೇಳಿದರು. ಆತನಿಗೆ ಒಂದು ಸಣ್ಣ ವ್ಯಾಪಾರವಿತ್ತು. ಹೆಸರು ನೆನಪಿರುವವರು ಯಾರೂ ಇಲ್ಲ."

ವೇಣು ಶಾಂತವಾಗಿರಲು ಪ್ರಯತ್ನಿಸಿದ, ಆಗುತ್ತಿಲ್ಲ. ಚಹಾತೋಟಗಳ ಜತೆ ದೊಡ್ಡ

ವ್ಯಾಪಾರ ವಹಿವಾಟು ಇದ್ದ ಸ್ಥಳ ಇಲ್ಲಿ ಆಗಿರಲಾರದು. ಅಪ್ಪ ಪ್ರತಾಪಿಯಾಗಿ ಬಾಳಿದ ನಗರ ಇದಾಗಿರಲಿಕ್ಕಿಲ್ಲ.

"ಅಮ್ಮನ ಹೆಸರು, ಅಪ್ಪನ ಹೆಸರು, ಅಮ್ಮನ ಅಪ್ಪನ ಹೆಸರು–ಎಲ್ಲ ಕೇಳಿ ನೋಡಿದೆ. ಮಾತನಾಡಿದರೆ ತಾನೆ? ಕೊನೆಗೆ ಒಂದು ಸಂಗತಿ ಹೇಳಿದ, ನಾನು ಗಲಾಟೆ ಮಾಡಿದಾಗ ಅದೊಂದು ಕ್ಲಾಸಿಕ್ ಹೇಳಿಕೆಯಾಗಿತ್ತು.

"ಹುಂ?"

"ಅದೇ. ಎಲ್ಲ ಕೊಚ್ಚಿಯವನರೂ ಕಳ್ಳರು."

ಆರ್ಶೀ ನಕ್ಕ!

ಆ ನಗುವಿನಲ್ಲಿ ಪಾಲುಗಾರನಾಗಲು ವೇಣುವೂ ಒಂದಿಷ್ಟು ಪ್ರಯತ್ನಿಸಿದ.

"ನಿಮ್ಮ ಅಪ್ಪನ ಮಗಳೆಂದು ಹೇಳಲಾಗುವ ಹೆಂಗುಸು...ಅವರ ಹೆಸರು ಏನಾಗಿತ್ತು?"

ವೇಣು ಅನುಮಾನಿಸಿದ. ಬಳಿಕ ಅವನತ್ತ ನೋಡದೆ ಹೇಳಿದ : "ನನಗೆ ಗೊತ್ತಿಲ್ಲ."

"ವಾಟ್ ಎ ಶೇಮ್! ನನ್ನ ಫಾದರ್–ಇನ್–ಲಾವಿನ ಗೆಳೆಯರು ಇನ್ನೂ ಕೆಲವರು ಈ ಭಾಗದಲ್ಲಿದ್ದಾರೆ. ಹೆಸರು ತಿಳಿದಿದ್ದರೆ ಹುಡುಕಾಡಲು ಸುಲಭವಾಗುತ್ತಿತ್ತು. ಜಾಗ ಇದೇ ತಾನೆ?"

"ಗೊತ್ತಿಲ್ಲ ಆರ್ಶೀ. ಒಂದು ವೇಳೆ...ಒಂದು ವೇಳೆ ನನಗೆ ಹೆಸರು ತಪ್ಪಿಹೋಗಿರಬಹುದು. ಇದಾಗಿರಲಿಕ್ಕಿಲ್ಲ. ಕಡುಗಣ್ಣಾವದಂತೆ ಬೇರೆ ಯಾವುದೋ ಒಂದು ಹೆಸರಾಗಿರಬಹುದು...ನಿಮ್ಮ ಕೆಲವು ಊರ ಹೆಸರುಗಳು..."

ಹತ್ತಿರದ ಒಂದು ಕಾಣಬಹುದಾದ ಜಾಗವೆಂದರೆ ಸರ್ದಿಯೇಲ್ ಎಂಬೊಬ್ಬ ಭಯಂಕರ ರೌಡಿಯನ್ನು ಎದುರು ಹಾಕಿಕೊಂಡು ಸತ್ತ ಪೋಲೀಸರ ಸ್ಮಾರಕ. ಅದೂ ಬೇಡದಿದ್ದರೆ ಮೆಡಾವಿಲೇವಿನ 'ಮಕರತೋರಣ'. ಅದೂ ಬೇಡವಾದರೆ...

"ಸಾಕು..ನಾನು ಬಳಲಿ ಬಿಟ್ಟಿದ್ದೇನೆ. ನಾವು ಕೊಲಂಬೋವಿಗೆ ಹೋಗೋಣ."

"ಕಲಂಬೋ ಕೊಲಂಬೋ ಅಲ್ಲ. ಹುಂ, ಹೊರಡೋಣ."

ಆತ ಹೊರಕ್ಕೆ ನೋಡಿದ.

"ಘಾಟಿಯಲ್ಲಿ ಬೇಗ ಕತ್ತಲಾಗುತ್ತದೆ. ಓ! ಇವತ್ತು ಅಮಾವಾಸ್ಯೆಯಲ್ಲವೆ?"

ಬಳಿಕ ಕಾರಣವೇನೂ ಇಲ್ಲದೆ ಆತ ಗಹಗಹಿಸಿ ನಕ್ಕ.

ದಾರಿ ಬದಿಯ ಕೆಲವು ದೃಶ್ಯಗಳು, ಅವುಗಳ ವಿವರಣೆಯ ಶಬ್ದ, ಬಹಳ

ದೂರದಿಂದೆಲ್ಲಿಂದಲೋ ಬರುತ್ತಿರುವ ಹಾಗೆ. ಎಲ್ಲವನ್ನೂ ಕಾಣುತ್ತಿದ್ದಾನೆ, ಕೇಳುತ್ತಿದ್ದಾನೆ ಎಂಬ ಭಾವವನ್ನು ಮುಖದಲ್ಲಿ ತಂದುಕೊಳ್ಳಲು ಪ್ರಯತ್ನಿಸುತ್ತ ಆತ ಒರಗಿ ಕುಳಿತ. ಮನಸ್ಸಲ್ಲಿ ಮರುಕಳಿಸುತ್ತಲೇ ಇತ್ತು:—ಹೌದು. ಹೆಸರು ತಪ್ಪಿಹೋದದ್ದು. ನನಗೆ ಹೆಸರು ತಪ್ಪಿಹೋದದ್ದು. ಖಂಡಿತ. ಕಡುಗಣ್ಣಾವ ಅಲ್ಲ. ಮತ್ಯಾವುದೋ ಒಂದು ಹೆಸರು—ಮತ್ತಾವುದೋ...

□

ಡಾ. ಕಮಲಾಕ್ಷ ಕೆ.
ಪ್ರಿನ್ಸಿಪಾಲರು, ನಳಂದ ಕಲಾ ವಿಜ್ಞಾನ
ಮಹಾವಿದ್ಯಾಲಯ ಪೆರ್ಲ ಅಂಚೆ, ಕಾಸರಗೋಡು

# ಬಿ.ಎಂ.ಶ್ರೀ. ಮತ್ತು ತೌಲನಿಕ ಸಾಹಿತ್ಯ

ಡಾ. ಎಸ್.ಎಸ್. ತಾರಾನಾಥ

ಬಿ.ಎಂ. ಶ್ರೀಕಂಠಯ್ಯನವರನ್ನೂ ಅವರ ಸಾಹಿತ್ಯವನ್ನೂ ಕುರಿತು ಈವರೆಗೆ ಅನೇಕ ಪುಸ್ತಕಗಳು ಪ್ರಕಟವಾಗಿವೆ. ನೂರಾರು ಲೇಖನಗಳು ಹೊರಬಂದಿವೆ. ಇವುಗಳಲ್ಲಿ ಕನ್ನಡ ಕಾವ್ಯ, ನಾಟಕ, ಭಾಷೆ, ಛಂದಸ್ಸು, ಸಾಹಿತ್ಯ, ಚರಿತ್ರೆ ಮತ್ತು ನವೋದಯ ಚಳವಳಿಗಳಿಗೆ ಶ್ರೀಕಂಠಯ್ಯನವರಿಂದ ಸಂದ ಕೊಡುಗೆಗಳನ್ನು ಪರಿಚಯಿಸಲಾಗಿದೆ, ಪರಿಶೀಲಿಸಲಾಗಿದೆ, ಮೌಲ್ಯಮಾಪನ ಮಾಡಲಾಗಿದೆ. ಆದರೆ ತೌಲನಿಕ ಸಾಹಿತ್ಯ ಕ್ಷೇತ್ರಕ್ಕೆ ಶ್ರೀಕಂಠಯ್ಯನವರ ಕಾಣಿಕೆಯೇನೆಂಬುದನ್ನು ಪ್ರತ್ಯೇಕವಾಗಿ, ಪ್ರಧಾನವಾಗಿ, ಸಮಗ್ರವಾಗಿ ಯಾರೂ ವಿವೇಚಿಸಿದಂತಿಲ್ಲ. ಇರುವ ಕೆಲವು ವಿವೇಚನೆಗಳಲ್ಲಿ ಬಂದಿರುವ ಈ ಸಂಬಂಧದ ಪ್ರಸ್ತಾವ ಆನುಷಂಗಿಕವಾದದ್ದು. ಅವರ ಸೃಜನಶೀಲ ಸಾಹಿತ್ಯದ ತೌಲನಿಕ ವಿವೇಚನೆ ಕುರಿತದ್ದು, ಅಷ್ಟೆ. ಹಾಗೆ ನೋಡಿದರೆ ಶ್ರೀಯವರು ಆಧುನಿಕ ಕನ್ನಡದಲ್ಲಿ ತೌಲನಿಕ ಸಾಹಿತ್ಯ ದೃಷ್ಟಿಯನ್ನು ಮೂಡಿಸಿದ ಮೊದಲಿಗರು; ಅದರ ಅಧ್ಯಯನಕ್ಕೆ, ಪ್ರಚಾರಕ್ಕೆ 'ಶ್ರೀ'ಕಾರ ಹಾಕಿದ ಆಚಾರ್ಯರು; ಆ ಕಲ್ಪನೆಯ ಹಿನ್ನೆಲೆಯಲ್ಲಿ ಅಪೂರ್ವವಾದ ಕೃತಿಗಳನ್ನು ರಚಿಸಿದ ಸಾಹಿತಿ ಶ್ರೇಷ್ಠರು. ಒಂದರ್ಥದಲ್ಲಿ ಅವರು ತಮ್ಮ ಕಾಲದಲ್ಲಿ ತೌಲನಿಕ ಸಾಹಿತ್ಯ ಚಳವಳಿಯನ್ನೆ ಹೂಡಿದರು ಎಂದರೂ ತಪ್ಪಾಗದೆನಿಸುತ್ತದೆ. ತೌಲನಿಕ ಸಾಹಿತ್ಯ ಪ್ರವರ್ತಕ ಎಂಬ ಹೆಸರಿಗೆ ಹೇಳಿ ಮಾಡಿಸಿದ ವ್ಯಕ್ತಿ ಬಿ.ಎಂ. ಶ್ರೀಕಂಠಯ್ಯ. ಈ ಕ್ಷೇತ್ರದೊಂದಿಗಿನ ಅವರ ಸಂಬಂಧವನ್ನು ತೌಲನಿಕ ಸಾಹಿತ್ಯಾಭ್ಯಾಸಿಗಳಾಗಿ ಸಜ್ಜು, ಸಿದ್ಧತೆ, ತೌಲನಿಕ ಸಾಹಿತ್ಯ ಪ್ರಚಾರ, ಪ್ರಾಮುಖ್ಯಗಳಿಗೆ ಅವರು ಕೈಕೊಂಡ ಚಟುವಟಿಕೆಗಳು, ತಮ್ಮ ವಿಮರ್ಶೆ ಬರೆಹಗಳಲ್ಲಿ ಅವರು ತೋರಿದ ತೌಲನಿಕ

ಸಾಹಿತ್ಯ ದೃಷ್ಟಿ ಮತ್ತು ಅವರ ಸೃಷ್ಟಿ ಸಾಹಿತ್ಯದ ಹಿನ್ನೆಲೆಯಲ್ಲಿರುವ ತೌಲನಿಕ ಸಾಹಿತ್ಯ ಕಲ್ಪನೆ ಎಂಬ ನಾಲ್ಕು ಸ್ಥೂಲ ವಿಭಾಗಗಳಲ್ಲಿ ಇನ್ನು ಮುಂದೆ ನೋಡಬಹುದಾಗಿದೆ.

* * * *

ಶ್ರೀಕಂಠಯ್ಯನವರು ಕನ್ನಡಿಗರು, ಕನ್ನಡದಲ್ಲಿ ಕೃತಿರಚನೆ ಮಾಡಿ ಖ್ಯಾತರಾದವರು. ಆದರೆ ಅವರು ಪೂರ್ಣಕಾಲದ ಕನ್ನಡ ಮೇಷ್ಟ್ರರಾಗಿರಲಿಲ್ಲ, ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ತಲಸ್ಪರ್ಶಿಯಾಗಿ ಅವರು ಇಂಗ್ಲಿಷ್ ಸಾಹಿತ್ಯವನ್ನು ಅಭ್ಯಾಸ ಮಾಡಿದ್ದರು. ಇದರ ಗಾಢವಾದ ಪರಿಚಯದೊಂದಿಗೆ, ಇಂಗ್ಲಿಷ್‌ಗೆ ಅನುವಾದವಾಗಿದ್ದ ಇತರ ಭಾಷೆಗಳ ಕೃತಿಗಳನ್ನೂ ಅವರು ಆತ್ಮೀಯವಾಗಿ ಅಧ್ಯಯನ ಮಾಡಿದ್ದರು. ಹೀಗಾಗಿ ಅವರಿಗೆ ಅನ್ಯಭಾಷಾ ಸಾಹಿತ್ಯ ಕೃತಿಗಳ ಸೊಗಸು, ಸವಿಗಳು ಚೆನ್ನಾಗಿ ತಿಳಿದಿದ್ದವು. ಇಂಥ ಕೃತಿಗಳ ಸಂಗತಿ, ಸ್ವಾರಸ್ಯ ಹಾಗೂ ನೆಲೆ ಬೆಲೆಗಳನ್ನು ಆಳವಾಗಿ ಅರಿಯಲು ಅವರು ಕೆಲವು ಭಾಷೆಗಳನ್ನು ಮೂಲದಲ್ಲೆ ಕಲಿತಿದ್ದುಂಟು. ಈ ಉದ್ದೇಶ ಮತ್ತು ಪ್ರಯತ್ನಗಳಿಂದಾಗಿ ಕನ್ನಡ, ಇಂಗ್ಲಿಷ್‌ಗಳಲ್ಲದೆ ಗ್ರೀಕ್, ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಅವರು ತಜ್ಞತೆ ಪಡೆದರು. ತೆಲುಗಿನ ತಕ್ಕಮಟ್ಟಿನ ಪರಿಚಯ ಕೂಡ ಅವರಿಗಿತ್ತು ಎಂದು ವಿ. ಸೀತಾರಾಮಯ್ಯ ಹೇಳುತ್ತಾರೆ. ಗ್ರೀಕ್‌ನ 'ಏಜಾಕ್ಸ್' ಮತ್ತು 'ಪರ್ಸೆ' ನಾಟಕಗಳನ್ನು ಕನ್ನಡಿಸಿರುವುದೇ ಅವರಿಗೆ ಗ್ರೀಕ್ ಸಾಹಿತ್ಯದ ಪರಿಚಯವಿದ್ದುದನ್ನು ತಿಳಿಸುತ್ತದೆ. 'ಪಾರಸಿಕರು' ನಾಟಕದ ಪಾತ್ರಗಾಳದ Atossa (ಅತೋಸ), Darius (ಡೇರಿಯಸ್) ಮತ್ತು xerxes (ಕ್ಸ್‌ರ್‌ಕ್ಸ್‌ಸ್) ಗಳನ್ನು ಇಂಗ್ಲಿಷ್ ಉಚ್ಚಾರಾನುಗುಣವಾಗಿ ತರದೆ ಹುತೌಷ, ದರ್ಯವೃಷ್ಷ ಮತ್ತು ಷಯಾರ್ಷೆ ಎಂದು ತಂದಿರುವುದು ಅವರಿಗೆ ಮೂಲ ಗ್ರೀಕ್ ಭಾಷೆಯ ಪರಿಚಯವಿದ್ದಿರಬಹುದು ಎಂಬುದನ್ನು ಸೂಚಿಸುವುದಾಗಿದೆ. ಇದಕ್ಕಿಂತ ಹೆಚ್ಚಾಗಿ ವಿ. ಸೀತಾರಾಮಯ್ಯನವರು 'ಏಜಾಕ್ಸ್' ನಾಟಕದ ೨-೩ ಭಾಗಗಳನ್ನು ಮೂಲಗ್ರೀಕಿನಲ್ಲಿ ಶ್ರೀಯವರು ತಮ್ಮೊಂದಿಗೆ ಓದಿ ಹೇಳಿದ್ದರೆಂದೂ, 'ಅಶ್ವತ್ಥಾಮನ್' ರಚಿಸುವಾಗ ಕ್ಯಾಂಬೆಲ್ ಸ್ಟಾರ್ ಮತ್ತು ಜೆಬ್ ಆವೃತ್ತಿಗಳ 'ಏಜಾಕ್ಸ್'ನ್ನು ಶ್ರೀಯವರು ಪರಿಶೀಲಿಸಿ ಮೂಲಪಾಠ ನಿರ್ಣಯ ಮಾಡಿಕೊಂಡರೆಂದೂ ಹೇಳುತ್ತಾರೆ. ಇದರೊಂದಿಗೇ ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ 'ರುದ್ರನಾಟಕ'ವನ್ನು ಕುರಿತು ಅವರು ಮಾಡಿದ ಒಂದು ಭಾಷಣದಲ್ಲಿ 'ಪರ್ಸೆ' ಮತ್ತು 'ಖ್ಯಾಫ್ಜೀ'ಗಳಿಂದ ಮೂಲ ಭಾಗಗಳನ್ನುದ್ಧರಿಸಿ ರುದ್ರನಾಟಕ ಲಕ್ಷಣ ಸಮನ್ವಯ ಮಾಡಿದರೆಂಬ ಉಲ್ಲೇಖವಿದೆ. ('ಶ್ರೀ ಸಾಹಿತ್ಯ' ಪು. ೩೨೬). ಈ ಎಲ್ಲ ಸಂಗತಿಗಳು ಅವರಿಗಿದ್ದ ಗ್ರೀಕ್ ತಿಳಿವಳಿಕೆಯನ್ನು ನಿಸ್ಸಂದಿಗ್ಧಗೊಳಿಸುತ್ತದೆ. ಅವರ ಸಂಸ್ಕೃತ ಪರಿಚಯವಾದರೂ ಸಾಮಾನ್ಯವಾದದ್ದೇನಲ್ಲ ತಮ್ಮ ಬೇರೆ ಬೇರೆ ಭಾಷಣಗಳಲ್ಲಿ ಅವರು ಸಂಗತವಾಗಿ ಸಾರ್ಥಕವಾಗಿ ಉದ್ಧರಿಸಿರುವ 'ಅಸಂತೋಷಃ ಶ್ರಿಯೋ ಮೂಲಃ' (ಪು. ೨೭೫), 'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ' (ಪು. ೨೭೫), "ಪುನಃ ಪುನರ್ಜಾಯಮಾನಾ ಪುರಾಣೀ । ಸಮಾನಂ ವರ್ಣಮಭಿಶುಂಬಮಾನಾ' (ಪು. ೨೮೪), 'ನವೋ ನವೋ ಭವತಿ ಜಾಯಮಾನಃ' (ಪು. ೨೮೫), 'ಅತಿ ಸರ್ವತ್ರಂ ವರ್ಜಯೇತ್' (ಪು. ೩೧೦) ಇತ್ಯಾದಿ ಉಲ್ಲೇಖಗಳಲ್ಲದೆ,

ವೇದೋಪನಿಷತ್ತುಗಳ ಸಾರವನ್ನು, ವಾಕ್ಯಗಳನ್ನು ಮೇಲಿಂದ ಮೇಲೆ ಉದ್ಧರಿಸಿರುವುದೂ ಅವರಿಗಿದ್ದ ಸಂಸ್ಕೃತ ಜ್ಞಾನ ತಿಳಿಸುವಂಥದಾಗಿದೆ. ತಮ್ಮ ಕಾಲದ ವಿಚಾರಗೋಷ್ಠಿಗಳಲ್ಲಿ ಶ್ರೀಕಂಠಯ್ಯನವರು ಭಗವದ್ಗೀತೆ, ಉತ್ತರರಾಮಚರಿತ, ಶಾಕುಂತಲ, ನಚಿಕೇತ ಹಾಗೂ ಯಾಜ್ಞವಲ್ಕ್ಯ ಮೈತ್ರೇಯಿ ಪ್ರಸಂಗ, ಮಹಾಭಾರತದ ಕೆಲವು ಪ್ರಕರಣಗಳನ್ನು ಕುರಿತು ಮೂಲ ಪದ್ಯೋದ್ಧರಣದೊಂದಿಗೆ ವಿಚಾರ ವಿನಿಮಯ ಮಾಡುತ್ತಿದ್ದದನ್ನು ವಿ.ಸೀ. ಉಲ್ಲೇಖಿಸಿರುತ್ತಾರೆ (ಶ್ರೀ ಸಾಹಿತ್ಯ, ಪು. ೪೫) ಇದರೊಂದಿಗೆ 'ಶುಕ್ರಗೀತೆ'ಯಲ್ಲಿ ಅವರು ಮೂಡಿಸಿರುವ ವೇದಕಾಲದ ಭಾವಾವರಣ, 'ಸಂಸ್ಕೃತ ನಾಟಕ' ಕೃತಿಗೆ ಅವರು ಬರೆದಿರುವ ಅಭ್ಯಾಸ ಪೂರ್ಣ ಮುನ್ನುಡಿ ಕೂಡ ಅವರ ವ್ಯಾಪಕ ಸಂಸ್ಕೃತ ಸಾಹಿತ್ಯ ತಿಳಿವಳಿಕೆಯನ್ನು ಖಚಿತಗೊಳಿಸುತ್ತದೆ. ಅವರ ತಮಿಳುಜ್ಞಾನದ ವಿಷಯವಾದರೂ ಹೀಗೆಯೇ ಪರಿಪೂರ್ಣ ಹೊಂಗನಸುಗಳಲ್ಲಿ ಶಿಲಪ್ಪದಿಗಾರುನ ೧೭ ಸಾಲುಗಳ ಕನ್ನಡಾನುವಾದವಿದೆ, ಅಲ್ಲಿ ತಮಿಳು ಭಾಷೆ, ಶೈಲಿಗಳನ್ನು ಸಮೀಪತಮವಾಗಿ ಹೋಲುವ ಕುರುಳು ಧಾಟಿಯ 'ಹಾರೈಕೆ' ಪದ್ಯವಿದೆ (ಪು. ೧೫೧). ಒಂದು ಭಾಷಣದಲ್ಲಿ ಅವರು 'ತಿರುಕ್ಕುಱಳ್'ನ ಪದ್ಯಗಳನ್ನು ಪುಂಖಾನುಪುಂಖವಾಗಿ ಉದ್ಧರಿಸಿದರು. ಸ್ಥಳದಲ್ಲೇ ಭಾಷಾಂತರಿಸಿದರು ಎಂದು ಪ್ರತ್ಯಕ್ಷದರ್ಶಿಗಳಾದ ವಿ. ಸೀತಾರಾಮಯ್ಯ, ಎಚ್.ಎಂ. ಶಂಕರನಾರಾಯಣರಾವ್ ಹೇಳುತ್ತಾರೆ (ಶ್ರೀ ಸಾಹಿತ್ಯ, ಪು. ೪೭, ನೂರರ ನೆನಪು, ಪು. ೧೪೨). ಅವರು ಸಂಘಕಾಲದ ತಮಿಳು ಕೃತಿಗಳನ್ನು ಸಮಗ್ರವಾಗಿ ಕನ್ನಡಕ್ಕೆ ತಂದಿದ್ದರು ಎಂಬುದು ಹಲವರ ಅಭಿಪ್ರಾಯ. ಇದರಿಂದ ಅವರ ತಮಿಳು ವಿದ್ವತ್ತು ಕೂಡ ಚರ್ಚಾತೀತವಾಗಿ ನಿಲ್ಲುವ ವಿಷಯವಾಗಿದೆ. ಒಟ್ಟಿನಲ್ಲಿ ಒಬ್ಬ ತೌಲನಿಕ ಸಾಹಿತ್ಯಾಭ್ಯಾಸಿಗಿರಬೇಕಾದ ಬಹುಭಾಷಾಜ್ಞಾನ ಶ್ರೀಕಂಠಯ್ಯನವರಿಗಿತ್ತು ಎಂಬುದು ನಿರ್ವಿವಾದವಾಗಿ ಸ್ಥಾಪಿತವಾಗುತ್ತದೆ. ಈ ಬಗೆಯ ಭಾಷಿಕ ಸಜ್ಜಿನಿಂದಲೇ ಶ್ರೀಕಂಠಯ್ಯ ತೌಲನಿಕ ಸಾಹಿತ್ಯ ವಾಣಿಯನ್ನು ಕೇಳಿಸಲು ಸಾಧ್ಯವಾದದ್ದು, ಮೊಳಗಿಸಲು ಹೊರಟದ್ದು.

ತೌಲನಿಕ ಸಾಹಿತ್ಯಾಭ್ಯಾಸಿಗೆ ಕೇವಲವಾದ ಭಾಷೆಗಳ ಪರಿಚಯವಷ್ಟೆ ಸಾಲುವುದಿಲ್ಲ. ಅನ್ಯಭಾಷೆಯ ಪರಿಚಯದೊಂದಿಗೆ ಅವುಗಳ ಸಾಹಿತ್ಯ, ಸಾಹಿತ್ಯಚರಿತ್ರೆ, ವಿಮರ್ಶೆ, ಅಲಂಕಾರ, ಛಂದಸ್ಸುಗಳ ಪರಿಚಯವೂ ಅಗತ್ಯವಾಗುತ್ತದೆ. ಅನ್ಯದೇಶಗಳ ಧರ್ಮ, ತತ್ವಶಾಸ್ತ್ರಗಳು ಆತನಿಗೆ ಗೊತ್ತಿದ್ದ ಪಕ್ಷದಲ್ಲಿ ಆತನ ದರ್ಶನ ವಿಶಾಲವಾದುದ್ದಾಗುತ್ತದೆ; ಸಾಹಿತ್ಯದ ಅರಿವಿನ ಹೊಸ ಮುಖಗಳನ್ನು ಆವಿಷ್ಕರಿಸಿಕೊಳ್ಳಲು ಆತನಿಗೆ ಸಾಧ್ಯವಾಗುತ್ತದೆ. ಶ್ರೀಕಂಠಯ್ಯನವರಲ್ಲಿ ಈ ಬಗೆಯ ಜ್ಞಾನಧಾರೆಗಳು ಮಿಳಿತಗೊಂಡಿದ್ದವು. ಅವರಿಗೆ ಗ್ರೀಕ್ ಭಾಷೆ, ಕೃತಿಗಳೊಂದಿಗೆ ಗ್ರೀಕ್ ನಾಟಕ ಸಾಹಿತ್ಯ ಚರಿತ್ರೆ, ಗ್ರೀಕ್ ನಾಟಕಗಳ ಸ್ವರೂಪ, ಗ್ರೀಕರ ತತ್ವಶಾಸ್ತ್ರಗಳ ಪರಿಚಯವಿತ್ತು. ಆಂಗ್ಲ ವಿಮರ್ಶೆಯ ಸ್ವರೂಪ, ಆಂಗ್ಲ ಸಾಹಿತ್ಯ ಚರಿತ್ರೆ, ಆಂಗ್ಲ ಸಾಹಿತ್ಯ ಮೀಮಾಂಸೆಗಳನ್ನು ಅವರು ಗಾಢವಾಗಿ ಅಭ್ಯಾಸ ಮಾಡಿದ್ದರು. ಸಂಸ್ಕೃತದ ಸಾಹಿತ್ಯ ಮೀಮಾಂಸೆಯೂ ಅವರಿಗೆ ಗೊತ್ತಿತ್ತು. ಅಲ್ಲದೆ ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್, ಕಾರ್ಲೈಲ್, ಷೇಕ್ಸ್‌ಪಿಯರ್, ವ್ಯಾಸ, ಕಾಳಿದಾಸ, ಭವಭೂತಿ ಮುಂತಾದ ಜಗತ್ಪ್ರಸಿದ್ಧ ಸಾಹಿತಿಗಳ ಕೃತಿಗಳನ್ನು ವಾಚೋವಿಧೆಯವಾಗುವ ಮಟ್ಟಿಗೆ ಆಪ್ತವಾಗಿ ಅಧ್ಯಯನ ಮಾಡಿದ್ದರು. ಬೈಬಲ್, ಕುರಾನ್, ಕಠೋಪನಿಷತ್ತು, ಭಗವದ್ಗೀತೆ, ರಿಪಬ್ಲಿಕ್,

ಧರ್ಮಪದ, ದಸ್‌ಸ್ಪೇಕ್, ಝರತುಷ್ಟ್ರ ಮುಂತಾದ ಭಿನ್ನ ಭಾಷೆಗಳ ಧಾರ್ಮಿಕ–ದಾರ್ಶನಿಕ ಕೃತಿಗಳನ್ನು ಕುರಿತು ಗಂಟೆಗಟ್ಟಲೆ ಮಾತನಾಡಬಲ್ಲ ಶಕ್ತಿಯನ್ನು ಅವರು ಗಳಿಸಿಕೊಂಡಿದ್ದರು. ಈ ನಾನಾ ಭಾಷೆ–ದರ್ಶನಗಳ ಹಿನ್ನೆಲೆಯಲ್ಲಿ ಅವರ ಸಾಹಿತ್ಯದೃಷ್ಟಿ ಸಹಜವಾಗಿಯೇ ಭಾಷೆಯ ಬೇಲಿ, ಜನಾಂಗಿಕ ಗಡಿ, ದೇಶದ ಎಲ್ಲೆಗಳನ್ನು ಮೀರಿ ವಿಹರಿಸುತ್ತಿತ್ತು. ಇದರೊಂದಿಗೇ ಅವರು ತೋಲನಕಾರನಿಗೆ ಅತ್ಯವಶ್ಯವಾಗಿ ಇರಬೇಕಾದ ಮಾನವನ ಸಾಹಿತ್ಯ ಸೃಷ್ಟಿಯೆಲ್ಲ ಒಂದೇ ಎಂಬ ಉದಾತ್ತ ಧೋರಣೆಯನ್ನು ಬೆಳೆಸಿಕೊಂಡಿದ್ದರು. 'ವಿಶ್ವಭಾರತಿ ಶರಣು ಕಿರುತೀರ್ಥವಲ್ತು' ಎಂಬ ಅವರ ಪ್ರಗಾಥವಾಕ್ಯ ಮೂಡಿಬಂದದ್ದಾದರೂ ಇದರ ಫಲವಾಗಿಯೇ. ಹೀಗೆ ಶ್ರೀಕಂಠಯ್ಯ ಒಬ್ಬ ತೌಲನಿಕ ಸಾಹಿತ್ಯಾಭ್ಯಾಸಿಗೆ ಅಗತ್ಯವಾದ ಅರ್ಹತೆ, ಸಿದ್ಧತೆಗಳನ್ನು ಸಾಹಿತ್ಯ ಸೃಷ್ಟಿಗೆ ಬೇಕಾದ ಪರಿಕರ ವಿದ್ವತ್ತನ್ನು ಅವರು ಮೊದಲೇ ಮೈಗೂಡಿಸಿಕೊಂಡಿದ್ದು, ಆ ಕ್ಷೇತ್ರದಲ್ಲಿ ಅವರು ಪ್ರಾತಃಸ್ಮರಣೀಯರಾಗಿ ಉಳಿಯಲು ಅವಕಾಶವಾಯಿತು.

* * * *

ಶ್ರೀಕಂಠಯ್ಯನವರ ಭಾಷಣಗಳನ್ನು ಓದಿದರೆ ಅವುಗಳಲ್ಲಿ ಮೇಲಿಂದ ಮೇಲೆ ಅವರು ಕನ್ನಡದ ಸ್ಥಾನಮಾನ ಕುರಿತು ಪ್ರಸ್ತಾಪಿಸಿರುವುದು ಗೋಚರವಾಗುತ್ತದೆ. ಇದರೊಂದಿಗೆ ಒಡನೆಯೇ ಅರಿವಿಗೆ ಬರುವುದು ಅವರ ತೌಲನಿಕ ಸಾಹಿತ್ಯ ಕಾಳಜಿ. ತಮ್ಮ ಹಲವಾರು ಭಾಷಣಗಳಲ್ಲಿ ಅವರು ತೌಲನಿಕ ಸಾಹಿತ್ಯ ದೃಷ್ಟಿಯ ಪ್ರಚಾರ ಕೈಗೊಂಡಿದ್ದಾರೆ. ಶ್ರೀಕಂಠಯ್ಯ ಒಬ್ಬ ಕನ್ನಡದ ಪಾದ್ರಿ, ಹಾಗೆಯೇ ತೌಲನಿಕ ಸಾಹಿತ್ಯದ ಪೂಜಾರಿ. ಕನ್ನಡ ಸಾಹಿತ್ಯದ ತೇರೆಳೆಯಲು, ಸಿಂಗರಿಸಲು ಅವರು ಕಟ್ಟಹೇಳಿದ್ದು ತೌಲನಿಕ ಸಾಹಿತ್ಯದ ಮಿಣಿ, ಮಣಿಗಳನ್ನು, ಕನ್ನಡ ಮಾತು ತಲೆಯೆತ್ತುವ ಬಗೆಯನ್ನು ವಿಶದಪಡಿಸುವಾಗಾಗಲಿ, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ಕುರಿತು ತಿಳಿವಳಿಕೆ ಕೊಡುವಾಗಾಗಲಿ, ಕನ್ನಡದ ಪುನರುಜ್ಜೀವನ ವಿಧಾನವನ್ನು ಚರ್ಚಿಸುವಾಗಾಗಲಿ, ತಮ್ಮ ಜೀವದುಸಿರು ಮತ್ತು ಜೀವಮಂತ್ರಗಳನ್ನು ವಿವರಿಸುವಾಗಾಗಲಿ ಈ ಸಂಬಂಧದ ಮಾತುಗಳನ್ನು ಅವರು ಪದೇ ಪದೇ ಒತ್ತಿ ಹೇಳಿದ್ದಾರೆ. ಕನ್ನಡ ಸಾಹಿತ್ಯಾಭ್ಯಾಸಿಗಳು, ಕನ್ನಡ ಸಾಹಿತ್ಯಕರ್ತರು ತಮ್ಮನ್ನು ಕನ್ನಡ ಸಾಹಿತ್ಯಕ್ಕಷ್ಟೆ ಸೀಮಿತಗೊಳಿಸಿಕೊಳ್ಳಕೂಡದು ಎಂದು ಕಳಕಳಿಯಿಂದ ವಿನಂತಿಸಿಕೊಂಡಿದ್ದಾರೆ. ಕನ್ನಡಿಗರ ಸಾಹಿತ್ಯಾಭ್ಯಾಸ ಊರಕಿವಿಗೆಲ್ಲಾ ಹತ್ತಿಯಿಟ್ಟ ಸರಸ್ವತಿದೇವಿ ಒಬ್ಬನಿಗೆ ವೀಣೆ ಹೇಳಿದಂತಾಗಬಾರದು ಎಂದು ಎಚ್ಚರಿಸುತ್ತಾರೆ. ವಿಶ್ವ ಸಾಹಿತ್ಯದ ಪರಿಚಯದ ಮೂಲಕ ಕನ್ನಡ ಸಾಹಿತ್ಯವನ್ನು ವೈವಿಧ್ಯಮಯವಾಗಿ, ಸರ್ವತೋಮುಖವಾಗಿ ಸಮೃದ್ಧಗೊಳಿಸಬೇಕು ಎಂಬುದನ್ನು ಅವರ ಮುಂದಣ ಈ ಕೆಲವು ವಾಕ್ಯವೃಂದಗಳು ಇದನ್ನು ಸ್ಪಷ್ಟೀಕರಿಸುತ್ತದೆ. "ಒಂದೇ ಸಾಹಿತ್ಯದಲ್ಲಿ ಸಂಕುಚಿತ ದೃಷ್ಟಿಗಳಾಗಿವೆ. ಹಲವು ಸಾಹಿತ್ಯಗಳ ಉದ್ದಾಮ ಕವಿಗಳನ್ನೆಲ್ಲಾ ನೋಡಿ, ಅನುಭವಿಸಿ, ಸಂಸ್ಕಾರವನ್ನು ಪಡೆಯಬೇಕು" "ನಮ್ಮದು ಆದದ್ದರಿಂದ ಹೆಮ್ಮೆಯದು ಎಂಬ ದುರಭಿಮಾನವನ್ನು ಬಿಡೋಣ. ತಾರತಮ್ಯವನ್ನು ಬಲ್ಲ ವಿಮರ್ಶೆಯನ್ನು ಅಭ್ಯಾಸ ಮಾಡೋಣ", "ಮದದಿಂದ ಕಣ್ಣು ಮುಚ್ಚಿ ಹೋಗದೆ, ಎಲ್ಲೆಲ್ಲಿ ದಿವ್ಯಜ್ಯೋತಿ ಪ್ರಕಾಶಿಸುವುದೋ ಅಲ್ಲೆಲ್ಲಾ ಶಿಷ್ಯರಾಗಿದ್ದು ಕೊನೆಗೆ ನಮಗೂ ಗುರುತ್ವ ಲಭಿಸುವುದು" (ಶ್ರೀ ಸಾಹಿತ್ಯ, ಪು. ೨೬೯),

"ಆಕಾಶ ಹಬ್ಬಿರುವ ಎಲ್ಲಾ ಪ್ರದೇಶಗಳಿಂದಲೂ ಗಾಳಿಯನ್ನೂ ಬೆಳಕನ್ನೂ ಆಹಾರವನ್ನೂ ತೇಜಸ್ಸನ್ನು ಹೀರಿಕೊಳ್ಳುವ ಉದಾರ ಹೃದಯವೊಂದನ್ನು ನಾವು ಭದ್ರವಾಗಿ ಕಾಪಾಡಿಕೊಂಡರೆ....ನಮ್ಮ ಜನವ್ರೂ, ಜನದೊಡನೆ ಸಾಹಿತ್ಯವ್ರೂ, ಸಾಹಿತ್ಯದೊಡನೆ ಜನವ್ರೂ ಅಮೂಲ್ಯವಾಗುವ್ರದು" (ಪ್ರ. ೨೭೭) "ವಿಶ್ವವಾಣಿಯ ದಿವ್ಯವಾಣಿಯ ಸಂಜೀವನಮಣಿಯ ಸ್ಪರ್ಶದಿಂದ ಶಾಪಗ್ರಸ್ತಳಾದ ಕರ್ಣಾಟಕ ಸರಸ್ವತಿದೇವಿಯ ಶಿಲಾಮೂರ್ತಿಯನ್ನು ಜೀವವುಳ್ಳ ಚೆಲುವೆಯನ್ನಾಗಿ ಮಾಡೋಣ" (ಪ್ರ. ೨೭೯). "ಎತ್ತಕಡೆಗೂ ಕಣ್ಣು ಮುಚ್ಚಬಾರದು. ಎತ್ತ ಕಡೆಗೂ ಹೃದಯದ ಬಾಗಿಲನ್ನು ಕಿರಿಕಿರಿದು ಮಾಡುತ್ತ ಮುಚ್ಚಿಬಿಡಬಾರದು" "ಇಂಗ್ಲಿಷನ್ನೂ ಜೀರ್ಣಿಸಿಕೊಂಡು ಉಳಿದಂತೆ ಉಳಿದು, ಕನ್ನಡವನ್ನು ಉಳಿಸಿ, ಬೆಳಸಿ ! ಸಂಸ್ಕೃತದಲ್ಲಿಯೂ ಇಂಗ್ಲಿಷಿನಲ್ಲಿಯೂ ಸಿಕ್ಕದ್ದು ಹಿಂದಿಯಲ್ಲೇನಾದರೂ ಸಿಕ್ಕಿದರೆ ಅವನ್ನೂ ಕೊಳ್ಳಿ" (ಪ್ರ. ೨೯೫) "ಕಿಟಕಿಗಳಿಲ್ಲದೆ ಉಸಿರು ಕಟ್ಟಿ ಕೆಟ್ಟದ್ದಾಯಿತು; ಕಿಟಕಿಗಳನ್ನು ವಿಶ್ವದ ಎಲ್ಲಾ ದಿಕ್ಕುಗಳಲ್ಲಿಯೂ ತೆರೆದು ಹೊಸ ಗಾಳಿ, ಹೊಸ ಬೆಳಕು ತುಂಬಿ ಹೊಸ ಉಸಿರು ಹೊಮ್ಮಲಿ. ಪೂರ್ವ ಪಶ್ಚಿಮ ಎರಡು ಬೇರುಗಳೂ ಹೆಣೆದುಕೊಂಡು ಒಂದು ತಾಯಿಬೇರಾಗಿ ಭಾರತ ಮಹಾವೃಕ್ಷ ಆಕಾಶಕ್ಕೆ ಚಿಮ್ಮಲಿ" (ಪ್ರ. ೩೧೫) ಇಲ್ಲೆಲ್ಲ ಅವರು ವಿಶ್ವಭಾರತೀಯ ಕಲ್ಪನೆಯನ್ನು ಚಿಮ್ಮಿಸಿದ್ದಾರೆ. ಕನ್ನಡ ಶಾರದೆ ತೌಲನಿಕ ಸಾಹಿತ್ಯ ಸರಸ್ವತಿಯ ವೀಣೆಯಿಂದ ಅಲಂಕೃತಳಾಗಬೇಕು ಎಂಬ ಹೆಬ್ಬಯಕೆಯನ್ನು ತೋಡಿಕೊಂಡಿದ್ದಾರೆ.

ಶ್ರೀಕಂಠಯ್ಯನವರು ತೌಲನಿಕ ಸಾಹಿತ್ಯ ದೃಷ್ಟಿಯನ್ನು ಒತ್ತಿ ಹೇಳಿದ್ದಲ್ಲದೆ ಅದರ ಪ್ರಸಾರ ಕಾರ್ಯವನ್ನೂ ಕೈಕೊಂಡವರು. ಅವರು ಅನ್ಯಭಾಷಾ ಸಾಹಿತ್ಯಗಳ ಕೃತಿಗಳನ್ನು ಕುರಿತು ಮೋಹಕವಾದ ಧಾಟಿಯಲ್ಲಿ ಶ್ರೋತೃ ಪ್ರಚೋದಕ ಭಾಷಣಗಳನ್ನು ಮಾಡುತ್ತಿದ್ದರು ಎಂದು ವಿ.ಸೀ, ಎ.ಎನ್. ಮೂರ್ತಿರಾವ್ ಮುಂತಾದವರು ಹೇಳುತ್ತಾರೆ. ತರಗತಿಯ ಗೋಷ್ಠಿಗಳಲ್ಲಿ ಪಠ್ಯೇತರ ಕೃತಿಗಳನ್ನಾಗಿ ಭವಭೂತಿಯ ಉತ್ತರರಾಮಚರಿತ್ರ, ಕಾಳಿದಾಸನ ಶಾಕುಂತಲ, ಟಾಲ್‌ಸ್ಟಾಯ್‌ನ ಕಾದಂಬರಿಗಳೂ ರಸ್ಕಿನ್‌ನ unto this last, ಗಯಟೆಯ faust, ಡಾಂಟೆಯ Divine comedy, George Eliot ೪ Romola ಗಳನ್ನು ಆರಿಸಿಕೊಂಡು ವ್ಯಾಪಕವಾಗಿ ಚರ್ಚಿಸಿ ವಿದ್ಯಾರ್ಥಿಗಳ ಮನೋರಂಗ ವಿಸ್ತರಿಸುತ್ತಿದ್ದರು ಎಂದು ಸೀತಾರಾಮಯ್ಯ ತಿಳಿಸುತ್ತಾರೆ (ಪ್ರ. ೩೫). ಕುಱಳನ್ನು, ಎಕ್ಸಿಯಾಸ್ಟೈಸ್, ಸೆಂಟ್ ಮಾರ್ಕ್, ಷೇಕ್ಸ್‌ಪಿಯರ್, ಮಿಲ್ಟನ್‌ರನ್ನು ಕುರಿತು ಅವರು ಸಾರ್ವಜನಿಕ ಭಾಷಣಗಳನ್ನು ಮಾಡಿದುದಾಗಿ ದಾಖಲಾಗಿದೆ. ಅವರ ಭಾಷಣ ಕೇಳಲೆಂದೇ ಒಂದು ಷೇಕ್ಸ್‌ಪಿಯರ್ ಸಂಘ ಒಂದೇ ದಿನದಲ್ಲಿ ಹುಟ್ಟಿ, ಅಂದೇ ಸತ್ತಿತಂತೆ ! ಈ ಪ್ರಯತ್ನಗಳೆಲ್ಲ ಅವರ ತೌಲನಿಕ ಸಾಹಿತ್ಯ ಪ್ರಸಾರದ ಕುರುಹುಗಳಾಗಿವೆ. ಕನ್ನಡ ಸಾಹಿತ್ಯದ ಅಭಿವೃದ್ಧಿಯ ದೃಷ್ಟಿಯಿಂದ ಅವರು ತಾವೇ ಸ್ಥಾಪಿಸಿದ 'ಕನ್ನಡ ಗ್ರಂಥ ಮಾಲೆ'ಯಲ್ಲಿ ಜನಸಾಮಾನ್ಯಕ್ಕೆ ಜ್ಞಾನ ಹರಡಬಲ್ಲ ಸಾಹಿತ್ಯವಾಗಿ ಭಾಷಾಂತರ ಮತ್ತು ಸಂಕಲನ ಗ್ರಂಥಗಳನ್ನು ಸೇರಿಸಿದ್ದರು. ಈ ಮಾಲೆಯಲ್ಲಿ ಎ.ಆರ್.ಕೃ ಅವರ 'ಸಂಸ್ಕೃತ ನಾಟಕ', ವೆಂಕಟೇಶ ಅಯ್ಯಂಗಾರ್ಯರ 'ರವೀಂದ್ರನಾಥ ಠಾಕೂರ್' ಕೃತಿಗಳನ್ನು ಅವರು

ಹೊರತಂದರು. 'ಗ್ರೀಕ್ ನಾಟಕ' ಕುರಿತು ಒಂದು ದೀರ್ಘ ಪುಸ್ತಕ ತಯಾರಾಗುತ್ತಿದ್ದು, ಅಚ್ಚಾಗುವುದರಲ್ಲಿದೆ ಎಂದು ಒಂದೆಡೆ ಅವರು ಸೂಚಿಸಿರುವುದೂ ಉಂಟು. ಇವೆಲ್ಲ ಅವರ ತೌಲನಿಕ ಸಾಹಿತ್ಯ ಪ್ರಸಾರದ ಗಟ್ಟಿ ಸಾಕ್ಷ್ಯಗಳೆನ್ನಬಹುದು.

ಶ್ರೀಕಂಠಯ್ಯನವರು ಕನ್ನಡ ವಿದ್ಯಾರ್ಥಿಗಳಿಗೆ ನಮ್ಮ ಸಾಹಿತ್ಯದ ಒಂದು ತೌಲನಿಕ ಹಿನ್ನೆಲೆ ಇರಲಿ ಎಂದು ಸಂಸ್ಕೃತ ಹಾಗೂ ತಮಿಳು ಅಥವಾ ತೆಲುಗುಗಳಲ್ಲಿ ಒಂದನ್ನು ಒಟ್ಟು ಎರಡು ಅನ್ಯಭಾಷೆ, ಸಾಹಿತ್ಯಗಳನ್ನು ಅಧ್ಯಯನ ವಿಷಯಗಳಾಗಿ ಅಭ್ಯಸಿಸಬೇಕೆಂದು ಪಠ್ಯಕ್ರಮದಲ್ಲಿ ಒತ್ತಾಯಪೂರ್ವಕವಾಗಿ ಸೇರಿಸಿದರು ಎಂದು ಎ.ಆರ್. ಕೃಷ್ಣಶಾಸ್ತ್ರಿಗಳು ಅಭಿಪ್ರಾಯಿಸುತ್ತಾರೆ. ಕನ್ನಡ ಸಾಹಿತ್ಯದ ಮೂಲ ಆಕರಗಳು, ಸಂಬಂಧಗಳನ್ನು ತಿಳಿಯಲು ವಿದ್ಯಾರ್ಥಿಗಳಿಗೆ ಇದರಿಂದ ಹೆಚ್ಚಿನ ಉಪಯೋಗವಾಗುತ್ತಿತ್ತು ಎಂಬುದು ವಿದಿತವೇ ಇದೆ. ಸಾಹಿತ್ಯದ ವಿದ್ಯಾರ್ಥಿಗಳಲ್ಲಿ ತೌಲನಿಕ ದೃಷ್ಟಿ ಮೂಡಲೂ ಇದೇ ಕಾರಣವಾಯಿತು. ಇದಲ್ಲದೆ ಕೆಲವು ಆಪ್ತ ವಿದ್ಯಾರ್ಥಿಗಳಿಗೆ ಇಂಥಿಂಥ ಭಾಷೆಗಳನ್ನು ಕಲಿತು ಈ ದಿಕ್ಕಿನಲ್ಲಿಯೇ ಕೆಲಸ ಮಾಡಿ ಕನ್ನಡದ ಪಿಗ್ಗಗಳನ್ನು ತುಂಬಬೇಕು ಎಂದು ಅವರು ವಿಶೇಷವಾಗಿ ಸೂಚಿಸಿದ್ದುದು ಉಂಟಂತೆ. ಕ.ವೆಂ. ರಾಘವಾಚಾರ್ ಗ್ರೀಕ್‌ನಲ್ಲಿ, ಎಲ್. ಗುಂಡಪ್ಪ ತಮಿಳಿನಲ್ಲಿ ತಜ್ಞತೆ ಪಡೆಯಲು ಶ್ರೀಯವರೇ ಕಾರಣರೆಂದು ಕೆಲವರ ಅಭಿಪ್ರಾಯ. ಈ ಎರಡೂ ಭಾಷೆಗಳಿಗೆ ಸಂಬಂಧಿಸಿದಂತೆ ಆ ಇಬ್ಬರೂ ಹಿರಿಯರೂ ಇಂದು ಕೊಟ್ಟಿರುವ ಕೊಡುಗೆಗಳು ಅನುಪಮವಾದುವು. ಒಟ್ಟಿನಲ್ಲಿ ಒಂದು ತೋಲನಕಾರರ ಪಡೆಯನ್ನು ಕಟ್ಟುವ ಪ್ರಯತ್ನವನ್ನು ಕೂಡ ಶ್ರೀಯವರು ಮಾಡಿದ್ದರೆಂಬುದು ಉಲ್ಲೇಖನೀಯ ಸಂಗತಿ.

ವಿದ್ಯಾರ್ಥಿಗಳ ಸಾಹಿತ್ಯ ಕೃಷಿಯಲ್ಲೂ ಅವರು ತೌಲನಿಕ ಸಾಹಿತ್ಯದ ಸಸಿ, ಕಸಿಗಳೆಡೆ ಗಮನ ಹರಿಸಿದ್ದರು. ತಾವೇ ಸ್ಥಾಪಿಸಿದ ರಜತೋತ್ಸವ ಸ್ವರ್ಣಪದಕ ಪದ್ಯ ಸ್ಪರ್ಧೆಗೆ ಅವರು ಸೂಚಿಸಿದ್ದ ನಿಯಮಗಳಲ್ಲಿ ಎರಡು ಈ ರೀತಿಯಿವೆ : (೧) ಪದ್ಯವು ಇಂಗ್ಲಿಷ್ ಕಾವ್ಯದ ಭಾಷಾಂತರವಾಗಿರಬಹುದು, (೨) ಅಥವಾ ಗ್ರೀಕ್ ಕಾವ್ಯ ಪುರಾಣಗಳ ಆಧಾರವೋ ಭಾಷಾಂತರವೋ ಆಗಿರಬಹುದು. ಈ ಎರಡೂ ನಿಯಮಗಳೂ ಮತ್ತೆ ಅವರ ತೌಲನಿಕ ಸಾಹಿತ್ಯದೃಷ್ಟಿಗೆ ಸಂಬಂಧಿಸಿದವಾಗಿವೆ. ಕೆ.ವಿ. ಪುಟ್ಟಪ್ಪ ಎಲ್. ಗುಂಡಪ್ಪ ಎಸ್.ವಿ. ಪರಮೇಶ್ವರಭಟ್ಟ ಈಪದಕಗಳನ್ನು ಪಡೆದುದು ಈ ಹಿನ್ನೆಲೆಯಲ್ಲಿಯೇ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ನಾನಾ ಚಟುವಟಿಕೆಗಳಿಂದ ಶ್ರೀಕಂಠಯ್ಯನವರು ಕನ್ನಡಿಗರಲ್ಲಿ ತೌಲನಿಕ ಸಾಹಿತ್ಯ ಜಾಗೃತಿ ಮೂಡಿಸುವಲ್ಲಿ ತಕ್ಕಮಟ್ಟಿಗೆ ಸಫಲರಾದರೆನ್ನಬಹುದು.

* * * *

ಇಂಗ್ಲಿಷ್ ಅಲ್ಲದೆ ಇತರ ಅನ್ಯಭಾಷಾ ಸಾಹಿತ್ಯಗಳ ಪರಿಚಯವಿದ್ದ ಶ್ರೀಕಂಠಯ್ಯ ತಮ್ಮ ಸಾಹಿತ್ಯ ವಿಶ್ಲೇಷಕ ಬರಹಗಳಲ್ಲಿ ಅವನ್ನು ಯಾವುದೇ ರೀತಿಯಲ್ಲಾದರೂ ಬಳಸಿಕೊಂಡಿದ್ದಾರೆಯೋ ಎಂಬುದು ಕುತೂಹಲಕರ ಪ್ರಶ್ನೆ. ಇದಕ್ಕೆ ಸಂಬಂಧಿಸಿದಂಥ ಪರಿಶೀಲನೆಗೆ ನಾವು ಅವರ ವಿಮರ್ಶೆ ಬರಹಗಳನ್ನೆ ಅವಲಂಬಿಸಬೇಕು. ಈ ದೃಷ್ಟಿಯಿಂದ ನಮಗೆ ಮುಖ್ಯವಾದದ್ದು ಅವರ 'ಕನ್ನಡಿಗರಿಗೆ

ಒಳ್ಳೆಯ ಸಾಹಿತ್ಯ'ದ ಕವಿಕೃತಿ ಕುರಿತ ಲೇಖನಗಳು ಹಾಗೂ ಅವರ 'ಕನ್ನಡ ಸಾಹಿತ್ಯದ ಚರಿತ್ರೆ'. ಅವರ ಕನ್ನಡ ಸಾಹಿತ್ಯದ ಚರಿತ್ರೆ ಈ ದೃಷ್ಟಿಯಿಂದ ತುಂಬ ನಿರಾಶೆಯುಂಟು ಮಾಡುವ ಕೃತಿ. ಪಂಪ, ರನ್ನ, ನಾಗವರ್ಮ, ನಾಗಚಂದ್ರರಂಥ ಮುಖ್ಯ ಕನ್ನಡ ಕವಿಗಳನ್ನು ಕುರಿತು ಅವರು ಇಲ್ಲಿ ಪ್ರಸ್ತಾಪಿಸಿದ್ದಾರೆ. ಆದರೆ ಈ ಯಾರೊಬ್ಬರನ್ನೂ ಆಯಾ ಕವಿಗಳಿಗೆ ಸಂಬಂಧಿಸಿದ ಮೂಲಕೃತಿಕಾರರೊಂದಿಗಾಗಲಿ, ಇತರ ಅನ್ಯಭಾಷಾ ಕವಿಗಳೊಂದಿಗಾಗಲಿ, ಸಮಾನ ಸ್ಕಂದ ಜಾಗತಿಕ ಲೇಖಕರೊಂದಿಗಾಗಲಿ ಇಟ್ಟು ಹೋಲಿಸಿಲ್ಲ, ಮೌಲ್ಯಮಾಪನ ಮಾಡಿಲ್ಲ. ಪಂಪ, ಪೊನ್ನರ ಬಗ್ಗೆ ಇಂಥ ತೌಲನಿಕ ಪ್ರಸ್ತಾಪದ ಸುಳಿವೇ ಇಲ್ಲ. ನಾಗವರ್ಮನ ಕಾದಂಬರಿಯ ಬಗ್ಗೆ ಅದು "ಅಕ್ಷರಶಃ ಭಾಷಾಂತರವಲ್ಲ" ಎಂಬ ಮಾತಿನ ಅನಂತರ ಸಂಸ್ಕೃತ ಸಾಹಿತ್ಯ, ಉಪನಿಷತ್ತು, ವ್ಯಾಸ ವಾಲ್ಮೀಕಿಗಳು, ಭಾಸ ಕಾಳಿದಾಸರ ರಸಪ್ರಧಾನತೆಯನ್ನೂ ಸರಳತೆಯನ್ನೂ ಹಿಂದಿಟ್ಟ ಚಮತ್ಕಾರ ಪ್ರೌಢಿಮೆ ಶಬ್ದಾರ್ಥಾಲಂಕಾರಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟ ಹೊಸ ರುಚಿಯ ಪ್ರತಿಬಿಂಬವಿದರಲ್ಲಿ ತಕ್ಕಷ್ಟು ಇದ್ದರೂ, ಕನ್ನಡಿಸುವಾಗ ಬಿಡುವುದು ಬಿಟ್ಟು, ಇಟ್ಟದ್ದು ಎದ್ದು ನಿಂತು, ಎರಡು ಪ್ರೇಮಕಥೆಗಳ ಪಾತ್ರರಸಪೋಷಣೆಗಳು ಮುಂದಾಗಿ, ಕನ್ನಡದ ಸೌಲಭ್ಯದಲ್ಲಿ ಕಾದಂಬರಿ ನಾಗವರ್ಮನ ನುಡಿ ಬೆಡಗಿನಲ್ಲಿ ನಿರ್ದೋಷವೂ ಸೇವ್ಯವೂ ಆಗಿದೆ" ಎಂಬ ಪ್ರಾಸ್ತಾವಿಕ ಮಾತು ಮಾತ್ರ ಬಂದಿದೆ. ಹಾಗೆ ನೋಡಿದರೆ 'ಗದಾಯುದ್ಧ'ದ ಪ್ರಸ್ತಾಪದ ಸಂದರ್ಭವೇ ವಾಸಿ. ರನ್ನ ಬಳಸಿರುವ 'ಸಾಹಸಭೀಮ' ಎಂಬುದು ಪಂಪನ ಮಾತೆಂದೂ, ಆತನ ಪದ್ಯ ಶ್ರುತಿ ಮತ್ತು ಚರಣಗಳ ಆಲಾಪನೆ ಪಂಪನಲ್ಲಿದೆಯೆಂದೂ ಅವರು ಸೂಚಿಸಿದ್ದಾರೆ. ರನ್ನನ ಕಥಾವಸ್ತುವಿನೊಂದಿಗೆ ಚಾರಿತ್ರಾಂಶ ಸಮ್ಮಿಳನಗೊಳಿಸುವ ಕ್ರಮ ಪಂಪನಲ್ಲಿರುವುದನ್ನೂ ನಿರ್ದೇಶಿಸಿದ್ದಾರೆ. ರನ್ನನು ದುರ್ಯೋಧನನಲ್ಲಿ ಕಾಣುವ 'ರುದ್ರನಾಟಕ' ನಾಯಕನ ಮಹಾನುಭಾವತೆ, ಆತನೊಂದಿಗೆ ಮಿಲ್ಟನ್ನನ ಸೇಟನ್ ಷೇಕ್ಸ್‌ಪಿಯರನ ಬ್ರೂಟಸ್ ಪಾತ್ರಗಳಲ್ಲಿಯ ವಿಧಿಯಣಕ ಸಾಮ್ಯಗಳನ್ನು ಕುರಿತು ಕೆಲವು ವಾಕ್ಯಗಳನ್ನಾಡಿದ್ದಾರೆ. ಆದರೆ ಈ ಎಲ್ಲವೂ ಸೇರಿಯೇ ೧೦–೧೨ ವಾಕ್ಯಗಳಾದರೆ ಹೆಚ್ಚು.

ಹತ್ತನೆಯ ಶತಮಾನದ ಸಾಹಿತ್ಯ ಕುರಿತು ಹೇಳುವಾಗ ಆ ಯುಗದ ಕವಿಗಳು ಸಂಸ್ಕೃತ ಕಾವ್ಯ ಸಂಸ್ಕಾರ ಸೂಚನೆಯನ್ನು ಶ್ರೀಯವರು ಮಾಡಿರುವರಾದರೂ ಅದರಿಂದ ಹೆಚ್ಚಿನದೇನನ್ನೂ ಸಾಧಿಸಿದಂತಾಗಿಲ್ಲ. ನಾಗಚಂದ್ರನ ಪಂಪರಾಮಾಯಣವನ್ನು ಕುರಿತ ಸಂದರ್ಭದಲ್ಲಿ ಮಾತ್ರ ವೈದಿಕ ಮತ್ತು ಜೈನ ಪರಂಪರೆಯ ರಾಮಕಥೆಗಳ ಸಾದೃಶ್ಯ ವೈದೃಶ್ಯಗಳನ್ನು ಸ್ವಲ್ಪ ದೀರ್ಘವಾಗಿಯೇ ಅವರು ಮಾಡಿರುವುದು ಉಲ್ಲೇಖಿಸತಕ್ಕದ್ದಾಗಿದೆ. ತಮಗಿದ್ದ ತೌಲನಿಕ ಸಾಹಿತ್ಯ ಹಿನ್ನೆಲೆಯಲ್ಲಿ ವಿಸ್ತಾರವಾದ ಕವಿಕೃತಿ ಪರಿಶೀಲನೆಯನ್ನೇನೂ ಇಲ್ಲೆಲ್ಲೂ ಶ್ರೀಕಂಠಯ್ಯನವರು ಮಾಡಿಲ್ಲ.

ಇನ್ನು ಅವರ ಬಿಡಿ ವಿಮರ್ಶೆ ಬರಹಗಳು : ರನ್ನ, ನಾಗಚಂದ್ರ ಮತ್ತು ಕುಮಾರವ್ಯಾಸರ ಪ್ರಶಸ್ತಿ ಗ್ರಂಥಗಳಿಗೆ ಅವರು ಬರೆದ ಪ್ರಸ್ತಾವನೆಗಳಲ್ಲಿ ತೌಲನಿಕ ವಿವೇಚನೆ ಇಲ್ಲವೇ ಇಲ್ಲವೆನ್ನುವ ಮಟ್ಟಿಗೆ ಒಂದೊಂದೇ ವಾಕ್ಯದಲ್ಲಿ ಆಯಾ ಕವಿಕೃತಿಗಳ ಮೂಲದ ಸೂಚನೆಗಳಿದ್ದು, ತಲಸ್ಪರ್ಶಿ ಪರಿಶೀಲನೆಯಾಗಬೇಕು ಎಂಬ ಸೂಚನೆಯ ಮಾತಿದೆ, ಅಷ್ಟೆ. ರುದ್ರನಾಟಕ ಬರೆಹದಲ್ಲಿ ಅದರ ಕಿರು ಸ್ವರೂಪ ವಿವರಣೆಯೊಂದಿಗೆ ಸಂಸ್ಕೃತದಲ್ಲಿ ಅಂಥ ನಾಟಕಗಳು ಏಕೆ ಕಾಣಿಸಿಕೊಳ್ಳಲಿಲ್ಲ.

ದುರ್ಯೋಧನ ಕರ್ಣರು ದುರಂತ ನಾಯಕರಲ್ಲದೆ, ಸೀತೆಯ ಅಗ್ನಿಪ್ರವೇಶ ಸನ್ನಿವೇಶ ಮಂಗಳವೇ, ಅಮಂಗಳವೇ ಎಂಬ ಪ್ರಶ್ನೆಗಳಿವೆ. ಇಲ್ಲಿ ವಿಸ್ತಾರವಾದ ಚರ್ಚೆ, ವಿಶ್ಲೇಷಣೆಗಳಿಲ್ಲದಿದ್ದರೂ ಕೆಲವು ಗಹನವಾದ ಪ್ರಶ್ನೆಗಳಿವೆ. ಇದರ ವಿಶ್ಲೇಷಣೆ ಸ್ವಲ್ಪ ದೀರ್ಘವಾಗಿಯೇ ಎ.ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತ ನಾಟಕ'ಕ್ಕೆ ಬರೆದ ಪ್ರಸ್ತಾವನೆಯಲ್ಲಿ ಮುಂದುವರಿದಿದೆ. ಗ್ರೀಕ್ ಮತ್ತು ಸಂಸ್ಕೃತ ನಾಟಕಗಳ ನಡುವಣ ಸಂಸರ್ಗ, ಅವುಗಳ ವಸ್ತು ಆಯ್ಕೆಯಲ್ಲಿನ ಸಾಮ್ಯ, ಉಗಮ ವ್ಯತ್ಯಾಸ, ಎರಡರ ನಡುವಣ ಪೂರಕತೆಗಳನ್ನು ಕುರಿತಂತೆ ಶ್ರೀಯವರು ಇಲ್ಲಿ ಕೆಲವು ವಿಶ್ಲೇಷಣೆ ಮಾತುಗಳನ್ನಾಡಿದ್ದಾರೆ. ಇವು ತುಂಬ ಬೆಲೆಬಾಳುವಂಥದ್ದು, ಅವರ ತೌಲನಿಕ ದೃಷ್ಟಿಯ ದ್ಯೋತಕವೂ ಆಗಿವೆ. ಈ ಮಾಲೆಯ ಅವರ 'A Tragic Ravana' ಅಗ್ರಗಣ್ಯವಾದದ್ದು. ಗ್ರೀಕ್ ದುರಂತ ನಾಟಕಗಳ ನಾಯಕರ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ರಾವಣನ ಪಾತ್ರೌನ್ನತ್ಯವನ್ನು ಶ್ರೀಕಂಠಯ್ಯನವರು ಇಲ್ಲಿ ವಿಶದೀಕರಿಸಿದ್ದಾರೆ. ಪ್ರಾಚೀನ ಕನ್ನಡ ಕಾವ್ಯಗಳ ಪ್ರತಿನಾಯಕರ ಪಾತ್ರ ಕಂಡರಣೆಯಲ್ಲಿ ನಮ್ಮ ಕವಿಗಳು ತೋರಿರುವ ಧೀರೋದಾತ್ತ ಮತ್ತು ಧೀರೋದ್ಧತ ಗುಣಗಳನ್ನು ಪ್ರಕಾಶನಪಡಿಸಿದವರಲ್ಲಿ ಪ್ರಾಯಃ ಶ್ರೀಯವರೇ ಮೊದಲಿಗರು ಎನಿಸುತ್ತದೆ. ಈಚಿನ ಮಾಸ್ತಿಯವರನ್ನು ಕುರಿತು ಅವರು ಆಡಿರುವ ಕೆಲವು ಮಾತುಗಳಲ್ಲಿ ಮ್ಯಾಥ್ಯೂ ಆರ್ನಾಲ್ಡ್‌ನೊಂದಿಗೆ ಅವರನ್ನು ಹೋಲಿಸುವ ಪ್ರಯತ್ನ ಮಾಡಿರುವುದು ಲಕ್ಷಿಸತಕ್ಕದ್ದಾಗಿದೆ. ಇಬ್ಬರ ಕಾವ್ಯಗಳೂ ಸಂಸ್ಕೃತಿಯ ಹಾಡುಗಳೆಂದೂ, ಜೀವನ ಪ್ರೀತಿಸುವ ಬೆಳಕು ವಾಕ್ಯಗಳೆಂದೂ ಅವರು ಸಾಮ್ಯ ಹೇಳುತ್ತಾರೆ. ಇಲ್ಲೇ ಮಾಸ್ತಿಯವರನ್ನು ಷೇಕ್ಸ್‌ಪಿಯರ್‌ನೊಡನೆ ಅವರು ಹೋಲಿಸಲು ಪ್ರಯತ್ನ ಮಾಡಿರುವರಾದರೂ ಅದು ಗಟ್ಟಿಯಾಗಿಲ್ಲ. ಮಾಸ್ತಿಯವರದೇ ಆದ 'ಶಾಂತಾ' ಎಂಬ ಸಣ್ಣ ದೃಶ್ಯವನ್ನು ಕುರಿತು 'ಅರ್ಥಸಾಧಕ' ಪತ್ರಿಕೆಯಲ್ಲಿ ಅವರು ಮಾಡಿರುವ ವಿಮರ್ಶೆ ಮೆಚ್ಚುಗೆ ದನಿಯಾಗಿದ್ದರೂ ಚೂಪಾಗಿದೆ. ಮೂಲ ರಾಮಾಯಣದ ಋಷ್ಯಶೃಂಗೋಪಾಖ್ಯಾನ ಮತ್ತು 'ಶಾಂತಾ'ಗೆ ಇರುವ ಗಣ್ಯ ವ್ಯತ್ಯಾಸಗಳು, 'ಶಾಂತಾ' ನಾಟಕದ ಉತ್ತಮಿಕೆ ಮತ್ತು ಹೊಸ ಧೋರಣೆಗಳನ್ನು ಅವರು ಸರಿಯಾಗಿ ಗುರುತಿಸಿದ್ದಾರೆ. ಇದರೊಂದಿಗೇ ಮಾಸ್ತಿಯವರ ಮೇಲಾಗಿರುವ ಠಾಕೂರರ ಪ್ರಭಾವವನ್ನು ಇಂಗಿತಗೊಳಿಸಿದ್ದಾರೆ. ಎಸ್.ಜಿ. ಶಾಸ್ತ್ರಿಗಳ 'ಸೂತ್ರದ ಬೊಂಬೆ'ಗೆ ಮುನ್ನುಡಿ ಬರೆಯುತ್ತ ಆತನನ್ನು ಸಮರ್ಥವಾಗಿ ಕನ್ನಡಕ್ಕೆ ಪರಿಚಯಿಸಿಕೊಟ್ಟಿದ್ದಾರೆ.

ಪೂರ್ವೋಕ್ತ ಬರೆಹಗಳಲ್ಲಿ ಒಂದೆರಡನ್ನುಳಿದರೆ ಉಳಿದೆಲ್ಲವೂ ಚಿಕ್ಕವು. ಆದ್ದರಿಂದ ಇವುಗಳಲ್ಲಿ ತೌಲನಿಕ ದೃಷ್ಟಿಯ ಹೊಳಹನ್ನು ಕಾಣಬಹುದೇ ಹೊರತು, ವಿಸ್ತಾರ ವಿಶ್ಲೇಷಣೆಯನ್ನು ಕಾಣಲಾಗದು, ಸೋದಾಹರಣ ಪರಿಶೀಲನೆಯನ್ನು ನಿರೀಕ್ಷಿಸಲಾಗದು, ಮೌಲ್ಯಮಾಪನದ ನಿರ್ದಿಷ್ಟತೆ ಗುರುತಿಸಲಾಗದು. ಆದರೆ ಈ ಕಿಡಿಗಳಲ್ಲೆ ಅವರ ತೌಲನಿಕ ಸಾಹಿತ್ಯ ದೃಷ್ಟಿಯ ಉಜ್ವಲ ಕಾಂತಿಯನ್ನು ಪತ್ತೆ ಹಚ್ಚುವುದು ಪ್ರಾಯಃ ಕಷ್ಟವಾಗದೆನಿಸುತ್ತದೆ. □

---

ಡಾ. ಎನ್.ಎಸ್. ತಾರಾನಾಥ
ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು

# ಅಮ್ಮನ ಗುಡ್ಡ

ಚ. ಸರ್ವಮಂಗಳಾ

ವರ್ಷಕ್ಕೊಮ್ಮೆಯಾದರೂ ಮನೆದೇವತೆಯ ದರ್ಶನ.
ಪಯಣ ಎತ್ತಿನ ಬಂಡಿಯಲ್ಲಿ ರೊಟ್ಟಿ ಬುತ್ತಿ ಕಟ್ಟಿಕೊಂಡು.
ಚನ್ನಗಿರಿಯಿಂದ ಮೂರು ತಾಸಿನ ಹಾದಿ ಜೋಳದಾಳು
ಕಾಡು ; ಬಿದಿರು ಮೆಳೆ ತುಂಬಿದ ಕಾಡ ಸೀಮೆ ; ಅಡಿ
ಇಟ್ಟಲ್ಲೆಲ್ಲ ಆಳದೆತ್ತರದ ಹುತ್ತ ; ನಡುವೆ ಗುಡ್ಡ ;
ನೆತ್ತಿಗೊಂದು ಗುಡಿ ; ಒಳಗೊಂದು ಹುತ್ತ ; ಗುಡ್ಡಕ್ಕೆ
ಗುಡ್ಡವೇ ಉಸಿರೆಳೆಯುವಂತೆ ಗಾಳಿ ಸುಯ್ಯಾಟ ;
ನಿಂತು ಲಂಗೋಟಿಯಗಲದಲ್ಲಿ ನಭಕ್ಕೆ ಹುಯ್ಯಲಿಡುವ
ಗಾಳಿಮರ. ಇದಕ್ಕೊತ್ತಿಕೊಂಡೇ ಬಾಳೆಕಲ್ಲ ಸಿದ್ಧನ
ಬೆಟ್ಟ, ದೆವ್ವ ಹೊಕ್ಕವರ ಬಿಡಿಸುತ್ತಿದ್ದ ರುದ್ರಾವತಾರಿ.

ನೂರಾರು ಬಾರಿ ಹೊಕ್ಕಿದರೂ ಕಾಡು ದಿಗಿಲು ಪ್ರತಿಸಲವೂ
ದಾರಿ ತಪ್ಪಬಹುದೆಂದು. ಬಿದಿರುಮೆಳೆಯ ಇಕ್ಕಟ್ಟಿನಲ್ಲಿ
ಸವರುತ್ತ ಗಿಡಗಂಟಿಗಳ ; ಮಾಡಿಕೊಳ್ಳುತ್ತ ಹಾದಿ, ಹೊತ್ತು
ಗೊತ್ತಿಲ್ಲದೆ ಸುತ್ತು ಹಾಕಿ ಕಂಡ ಹುತ್ತಗಳಿಗೆ, ಹುರಿ
ದುಂಬಿಸಿ ಬೆದರಿದೆತ್ತುಗಳ, ಬಾಲ ತಿರುಪಿ 'ಉಧೋ'

ಎಂದು ಬೊಬ್ಬೆ ಹಾಕಿ, ಬೆದರಿಸಿ ಕಾಡುಪ್ರಾಣಿಗಳ,
ಗುಡ್ಡ ಹತ್ತಿ ಗುಡಿಗೆ, ಹಾಡಹಗಲಲ್ಲೂ ಕತ್ತಲು
ಮಗುಚಿಟ್ಟಂತಿದ್ದ ಗೂಡಾರದೊಳಗೆ ಅಮ್ಮ, ಒಲ್ಲದೆ
ಹೊರಜಗತ್ತು, ಹುತ್ತ ಹೊಕ್ಕ ಮಾತಾಯಿ.

ಕುಲ ಗೋತ್ರ ನಾಮ ರೂಪ ನೆಲೆ ಇಲ್ಲದೆ, ಹೊಕ್ಕು ಹುತ್ತ
ಆದಳು ಕುಕ್ಕಡದಮ್ಮ. ಬಡಿದು ಬರಗಾಲ, ತಿಂದು ಬಿದಿರಕ್ಕಿ
ರಕ್ತಭೇದಿ ವಾಂತಿ–ತುತ್ತಾದಾಗ ಜನ, ಊರ ಗೌಡನ ಕನಸಲ್ಲಿ
ಬಂದು ತಾಯಿ ನೀಡಿದಳು ತಾನಿರುವ ಸುಳಿವ. ಕಾಡ ಹೊಕ್ಕ
ಗೌಡ. ತೊಳಲಿ ಬಳಲಿ ಬಯಸಿ ಬಂದಾಗ ಗುಡ್ಡದ ನೆತ್ತಿಗೆ,
ಕಂಡ: ಆಡುತ್ತಿದ್ದವೆರಡು ಮಿಡಿನಾಗರ ಎಳೆ ಬಿಸಿಲಲ್ಲಿ ಮಿರ್ರನೆ
ಮಿಂಚುತ್ತ; ನಡುವೆ ಹುತ್ತ; ಹುತ್ತಕ್ಕೆ ಸುತ್ತು ಹಾಕಿ ಹೆಡೆ
ಎತ್ತಿದ್ದ ತಾಯಿ ನಾಗರ ; ನೋಡು ನೋಡುತ್ತಿದ್ದಂತೆ ಹೊಕ್ಕವು
ಅವು ಹುತ್ತವ. ಕಂಡವು ಆ ಸ್ಥಳದಲ್ಲಿ ಹೂವು.
'ನಿನ್ನ ಪಾದಕ್ಕೆ ಉಘೋ' ಎಂದು ಅಡ್ಡ ಬಿದ್ದ ಗೌಡ.
ಗುಡಿ ಎದ್ದಿತು ಅಲ್ಲಿ, ಪಕ್ಕದಲ್ಲೊಂದು ಕಲ್ಲುಗುಂಡು
ಪರಶುರಾಮನ ರೂಪ ಕಾಪಾಡಲು ತಾಯಮಾನ; ಎದುರಿಗೆ
ನಿಂತಳು ಕಲ್ಲಾಗಿ ಅಮ್ಮನ ರೂಪದ ಮಾತಂಗಿ.
ಬಿದಿರು ಮೆಳೆ ಸಿಕ್ಕಲ್ಲಿ ದಾರಿತಪ್ಪುತ್ತಿದ್ದುದೇ ಹೆಚ್ಚು.
ಗುಡಿಗೆ ಕೂಗಳತೆಯಲ್ಲಿದ್ದ ಕೆರೆಯೊಂದೇ ಕುರುಹು.
ಜಾತ್ರೆಗೆ ನೆರೆದಂತೆ ನಮ್ಮ ಕುಲಜನ ಬೆರೆತು,
ಬಿಟ್ಟು ಬೀಡು, ಒಲೆ ಹೂಡುತ್ತಿದ್ದರು ಕೆರೆ ಬಳಿ.
ಅಮ್ಮನೊಲಿಯಲೆಂದು ಪಾಯಸ ನೇವೇದ್ಯ ; ಮಾತಂಗಿ
ಪರಶುರಾಮರಿಗೆ ಕುರಿ ಕೋಳಿಗಳ ಜೀವದೋಕಳಿ.
ಅರ್ಪಿಸಿದ್ದನ್ನು ಅಟ್ಟುಂಡು ರಾತ್ರಿ ತಂಗಿ ಹೊರಡುತ್ತಿದ್ದೆವು
ಬೆಳಿಗ್ಗೆ ಮತ್ತೆ ಗಾಡಿ ಹೂಡಿ, ನೀಡಿದವರ ನಿಜವ
ಬಲ್ಲ ಆದಿಶಕ್ತಿ ಪರಾಶಕ್ತಿ ಕುಕ್ಕಡದಮ್ಮ ಹುದುಗಿ
ಹುತ್ತದೊಳಗೆ ಹರಿದು ಹಾವಾಗಿ ಹರಸುತ್ತಾಳೆ
ಹೆಡೆಯಾಡಿಸಿ ಎಂಬ ನಂಬಿಕೆಯ ಹೊತ್ತು.

ತೊಟ್ಟ ಲಂಗ ಹರಿಸಿಕೊಳ್ಳದೆ ನಾನು ಹಿಂತಿರುಗಿದ್ದೇ
ಇಲ್ಲ. ಅಮ್ಮನ ಗುಡ್ಡ ಭಯ ದಿಗಿಲಿನ ಗುಪ್ತ ತಾಣ ನನಗೆ.

ಬಿದಿರುಮೆಳೆಯ ಮರೆಯ ಕತ್ತಲು ; ಹುತ್ತದೊಳಗೆ
ಹುದುಗಿರುವ ಹಾವು ; ಕಾಡು ಪ್ರಾಣಿ ಗಾಳಿಯ ಹುಯ್ಯಲು ;
ಗುಡ್ಡದಂತರಾಳದಲ್ಲಿ ಎಲ್ಲೋ ಅಡಗಿರುವ ಅಮ್ಮ – ಬಲ್ಲವರು
ಯಾರು ಇವುಗಳ ಜಾಡ ? ಕಣ್ಣು ಹೊರಳಿದತ್ತ
ಹರಿವ ಹಾವು ಕಾಣಬಹುದೆಂಬ ಭಯ ಕುತೂಹಲ ನನಗೆ.
ಗುಡಿಯ ಕತ್ತಲಲ್ಲಿ ಮೆಟ್ಟಬಹುದು ಹಾವ ಎಂದು ಹೆದರಿ
ಮಾರುದ್ದ ಮಂಡೆಗೂದಲನ್ನು ಸುತ್ತಿ ಸೊಂಟಕ್ಕೆ ನಡೆಯುತ್ತಿದ್ದೆ,
ಮುಟ್ಟಿಯೂ ಮುಟ್ಟದಂತೆ ನೆಲ.
ಊರಲ್ಲಿ ಹೆಡೆ ಎತ್ತಿದ್ದ ನಾಗನ ಬಾಲ ಹಿಡಿದು
ನೆಲಕ್ಕಪ್ಪಳಿಸುತ್ತಿದ್ದ ನನ್ನ ಮಾವ ಅಮ್ಮನ ಗುಡ್ಡ
ದಲ್ಲಿ ಮೌನದ ಮಡು. ತೇಗಿನಮರ ಮೈ ಮಾಟದ
ಮಾವ ಹೆದರಿದೆತ್ತುಗಳ ಹುರಿದುಂಬಿಸಿ ಗಾಡಿ ಹೊಡೆಯುವವ ;
ಕುರಿ ಕುತ್ತಿಗೆ ಮಚ್ಚು ಬೀಸುವವ ; ಕತ್ತಲಿನ ಗುಡಿಯಲ್ಲಿ
ಹಣತೆ ಹಚ್ಚುವವ. ಸದಾ ಮೈಯೊಳಗೆ ಏನೋ ಹೊಕ್ಕಂತಿರುತ್ತಿದ್ದ
ಅವ ಮೂಡಿಸುತ್ತಿದ್ದ ಬೆರಗು ನನ್ನಲ್ಲಿ.

ಆ ವರ್ಷವೂ ಬೀಡು ಗುಡ್ಡದಲ್ಲಿ, ಹಣತೆ ಹಚ್ಚಲು
ಹೊರಟ ಮಾವನೊಂದಿಗೆ ಗುಡಿ ಹೊಕ್ಕೆ ನಾನು. ಕತ್ತಲಲ್ಲಿ
ಹೊರಳಿಸಿದೆ ಕಣ್ಣ. ಕಾಣಬಹುದೇ ಹುತ್ತ ಸುತ್ತಿಕೊಂಡ
ಹಾವು ? ಆಡುವ ಮಿಡಿನಾಗರ ? ಬೆದರಿದವಳ ಕೈ
ಹಿಡಿದು ಹೊರಬಂದ ಮಾವ. ಗುಡಿ ಪಕ್ಕದಲ್ಲೊಂದು
ದೈತ್ಯ ಮೆಳೆ, ಎಂದೋ ಹುಲಿಯೊಂದು ಸಿಕ್ಕಿಬಿದ್ದು
ಸತ್ತಿತ್ತಂತೆ ಅಲ್ಲಿ ಹಾದಿ ಕಾಣದೆ. ಅದರೊತ್ತಿಗಿದ್ದ
ಹುತ್ತ, ಅದರೊಳಗಿದ್ದ ಹೆಡೆ ಮಾತ್ರ ಎತ್ತಿ ಬುಸು
ಗುಟ್ಟುತ್ತಿದ್ದ ಸರ್ಪ. ಉಕ್ಕು ಕತ್ತರಿಸುವಷ್ಟು ಹರತ
ಅದರ ನೋಟ, ಬೆದರಿ ಒಮ್ಮೆಲೆ ಹಿಡಿದೆ ಮಾವನ್ನ.
ಬಿದ್ದೆವು ಹಿಡಿತ ತಪ್ಪಿ ನೆಲಕ್ಕೆ. ಸರ್ರನೆ ಮುಚ್ಚಿ ಹೆಡೆ
ಹುತ್ತದೊಳಗೆ ಹರಿಯಿತು ಹಾವು. ಮೇಲೆದ್ದರೂ ನಾನು
ಬಿದ್ದ ಮಾವ ಏಳಲಿಲ್ಲ. ಹುಯ್ಯಲಿಟ್ಟೆ. ಒಲೆ ಹೂಡುತ್ತಿದ್ದ
ನಮ್ಮವರೆಲ್ಲ ಬಂದರು ಓಡೋಡಿ. ಸಾಗಿಸಿದರು ಮಾವನ್ನ
ಚನ್ನಗಿರಿಗೆ. ಹುತ್ತದೊಳಗಿನ ಅಮ್ಮನ ಚಿತ್ತದಲ್ಲಿ ಏನಿದೆಯೋ
ಎಂದು ಅತ್ತೆ ಕೂತಳು ತಲೆ ಮೇಲೆ ಕೈ ಹೊತ್ತು.

ಹಾಲೂಡಿದ ಕಂದಮ್ಮ ಮಲಗಿತ್ತು ಮಡಿಲೊಳಗೆ ಹಾಯಾಗಿ.
ಎಂಥ ಮೌನ ! ಸೋಂಕಿದರೂ ಸದ್ದು, ಹೆಡೆ ಎತ್ತುವಂತಿತ್ತು
ಸರ್ಪ ! ತಾಗಬಾರದಂತೆ ತಗುಲಿ ಮೆಳೆಮುಳ್ಳು, ಮಾವ
ಕಳೆದುಕೊಂಡ ನರ. ಆದರೂ ಬಿಡಲಿಲ್ಲ ಅವ ಅಮ್ಮನ ಗುಡ್ಡ.

ಸಾಗಿತ್ತು ನನ್ನ ಪಯಣ. ಚನ್ನಗಿರಿಯಿಂದ ಶಿವಮೊಗ್ಗ
ಅಲ್ಲಿಂದ ಮೈಸೂರು. ಸರಿಯಿತು ಕಾಲ. ಮೈಸೂರ
ಹೋಗುತ್ತಿದ್ದಂತೆ ಕಣ್ಣಿಗೆ ಬೀಳುವ ಚಾಮುಂಡಿ ಬೆಟ್ಟ.
ಹುಲಿ ಮೇಲೆ ಚಂಡಮುಂಡರ ರುಂಡ ಹೊತ್ತ ಈ ಅಮ್ಮ
ತರಿಸುತ್ತಿದ್ದಳು ಹುತ್ತದೊಳ ಹೊಕ್ಕ ಆ ಅಮ್ಮನ ನೆನಪು.
ಆಗಾಗ ಪತ್ರಿಕೆ ಬಾನುಲಿಯಲ್ಲಿ ಸುದ್ದಿ ; ಜೋಳುದಾಳು
ಕಾಡು, ಗುಡ್ಡ. ಕಾಡಲ್ಲಿ ಗಂಧ ; ಅಪಾರ ಬೆಲೆಯ
ಹಾವಿನ ಪೊರೆಗಳು ; ಗುಡ್ಡದಲ್ಲಿ ಕಬ್ಬಿಣದ ಅದಿರು,
ಚಿನ್ನದ ತುಣುಕು ; ಗಣಿ ನಿರ್ಮಾಣ. ಹಾದಿಯಿಲ್ಲದ
ಕಾಡ ಗುಡ್ಡದ ವೃತ್ತಾಂತ, ಮನೆ ದೇವತೆಯ ಭಂಡಾರ
ಎಂದತ್ತೆ ಕಳಿಸುತ್ತಿದ್ದ ವಿಭೂತಿ, ಮರುಕಳಿಸುತ್ತಿದ್ದವು
ಅಮ್ಮನ ಗುಡ್ಡದ ವಾಸನೆಯ.
ಒಂದು ದಿನದ ಮಟ್ಟಿಗೆ ನಮ್ಮ ಪಯಣ ಕಾರಲ್ಲಿ.
ಮೂಕಳಾದೆ ತಲುಪಿದಾಗ ಜೋಳದಾಳು ಕಾಡು.
ಯಾವ ಮಾಯಾದಂಡ ತಗುಲಿತೋ ಆ ಕ್ಷೇತ್ರಕ್ಕೆ !
ಪಗಡೆ ಹಾಸಿನ ಹಸಿರು ಚೌಕಳಿಯೊಳಗೆ
ಅಗೆದು ಉತ್ತ ಭತ್ತದ ತೆನೆಯ ತುಯ್ದಾಟ ; ನಡುವೆ
ಹರಿದ ಹೆಬ್ಬಾವು ಹಾದಿ ; ಅಲ್ಲಲ್ಲಿ ಹಿಂಡು ಹಿಂಡಾಗಿ
ಮೇಯುತ್ತಿದ್ದ ಕುರಿದನ ; ಗುಡಿ ಜಾಗದಲ್ಲಿ ದೇವಸ್ಥಾನ,
ನಲ್ಲಿ ; ಜಗಜಗಿಸುವ ಬೆಳ್ಳಿ ಮುಖವಾಡ ಹೊತ್ತ
ಕುಕ್ಕಡದಮ್ಮ ; ಮಂದಾಸನ ; ನೀಲಾಂಜನ ; ಧರ್ಮಾವರದ
ನೆರಿಗೆ ; ಗೋಲಕ ; ತೂಗುತ್ತಿದ್ದ ಗಂಟೆಗಳು ; ಬೆಳ್ಳಿ
ಮಾವಿನೆಲೆಗಳ ತೋರಣ ; ಹಗಲಲ್ಲೂ ಉರಿಯುತ್ತಿದ್ದ
ವಿದ್ಯುಚ್ಛಕ್ತಿ ದೀಪ ; ಕೆಂಪು ಮಗುಟ ತೊಟ್ಟ ದ್ವಿಜ,
ಬಲಿ ಪಡೆವ ಮಾತಂಗಿ ಮುರುಕು ಜೋಪಡಿಯಲ್ಲಿ.
ತೇಗದ ಮೈ ಮಾವ ಮಾರುದ್ದ ಬೆಳ್ಳಿ ಹೊಳಪಿನ
ಗಡ್ಡ ಬಿಟ್ಟು ನೆರಿನೆರಿಯಾದ ಮೊಗದಲ್ಲಿ ಚಿಮ್ಮಿಸಿದ

ನಗೆ. ಹುತ್ತ ಸವರಿ ತೊಡಿಸಿದ್ದ ಮುಖವಾಡದತ್ತ
ತೋರಿದಾಗ ಕೈ ನಕ್ಕ : 'ಎಂದಾದ್ರೂ ಬಿತ್ತಿದ್ದುಂಟೇ
ಕುಯಿಲಾಗಿದ್ದುಂಟೇ ಇಲ್ಲಿ ಕೂಸೇ ? ಈಗ ನೋಡು
ಹೊತ್ತು ಕಂತುವಾಗ ಏಳುತ್ತೆ ಗೋಧೂಳಿ. ತನ್ನ ಮಕ್ಕಳು
ಬೆಳೆಯೋದು ಮಾಗೋದು ಬೇಕವ್ವಾ ತಾಯಿಗೆ.
ಕಲೀದೆ ಇರೋ ನಮಗೆ ಗುಂಡಕಲ್ಲೆ ಪರಶುರಾಮ,
ಹುತ್ತಾನೇ ಪರಾಶಕ್ತಿ. ಕಲಿತ ಮಂದಿಗೆ ಮುಖವಾಡ
ಬೇಕು, ತೋರಣ ಬೇಕು'. ನಂಬದ ನನ್ನ ನೋಡಿ
ಮತ್ತೆ ನುಡಿದ : 'ಕುರಿ ಹಸು ಓಡಾಡೋ ಹಾದೀಲಿ
ಹುತ್ತ ಯಾಕೆ ಬೇಕು ಮಗಾ ? ಅದಕ್ಕೆ ತಾಯಿ
ತೋರಿದಳು ತನ್ನ ಮೊಗ...' ನಗುತ್ತಾ ಹೇಳಿದ :
'ಕಾಸು ಬಿದ್ದ ಹುತ್ತಾನೇ ತೋಡಿದ್ರು ಮಂದಿ ; ಇನ್ನು
ಕಬ್ಬಿಣ ಗಂಧದ ಕಾಡು ಬಿಟ್ಟಾರ ಕೂಸು ? ನೀಡಿದ್ದಕ್ಕೆ
ಚಾಚದೆ, ದೋಚೋದಕ್ಕೆ ಮುಂದು ಮಾಡಿದರೆ ಕೈ, ತಾಯಿ
ಏನು ಮಾಡ್ತಾಳೆ, ಕಾಲನೆರಿಗೆ ಚೆಲ್ಲಿ ನಗೋದು ಬಿಟ್ಟು ?
ಮುಖವಾಡ ತೊಟ್ಟ ಮಂದಿ ತಮ್ಮ ತಪ್ಪ ಹೊಟ್ಟೇಲಿ ಹಾಕೋ
ಅಂತ ಅಮ್ಮಂಗೆ ಮುಖ ತೊಡಿಸಿದ್ರು, ಗುಡಿ ಕಟ್ಟಿಸಿದ್ರು,
ಗಂಟೆ ತೂಗಾಡಿಸಿದ್ರು, ಹಾದಿ ಮಾಡಿಸಿದ್ರು
ಕಾಡನ್ನೇ ಒಪ್ಪ ಮಾಡಿದ್ರು.... ಈಗ ಬಿಟ್ಟದೆ ಸರ್ಕಾರ ಕೆರೆಯಾಚೆಗೆ
ಆರು ಹುಲಿಮರಿ, ಕಾಡು ಬೆಳೆಸಬೇಕು ಅಂತಾ. ಗೊತ್ತಾ ಮಗೂ ?'

ಹಾವು, ಹುಲಿ, ಸರ್ಕಾರ, ಕಳ್ಳಸಾಗಾಣಿಕೆ, ಕುಕ್ಕಡದಮ್ಮ
ಮಾತಂಗಿ, ಮಾವ ಹೊತ್ತು ಮನಸ್ಸಲ್ಲಿ
ಹಿಂದಿರುಗಿದೆ ಮೈಸೂರಿಗೆ ಅಂದೇ. ಸುಕ್ಕಾಗಿರಲಿಲ್ಲ
ಉಟ್ಟ ಸೀರೆಯ ನೆರಿಗೆ ಕೂಡ.

□

---

ಚ. ಸರ್ವಮಂಗಳಾ
ಪ್ರಾಚಾರ್ಯರು
ಮಹಾರಾಜ ಕಾಲೇಜು
ಮೈಸೂರು ವಿಶ್ವವಿದ್ಯಾಲಯ, ಮೈಸೂರು – ೫

# ಕೆ.ಟಿ. ಶಿವಪ್ರಸಾದ್ ಸಂದರ್ಶನ

ಸಂದರ್ಶಕರು : **ಜಿ.ವಿ. ಆನಂದಮೂರ್ತಿ**

ಸಮಕಾಲಿನ ಚಿತ್ರಕಲೆಯ ಸಂದರ್ಭದಲ್ಲಿ ಕೆ.ಟಿ. ಶಿವಪ್ರಸಾದ್ ಪ್ರಮುಖವಾದ ಹೆಸರು. ಸಂವೇದನಾಶೀಲ ಕಲಾವಿದರಾದ ಶಿವಪ್ರಸಾದ್, ಕರ್ನಾಟಕದ ಪ್ರಗತಿಪರ ಚಳವಳಿಗಳಾದ ದಲಿತ ಮತ್ತು ರೈತ ಹೋರಾಟಗಳಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡವರು. ನಿರ್ಭೀತಿಯ ವ್ಯಕ್ತಿತ್ವ ಹಾಗೂ ತಮ್ಮ ಅನನ್ಯ ಕಲಾಕೃತಿಗಳ ಮೂಲಕವೇ ನಾಡಿನ ಎಲ್ಲ ಪ್ರಗತಿಪರ ಚಿಂತಕರ ಒಡನಾಡಿಯಾಗಿದ್ದಾರೆ. ಈಗ ತಮ್ಮ ಪ್ರೀತಿಯ ಹಾಸನದಲ್ಲಿದ್ದುಕೊಂಡು ಕಲಾಕೃತಿಗಳನ್ನು ರಚಿಸುತ್ತಿದ್ದಾರೆ. ಅವರನ್ನು ಕುರಿತಾದ ಪುಟ್ಟ ಸಂದರ್ಶನ ಇದು.

ಆನಂದಮೂರ್ತಿ : ನಿಮ್ಮ ಕೌಟುಂಬಿಕ ಹಿನ್ನೆಲೆ ಹಾಗೂ ಚಿತ್ರಕಲಾ ಪ್ರಪಂಚಕ್ಕೆ ನೀವು ತೆರೆದುಕೊಂಡ ಬಗೆ ಹೇಗೆ?

ಶಿವಪ್ರಸಾದ್ : ನಮ್ಮ ಅಜ್ಜ ಹಾಸನದ ಹತ್ತಿರ ಇರುವ ಕಾರ್ಲೆ ಗ್ರಾಮದ ರೈತ. ಬೇಸಾಯ ಬಿಟ್ಟು ಬೇರೇನೂ ಮಾಡುತ್ತಿರಲಿಲ್ಲ. ನಮ್ಮ ತಂದೆ ಎಸ್‌ಎಸ್‌ಎಲ್‌ಸಿ ಓದಿದ್ದರೇನೋ. ಆಗ ಸ್ವಾತಂತ್ರ ಹೋರಾಟ ನಡೆಯುತ್ತಿತ್ತು. ನಮ್ಮ ತಂದೆ ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿಸಿದ್ದರು.

ಸ್ವಾತಂತ್ರ್ಯ ಬಂದನಂತರ ನಮ್ಮ ತಂದೆ, ನಮ್ಮಲ್ಲಿ ಬೆಳೆದ ಆಲೂಗಡ್ಡೆಯನ್ನು ಮದ್ರಾಸು, ಕಲ್ಕತ್ತಾಗೆ ತೆಗೆದುಕೊಂಡು ಹೋಗಿ ಮಾರುತ್ತಿದ್ದರು. ಹೀಗಾಗಿ

ನಮ್ಮ ತಂದೆ ವ್ಯಾಪಾರದ ಕಡೆಗೆ ಹೆಚ್ಚು ವಾಲಿದ ಮನುಷ್ಯ. ಇದರೊಂದಿಗೆ ಹಾಸನದಲ್ಲಿ ಹೆಂಚಿನ ಕಾರ್ಖಾನೆ ಮತ್ತು ಸಾಮಿಲ್‌ನ್ನೂ ಸಹ ನನ್ನ ತಂದೆ ಶುರು ಮಾಡಿದರು.

ನಮ್ಮ ತಾಯಿಯ ತಂದೆ (ಅಜ್ಜ) ಮಡಿಕೇರಿಯವರು. ತಾಯಿಯ ತಾಯಿ (ಅಜ್ಜಿ) ದಕ್ಷಿಣ ಕನ್ನಡದ ಸೋಣಂಗೇರಿಯವರು. ನನಗೂ ಮತ್ತು ನನ್ನ ತಂಗಿ ವಿಜಯಲಕ್ಷ್ಮಿಗೂ ವಯಸ್ಸಿನಲ್ಲಿ ಒಂದೂವರೆ ವರ್ಷದಷ್ಟು ಅಂತರವಿತ್ತು. ಏಕಕಾಲದಲ್ಲಿ ನಮ್ಮಿಬ್ಬರನ್ನೂ ನೋಡಿಕೊಳ್ಳಲು ತಾಯಿಗೆ ಕಷ್ಟವಾಗುತ್ತದೆಂದು ಭಾವಿಸಿ ಅಜ್ಜಿ ನನ್ನನ್ನು ಸುಳ್ಯಕ್ಕೆ ಸಮೀಪವಿದ್ದ ಸೋಣಂಗೇರಿಗೆ ಕರೆದುಕೊಂಡು ಹೋಗಿ ಐದು ವರ್ಷದವರೆಗೂ ಸಾಕಿದರು. ನಾನು ಸ್ಕೂಲಿಗೆ ಸೇರಿದ್ದು ಹಾಸನದಲ್ಲಿ. ಪ್ರತಿ ಬೇಸಿಗೆ ರಜೆಯಲ್ಲಿ ನಾನು ಮಡಿಕೇರಿ ಮತ್ತು ಸೋಣಂಗೇರಿಗೆ ತಪ್ಪದೆ ಹೋಗುತ್ತಿದ್ದೆ. ಹೀಗಾಗಿ ಬಾಲ್ಯದಲ್ಲೇ ನನಗೆ, ಅಡಿಕೆ ತೋಟ, ಕಾಡು, ಕೆಂಪಿನ ಕೋವಿ, ಮಂಗಡ ಬೇಟೆ. ಹೊಳೆ, ಹಕ್ಕಿ, ಗಿಡ–ಮರ ನನ್ನೊಳಗೆ ಆಳವಾಗಿ ಬೇರೂರಿದವು. ಈ ನಡುವೆ ಮಡಿಕೇರಿಯ ನನ್ನ ಅಜ್ಜನ ಮನೆಯಲ್ಲಿ ಎರಡು ವರ್ಷ ಓದಿದೆ. ಆನಂತರ ಮರಳಿ ಹಾಸನಕ್ಕೆ ಬಂದೆ.

ಹಾಸನದಲ್ಲಿ ನಾನು ಸರಿಯಾಗಿ ಓದುತ್ತಿರಲಿಲ್ಲ ಹೀಗಾಗಿ ಮಿಡಲ್ ಸ್ಕೂಲ್‌ನ ಕೊನೆಯಲ್ಲಿ, ತಂದೆಯವರು ನನ್ನನ್ನು ಮೈಸೂರಿನ ರಾಮಕೃಷ್ಣಾ ಶ್ರಮಕ್ಕೆ ಸೇರಿಸಿದರು. ಆಶ್ರಮದಲ್ಲಿ ಮಧ್ಯಾಹ್ನ ಊಟದ ನಂತರ ಒಂದು ಗಂಟೆ ವಿರಾಮ ಇರೋದು. ಒಂದು ಮಧ್ಯಾಹ್ನ ವಿರಾಮದ ಅವಧಿಯಲ್ಲಿ ಆಶ್ರಮದ ಕಾರಿಡಾರ್‌ನಲ್ಲಿ ಗೆಳೆಯರೊಂದಿಗೆ ಜಗಳವಾಡುತ್ತಾ ನಿಂತಿದ್ದೆ. ಅದನ್ನು ಗಮನಿಸದ ಆಶ್ರಮದ ಮುಖ್ಯ ಸ್ವಾಮೀಜಿ, ನನ್ನನ್ನು ಕರೆದು 'ನೋಡು ಈಗ ಆಶ್ರಮದಲ್ಲಿ Hobby Class ಶುರು ಮಾಡಿದ್ದೀವಿ. ನೀನು ಯಾವುದಕ್ಕೆ ಸೇರುತ್ತೀ! ಸಂಗೀತಕ್ಕೋ ಅಥವಾ ಪೇಯಿಟಿಂಗ್ ಕ್ಲಾಸ್‌ಗೋ!' ಅಂತ ಕೇಳಿದರು. ನನಗೆ ಥಟ್ಟನೆ ಹೊಳೆದದ್ದು; ಈ ಸಂಗೀತವೆಂದರೆ, ಬಾರಿಸೋದು, ಊದೋದು ಎಲ್ಲಾ ನೆನಪಾಗಿ ಭಯದಿಂದ ಪೇಯಿಂಟಿಂಗ್ ಕ್ಲಾಸ್‌ಗೆ ಸೇರುತ್ತೀನಿ ಅಂದುಬಿಟ್ಟೆ ಸ್ವಾಮೀಜಿ ಅಂದೇ ನನ್ನನ್ನು ಕರೆದುಕೊಂಡು ಹೋಗಿ ಪೇಯಿಂಟಿಂಗ್ ಕ್ಲಾಸ್‌ಗೆ ಸೇರಿಸಿದರು.

ಅಲ್ಲಿನ ಡ್ರಾಯಿಂಗ್ ಟೀಚರ್ ಗಾಣೇಕರ್ ಅನ್ನೋರು. ಮಹಾರಾಷ್ಟ್ರ

ದವರು. ತುಂಬಾ ಒಳ್ಳೆ ಮೇಸ್ಟ್ರು. ಹಾಗೆಯೇ ತುಂಬಾ ಶಿಸ್ತೂ ಕೂಡ. ನಮ್ಮನ್ನೆಲ್ಲಾ ಪ್ರೀತಿಯಿಂದ ಮಾತನಾಡಿಸೋರು. ಹೀಗೆ ನಾನು ಡ್ರಾಯಿಂಗ್, ಪೇಯಿಂಟಿಂಗ್, ವಾಟರ್‌ಕಲರ್ ಪೇಯಿಂಟಿಂಗ್ ಹಾಗೂ ಬಣ್ಣಗಳ ಬಗೆಗಿನ ಮೂಲಭೂತ ವಿಚಾರಗಳನ್ನು ಗಾಣೇಕರ್ ಅವರಿಂದಲೇ ಕಲಿತೆ.

ಮುಂದೆ ನಾನು ಆಶ್ರಮದ ಕಟ್ಟುಪಾಡುಗಳಿಗೆ ಒಗ್ಗಿಕೊಳ್ಳಲಾಗದೆ ಮತ್ತೆ ಹೈಸ್ಕೂಲು ಎರಡನೆ ವರ್ಷಕ್ಕೆ ಹಾಸನಕ್ಕೆ ಬಂದೆ. ಆಗ ಬಿಡುವಿನ ವೇಳೆಯಲ್ಲಿ ಚಿತ್ರಕಲೆ ಮಾಡುವುದನ್ನು ಮುಂದುವರೆಸಿದೆ. ನಮ್ಮ ತಂದೆ ನನ್ನನ್ನು ಇಂಜನಿಯರಿಂಗ್ ಓದಿಸಬೇಕು ಅಂತ ತೀರ್ಮಾನ ಮಾಡಿದ್ದರು.

ಹೀಗೆಯೇ ನಾನು ಎಸ್‌ಎಸ್‌ಎಲ್‌ಸಿಯಲ್ಲಿ ಫಸ್ಟ್‌ಕ್ಲಾಸ್‌ನಲ್ಲಿ ಪಾಸಾದೆ. ಆಗ ರಜೆ ದಿನಗಳಲ್ಲಿ ಬೆಂಗಳೂರಿಗೆ ಹೋಗ್ತಾ ಇದ್ದೆ. ಅಲ್ಲಿನ ಹುಡುಗರು ಇಂಗ್ಲಿಷ್‌ನಲ್ಲಿ ಮಾತನಾಡೋದನ್ನು ನೋಡಿ, ನನಗೂ ಇಂಗ್ಲಿಷ್ ಕಲಿಬೇಕು ಅನ್ನಿಸ್ತು. ಬೆಂಗಳೂರಿನ ಚಿಕ್ಕಪೇಟೆಯಲ್ಲಿ ಸರಳ ಇಂಗ್ಲಿಷ್‌ನ ಪತ್ತೆದಾರಿ ಪುಸ್ತಕಗಳನ್ನು ಕೊಂಡುತಂದು ಓದಲು ಶುರು ಮಾಡಿದೆ. ಪಿಯುಸಿಗೆ ಬಂದ ನಂತರ ಈ ಪತ್ತೆದಾರಿ ಪುಸ್ತಕಗಳ ಬದಲು ಬೇರೆ ಪುಸ್ತಕಗಳನ್ನೂ ಓದಬೇಕೆನಿಸಿತು. ಆಗ ನಮ್ಮ ಹಾಸನದ Public Library ತುಂಬಾ ಚೆನ್ನಾಗಿತ್ತು. ಅಲ್ಲಿ ರಾಜು ಅನ್ನೊ ನೀಳಕಾಯದ Librarian ಇದ್ದರು. ಅವರು ನನಗೆ ಲೈಬ್ರರಿಯಲ್ಲಿದ್ದ ಎಲ್ಲ ಇಂಗ್ಲಿಷ್ ಪುಸ್ತಕಗಳನ್ನೂ ತೋರಿಸಿದರು. ಇವುಗಳನ್ನೆಲ್ಲಾ ಓದು ಅಂದರು. ನನಗೆ ಆ ಇಂಗ್ಲಿಷ್ ಪುಸ್ತಕಗಳ ಅಗಾಧ ರಾಶಿಯನ್ನು ನೋಡಿ ದಿಗ್ಭ್ರಮೆಯಾಯಿತು. ಆಗ ನಾನು ಇಂಗ್ಲಿಷ್ ಪುಸ್ತಕಗಳ ಕವರ್‌ಪೇಜ್ ನೋಡಿ ಓದುವ ಅಭ್ಯಾಸವಿತ್ತು. ಅದರಲ್ಲಿ ಒಂದು ದಿನ, ನಗ್ನ ಹೆಣ್ಣಿನ ಚಿತ್ರವಿರುವ ಪುಸ್ತಕ ಓದಲು ತೆಗೆದುಕೊಂಡೆ. ಆ ಪುಸ್ತಕ Moulin Rouge ಆಗಿತ್ತು. Toulouse-Lautrec ಎನ್ನುವ ಕಲಾವಿದನ ಬಗ್ಗೆ ಬರೆದ ಪುಸ್ತಕ ಅದು. ಆ ಪುಸ್ತಕದ ಓದು ನನ್ನನ್ನು ಬಹುವಾಗಿ ಸೆಳೆಯಿತು. ಆ ನಂತರ ನಾನು ಓದಿದ ಪುಸ್ತಕ 'Lust for Life' ವ್ಯಾನ್‌ಗಾಗ್‌ನನ್ನು ಕುರಿತಾದ ಪುಸ್ತಕ ಇದು. ಇದು ನನ್ನೊಳಗಿನ ಚಿತ್ರಕಲೆಯ ಆಸಕ್ತಿಯನ್ನು ತೀವ್ರವಾಗಿ ಕೆರಳಿಸಿತು. ಮತ್ತೊಂದು ಪುಸ್ತಕ 'Moon and Six Pience'. ಇದು ಗೋಗಿಲ್‌ನನ್ನು ಕುರಿತಾದ ಪುಸ್ತಕ. ಇವುಗಳ ಓದಿನಿಂದಾಗಿ ಚಿತ್ರಕಲೆಯ ಬಗ್ಗೆ ಗಂಭೀರವಾಗಿ ಯೋಚಿಸಲು ಆರಂಭಿಸಿದೆ.

ಇಷ್ಟರೊಳಗೆ ಪಿಯುಸಿ ಮುಗಿಸಿ ಇಂಜಿನಿಯರಿಂಗ್ ಸೇರಿದೆ. ಇಲ್ಲಿಯೇ ಚಿತ್ರಕಲೆಯ ಬಗ್ಗೆ ಹೆಚ್ಚು ತೊಡಗಿಸಿಕೊಂಡೆ. ನಾನು ಎರಡನೆ ವರ್ಷದ ಇಂಜಿನಿಯರಿಂಗ್‌ಗೆ ಬಂದಾಗ ಚಿತ್ರಕಲೆಯ ಬಗ್ಗೆಯೇ ಹೆಚ್ಚು ಅಧ್ಯಯನ ಮಾಡಲು ತೀರ್ಮಾನಿಸಿ ಇಂಜಿನಿಯರಿಂಗ್ ಓದನ್ನು ಅಲ್ಲಿಗೆ ನಿಲ್ಲಿಸಿದೆ. ಬಾಂಬೆಯಲ್ಲಿ JJ School of Art ಸೇರಿದೆ. ಇದನ್ನು ನನ್ನ ತಂದೆಯವರು ತೀವ್ರವಾಗಿ ವಿರೋಧಿಸಿದರು. ಹಣ ಕೊಡುವುದಿಲ್ಲ ಎಂದರು. ನಾನು ಅದಾವುದನ್ನು ಲೆಕ್ಕಿಸದೆ, ಬಾಂಬೆಗೆ ಹೋಗಿ JJ ಸ್ಕೂಲಿಗೆ ಸೇರಿದೆ. ಆಗ ನನ್ನ ತಾಯಿ ನನಗೆ ಎಲ್ಲ ನೆರವನ್ನೂ ಕೊಟ್ಟರು. ಅವರ ಸಹಕಾರ ಇಲ್ಲದಿದ್ದರೆ ನಾನು ಕಲಾವಿದನಾಗುತ್ತಿರಲಿಲ್ಲ ಎನಿಸುತ್ತದೆ.

ಆನಂದಮೂರ್ತಿ : ಕರ್ನಾಟಕದ ಪ್ರಗತಿಪರ ಚಳವಳಿಗಳಾದ ದಲಿತ ಮತ್ತು ರೈತ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡವರು ನೀವು. ಅಲ್ಲಿನ ಹೋರಾಟದ ಅನುಭವ ನಿಮ್ಮ ಚಿತ್ರಕಲೆಯ ಅಭಿವ್ಯಕ್ತಿಗೆ ಹೇಗೆ ನೆರವಾಗಿದೆ.

ಶಿವಪ್ರಸಾದ್ : ಕಲೆ ಜೀವನದಿಂದ ಹೊರತಲ್ಲ. ಜೀವನವಿದ್ದರೆ ಕಲೆ. ನಾನು ಬಾಂಬೆಯಲ್ಲಿ ಏಳು ವರ್ಷ ಓದುವಾಗ ನನ್ನ ಅನುಭವಕ್ಕೆ ಬಂದದ್ದು, ಆ ಮಹಾ ನಗರದ ವೈವಿಧ್ಯಮಯ ಜೀವನ. ಬಾಂಬೆ ಬಿಟ್ಟ ನಂತರ ನಾನು ಬಂದು ನೆಲೆಸಿದ್ದು ಹಾಸನ ಬೇಲೂರು ರಸ್ತೆಯಲ್ಲಿದ್ದ ಕುಪ್ಪಳ್ಳಿಯಲ್ಲಿ. ಅಲ್ಲಿ ನನ್ನ ತಂದೆಯವರ ಜಮೀನು ಇತ್ತು. ಅಲ್ಲಿ ರೈತಾಪಿ ಜೀವನದ ಕಷ್ಟ-ಸುಖ, ಮಣ್ಣು-ಗುಡ್ಡ-ಬೆವರು, ಹತಾಶೆ, ಬಡತನ ಇವುಗಳನ್ನೆಲ್ಲಾ ಹತ್ತಿರದಿಂದ ಕಂಡೆ.

ಒಮ್ಮೆ ನಾನು ಕುಪ್ಪಳ್ಳಿಯಿಂದ ಹಾಸನಕ್ಕೆ ಬರಬೇಕಾಗಿತ್ತು. ಬಸ್ಸಿಗಾಗಿ ಕಾಯುತ್ತಾ ರಸ್ತೆ ಬದಿ ನಿಂತಿದ್ದೆ. ಅಷ್ಟರೊಳಗೆ ಅಲ್ಲಿಗೊಂದು ಮಿಲಿಟರಿ ಜೀಪ್ ಬಂತು. ಅದರಲ್ಲಿದ್ದವರಿಗೆ ಹಾಸನಕ್ಕೆ ಡ್ರಾಪ್ ಕೇಳಿದೆ. ಅದರಲ್ಲಿದ್ದವರು ಒಪ್ಪಿ ನನ್ನನ್ನು ಜೀಪಿನಲ್ಲಿ ಕುಳ್ಳಿರಿಸಿಕೊಂಡರು. ಆ ಜೀಪಿನಲ್ಲಿದ್ದವರು ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು. ಅವರ ಮತ್ತು ನನ್ನ ಪರಿಚಯ ಈ ಸಣ್ಣ ಘಟನೆಯಿಂದ ಶುರುವಾಯಿತು.

ರೈತ ಮತ್ತು ದಲಿತ ಚಳವಳಿಯಲ್ಲಿ ವಾಸ್ತವತೆಯ ನಾನಾ ರೂಪಗಳು, ನಾನಾ ನೆನಪುಗಳು ನನಗಾದವು. ಈ ಎಲ್ಲ ಅನುಭವ ದ್ರವ್ಯಗಳೇ ನನ್ನ ಚಿತ್ರಗಳ ತಳಪಾಯಗಳಾಗಿವೆ.

ಆನಂದಮೂರ್ತಿ : ಕನ್ನಡದ ಸಾಂಸ್ಕೃತಿಕ ಪರಂಪರೆಗಳೊಂದಿಗೆ ತೀವ್ರ ಅನುಸಂಧಾನ

ನಡೆಸುತ್ತಿರುವ ಕಲಾವಿದರಲ್ಲಿ ನೀವೂ ಒಬ್ಬರು. ಇವೆಲ್ಲವೂ ನಿಮ್ಮ ಕಲಾಕೃತಿಗಳನ್ನು ಹೇಗೆ ಪ್ರಭಾವಿಸಿವೆ?

ಶಿವಪ್ರಸಾದ್ : ರೈತ ಮತ್ತು ದಲಿತ ಚಳವಳಿಯಲ್ಲಿ ನಾನು ಭಾಗವಹಿಸಿದ ದಿನಗಳಲ್ಲಿ ಆದಂಥ ಜೀವನದ ಅನುಭವಗಳು ವಿಶಿಷ್ಟವಾದವು. ಈ ಅನುಭವಗಳು ಕೆಲವೊಂದು ಮೂಲಭೂತ ಪ್ರಶ್ನೆಗಳನ್ನು ಎದುರಿಸುವ ಸಂದರ್ಭಗಳನ್ನು ನನಗೆ ತಂದೊಡ್ಡಿದವು. ಉದಾಹರಣೆಗೆ : ಸ್ವಾತಂತ್ರ್ಯ ಅಂದರೇನು? ವ್ಯಕ್ತಿ ಸ್ವಾತಂತ್ರ್ಯ ಅಂದರೇನು? ಸಮಾನತೆ ಅಂದರೇನು? ಈ ಜೀವನ ಕ್ರಮಕ್ಕೆ ಏನು ಅರ್ಥ? ಈ ಪ್ರಶ್ನೆಗಳಿಗೆಲ್ಲಾ ಉತ್ತರ ಹುಡುಕುತ್ತಾ.... ಹುಡುಕುತ್ತಾ....ಬುದ್ಧನಿಂದ ಮೊದಲುಗೊಂಡು, ಬಸವಣ್ಣ, ಅಂಬೇಡ್ಕರ್, ಏಸು, ಕುವೆಂಪು, ಲೋಹಿಯಾ ಇವರನ್ನೆಲ್ಲಾ ನಾನು ಗಂಭೀರವಾಗಿ ಓದಬೇಕಾಯಿತು. ಹಾಗೆಯೇ ಇದರ ಜೊತೆಯಲ್ಲಿಯೇ ಜಾನಪದ ಪರಂಪರೆಯನ್ನೂ ನೋಡಬೇಕಾಯಿತು. 'ನೋಡಬೇಕು' ಅಂತ ಏಕೆ ಹೇಳ್ತೀನಿ ಅಂದರೆ, ನನ್ನ ಕಲೆ 'ನೋಡು'ವುದಕ್ಕೆ ಅಂದರೆ ದೃಷ್ಟಿಗೆ ಸಂಬಂಧಿಸಿದ್ದು. ಹುಲಿವೇಶದಿಂದ ಶುರುವಾಗಿದ್ದು ಚಕ್ಕಳದ ಗೊಂಬೆಯ ಬಿಂಬದವರೆಗೂ (Image) ಬಂದಿದ್ದೀನಿ. ಜನಪದ ಜನರಿಗೆ ಹತ್ತಿರವಾದ ಕಲೆ. ಆದ್ದರಿಂದ ಜನಪದ ಕಲೆಗಳು ನನ್ನ ಮೇಲೆ ತುಂಬಾ ಪ್ರಭಾವ ಬೀರಿವೆ.

ಅನಂದಮೂರ್ತಿ : ಕಲೆಯನ್ನೂ ಒಳಗೊಂಡು ನಮ್ಮೆಲ್ಲ ಸಾಂಸ್ಕೃತಿಕ ಪಠ್ಯಗಳಲ್ಲಿ 'ದೇಸಿ' ಕಲ್ಪನೆ ಈಗ ಹೆಚ್ಚು ಜಾಗೃತವಾಗಿದೆ. ನಿಮ್ಮ ಪ್ರಕಾರ ಕಲೆಯಲ್ಲಿ 'ದೇಸಿ' ಅಂದರೆ ಏನು?

ಶಿವಪ್ರಸಾದ್ : ಯಾವುದೇ ಭಾಷೆ ಜನರಿಗೆ ಸೇರಿದ್ದಲ್ಲ. ಭಾಷೆಯು ಅದು ಹುಟ್ಟಿದ ಮಣ್ಣಿಗೆ, ಆ ಪ್ರಾಂತ್ಯದ ನದಿ–ಬೆಟ್ಟ–ಗುಡ್ಡ ಗಿಡ–ಮರ, ಹಕ್ಕಿ–ಪಕ್ಷಿಗಳಿಗೆ ಸೇರಿದ್ದು. ಭಾಷೆ ಏನಾದರೂ ಮನುಷ್ಯರಿಗೆ ಸೇರಿದ್ದೇ ಆಗಿದ್ದರೆ, ಇಷ್ಟು ಹೊತ್ತಿಗೆ ಪ್ರಪಂಚಕ್ಕೆಲ್ಲಾ ಒಂದೇ ಭಾಷೆ ಇರೋದು. ಕರ್ನಾಟಕದ ಇಪ್ಪತ್ತೇಳು ಜಿಲ್ಲೆಗಳಲ್ಲಿ ಇಪ್ಪತ್ತೇಳು ಬಗೆಯ ಕನ್ನಡಗಳಿವೆ. ಈ ತರಹದ ಅಂಶಗಳು ಬರುವುದು ಅಲ್ಲಿನ ಮಣ್ಣಿನಿಂದ, ಅಲ್ಲಿನ ಪ್ರಾಂತ್ಯದ ಗುಣಗಳಿಂದ. ಅದು ಜನತೆಯಿಂದ ಬರೋದಲ್ಲ! ಇದನ್ನೇ ನಾನು 'ದೇಸಿ' ಅಂತ ಕರೆಯೋದು.

'ದೇಸಿ' ಅನ್ನೋದು ಯಾವಾಗಲೂ ಚಲನೆಯಲ್ಲಿ ಇರೋದು. ಏಕೆಂದರೆ; ಈ ಭೂಮಿ, ಸೂರ್ಯ, ನಕ್ಷತ್ರ ಮಂಡಲ ಇವೆಲ್ಲ ನಿರಂತರ ಚಲನೆಯಲ್ಲಿ

ಇರುವಂತಹವು. 'ದೇಸಿ' ಅನ್ನೋದು ಭೂಮಿಗೆ ಸೇರಿರುವುದರಿಂದ ಅದೂ ಚಲನೆಗೆ ಸೇರಿದ್ದು. ಇದೇನಾದರೂ ಚಲನೆಯಲ್ಲಿ ಇಲ್ಲದಿದ್ದರೆ, 'ದೇಸಿ' ಅನ್ನೋದು ಮೃತವಾಗುತ್ತದೆ.

ನೀವು ಪ್ರಶ್ನೆ ಕೇಳುತ್ತಾ ದೇಸಿ ಪ್ರಜ್ಞೆ ಈಗ ಜಾಗ್ರತವಾಗುತ್ತಿದೆ ಎಂದಿದ್ದೀರಿ. ಆದರೆ ದೇಸಿ ಸದಾ ಜಾಗ್ರತವಾಗಿರೋದು. ಆದರೆ ಕೆಲವರಿಗೆ ಈಗ ಅದು ಜಾಗ್ರತವಾದಂತೆ ಕಾಣುತ್ತದೆ. ಚಿತ್ರಕಲೆಯಲ್ಲಿ (Painting) ಒಬ್ಬ ಕಲಾವಿದ ಚಿತ್ರವನ್ನು ಬಿಡಿಸುವಂತಹ ವಿಧಾನ ದೇಸಿಗೆ ಸೇರಿದ್ದರೆ, ಅದೊಂದು ಶ್ರೇಷ್ಠ ಕಲಾಕೃತಿಯಾಗಬಲ್ಲದು. ಉದಾಹರಣೆಗೆ : ಗೋಗಿನ್ ಫ್ರೆಂಚ್ ನೆಲದ ಕಲಾವಿದ. ಅವನು ಫ್ರೆಂಚ್ ನೆಲವನ್ನು ಬಿಟ್ಟು ಟ್ರಾಯಿಟಿ (ಫೆಸಿಫಿಕ್ ಐಲೆಂಡ್ಸ್)ಗೆ ಹೋಗಿ ನೆಲಸಿದ. ಅಲ್ಲಿ ಅವನು ರಚಿಸಿದ ಕಲಾಕೃತಿಗಳಿಂದಾಗಿಯೇ ಅವನು ಜಗತ್ ಪ್ರಸಿದ್ಧನಾದ. ಟ್ರಾಯಿಟಿಯಲ್ಲಿ ಅವನು ಮಾಡಿದ ಪೇಯಿಂಟಿಂಗ್‌ಗಳು ಆ ನೆಲದ ಪೇಯಿಂಟಿಂಗ್ ಗಳಾಗಿದ್ದವು. ಅದು ಯುರೋಪಿಯನ್ ಕಲೆಗಳಿಗಿಂತ ಭಿನ್ನವಾಗಿತ್ತು.

ಅನಂದಮೂರ್ತಿ : ಹೆಣ್ಣು ಈಚಿನ ನಿಮ್ಮೆಲ ಕಲಾಕೃತಿಗಳ ಕೇಂದ್ರವಾಗಿದೆ. ಹೆಣ್ಣನ್ನು Tradional Form ನಲ್ಲೂ ಚಿತ್ರಿಸುತ್ತೀರಿ, ಹಾಗೆಯೇ Modern Form ನಲ್ಲೂ ಚಿತ್ರಿಸುತ್ತೀರಿ ಏಕೆ?

ಶಿವಪ್ರಸಾದ್ : ಹೆಣ್ಣು ಯಾವುದೇ ಸಮಾಜದಲ್ಲಿ ಅತ್ಯಂತ ಶೋಷಿತ ಜೀವಿ. ಆದ್ದರಿಂದ ಹೆಣ್ಣನ್ನು ಚಿತ್ರಿಸುತ್ತೇನೆ. ನನ್ನ ಚಿತ್ರಕಲೆಯಲ್ಲಿ ಚಲನೆ ಬಹಳ ಮುಖ್ಯವಾದದ್ದು. ಆದ್ದರಿಂದ ಹೆಣ್ಣನ್ನು Tradional Form ನಲ್ಲೂ ಮತ್ತು ಹೆಚ್ಚು Modern Form ನಲ್ಲೂ ಚಿತ್ರಿಸುತ್ತೇನೆ.

ಅನಂದಮೂರ್ತಿ : ಈಚೆಗೆ ನೀವು Two Dimension ಆಯಾಮದಲ್ಲಿ ಕಲಾಕೃತಿಗಳನ್ನು ಚಿತ್ರಿಸುತ್ತಿದ್ದೀರಿ. ಇದು ಕಲೆಯಲ್ಲಿ ನಿಮ್ಮ ಪ್ರಯೋಗಶೀಲತೆಯೇ ಅಥವಾ ಬೇರೆ ಆಯಾಮಗಳಿವೆಯೆ?

ಶಿವಪ್ರಸಾದ್ : ನೋಡುವ ಕ್ರಿಯೆಯನ್ನು ಹೀಗೆ ಹೇಳಬಹುದು: ಈ ಕ್ರಿಯೆಯಲ್ಲಿ ನೋಡುವನೊಬ್ಬ ಇರಬೇಕು. ನೋಡಲು ಒಂದು ವಸ್ತು ಇರಬೇಕು. ವಸ್ತು ಇಲ್ಲದಿದ್ದರೆ ನೋಡಲು ಏನೂ ಇರುವುದಿಲ್ಲ. ವಸ್ತು ಇದ್ದು ನೋಡುವವನು ಇಲ್ಲದಿದ್ದರೆ, ವಸ್ತು ಇರುವುದಿಲ್ಲ. ಹೀಗೆ ವಸ್ತು ಮತ್ತು ನೋಡುವವನು ಈ ಎರಡೂ ಸೇರಿ ನೋಡುವ ಕ್ರಿಯೆ ನಡೆಯುತ್ತದೆ. ಇದೇ ರೀತಿ ಪೇಯಿಂಟ್‌ನ್ನು ವಿಜ್ಞಾನದಲ್ಲಿ Image ಅಂತ ಕರೆಯುತ್ತಾರೆ.

ಅಂದರೆ ಪೇಯಿಂಟಿಂಗ್‌ಗೆ ಉದ್ದ-ಅಗಲ ಇರುತ್ತದೆಯೇ ಹೊರತು, Space ಇರುವುದಿಲ್ಲ. ಉದಾಹರಣೆಗೆ : ಕನ್ನಡಿಯಲ್ಲಿ ಕಾಣುವ ಬಿಂಬದಂತೆ. ಕನ್ನಡಿಯಲ್ಲಿ ಕಾಣುವ ಬಿಂಬದಲ್ಲಿ Space ಇರುವ ಹಾಗೆ ಕಾಣುತ್ತದೆಯೇ ಹೊರತು, ಕನ್ನಡಿಯನ್ನು ಮುಟ್ಟಿನೋಡಿದರೆ, ಅಲ್ಲಿ Space ಇರುವುದಿಲ್ಲ. ಕನ್ನಡಿ, ಕನ್ನಡಿಯ ಬಿಂಬ ನಿಮಗೆ Spaceನ ಭ್ರಮೆಯನ್ನು ತೋರಿಸುತ್ತದೆಯೇ ಹೊರತು ವಾಸ್ತವವನ್ನಲ್ಲ.

ಹಾಗೆಯೇ ಚಿತ್ರಕಲೆಯಲ್ಲಿ ಕಾಣುವ Space ಕೂಡ ಭ್ರಮಾತ್ಮಕವೇ ಹೊರತು ವಾಸ್ತವವಲ್ಲ. ಎಲ್ಲರೂ ಕರೆಯುವ Realistic Painting ನಿಜವಾದ ಅರ್ಥದಲ್ಲಿ Realistic Painting ಆಗಿರುವುದಿಲ್ಲ. ಅದು ವಾಸ್ತವದ ಭ್ರಮೆಯನ್ನು ಚಿತ್ರಿಸಿರುತ್ತದೆ. Realistic Painting ಅಂದರೆ, ಅದಕ್ಕೆ ಉದ್ದ-ಅಗಲ (Two Dimension) ಮಾತ್ರ ಇರುತ್ತದೆಯೇ ಹೊರತು Space ನ ಭ್ರಮೆ ಇರುವುದಿಲ್ಲ. ಈ ವ್ಯತ್ಯಾಸಗಳನ್ನು ಚಿತ್ರಿಸಲು ಈಚೆಗೆ ಪ್ರಯತ್ನಿಸುತ್ತಿದ್ದೇನೆ. ಈ ಪ್ರಯತ್ನ ನನ್ನ ಚಿತ್ರಗಳ ಒಂದು ಅಂಶ ಮಾತ್ರ.

ಆನಂದಮೂರ್ತಿ : ಬೌದ್ಧಧರ್ಮವನ್ನು ಕುರಿತು ಈಚೆಗೆ ನೀವು ಹೆಚ್ಚು ಧ್ಯಾನಿಸುತ್ತಿದ್ದೀರಿ. ಬೌದ್ಧಧರ್ಮದ ತತ್ತ್ವಗಳು ನಿಮ್ಮ ಸೃಜನಶೀಲತೆಯನ್ನು ಹೇಗೆ ಪ್ರಭಾವಿಸಿವೆ?

ಶಿವಪ್ರಸಾದ್ : ಬೌದ್ಧಧರ್ಮ ಬೇರೆ, ತತ್ತ್ವಶಾಸ್ತ್ರ ಬೇರೆ (Philosophy). ಬುದ್ಧನ ತತ್ತ್ವ ವಿಶ್ವದ ನಿರಂತರ ಚಲನಶೀಲತೆಯನ್ನು ಪ್ರತಿಪಾದಿಸುತ್ತದೆ. ಈ ನಿರಂತರ ಚಲನೆಯ ಆಧಾರದ ಮೇಲೆ ಬುದ್ಧ ತನ್ನೆಲ್ಲ ತತ್ತ್ವಗಳನ್ನು ವಿವರಿಸಿದ್ದಾನೆ. ಇದು ನಿರಂತರ ಚಲನೆಯ ಆಧಾರದ ಮೇಲೆ ನಿಂತಿರುವ ತತ್ತ್ವವಾದ್ದರಿಂದ, ಇದು ಸದಾ ಕಾಲಕ್ಕೂ ಅನ್ವಯಿಸುತ್ತದೆ. ಆದ್ದರಿಂದ ನನಗೆ ಬುದ್ಧನ ತತ್ತ್ವಗಳೇ ಬೇರೆಲ್ಲ ತತ್ತ್ವ-ಸಿದ್ಧಾತಂಗಳಿಗಿಂತ ಹೆಚ್ಚು ವಾಸ್ತವ ಎನಿಸಿದೆ.

ಬೌದ್ಧಧರ್ಮ ತತ್ತ್ವಗಳ ಆಧಾರದ ಮೇಲೆ ನಿಂತಿರುವ ಸಾಮಾಜಿಕ ವ್ಯವಸ್ಥೆ. ಈ ಧರ್ಮ ಈಗಿರುವ ಎಲ್ಲ ಧರ್ಮಗಳಿಗಿಂತ ಹೆಚ್ಚು ಪ್ರಜಾಸತ್ತಾತ್ಮಕವಾದದ್ದು. ಇಡೀ ಜಗತ್ತು ಚಲನಶೀಲತೆಯಿಂದ ಕೂಡಿರುವುದರಿಂದ, ಶೇಕಡಾ ನೂರರಷ್ಟು ಪ್ರಜಾಪ್ರಭುತ್ವ ಎನ್ನುವುದು ಎಲ್ಲೂ ಇಲ್ಲ. ಎಲ್ಲ ಧರ್ಮಗಳಿಗಿಂತ ಆಯ್ಕೆಯ ಅವಕಾಶ ಬೌದ್ಧಧರ್ಮದಲ್ಲಿ ಹೆಚ್ಚು ಇದೆ. ಅಂದರೆ ಹೆಚ್ಚು ಸ್ವಾತಂತ್ರ್ಯ ಇದೆ ಎಂದೇ

ಅರ್ಥ. ಇಲ್ಲಿ ಎಲ್ಲರಿಗೂ ಸಮಾನವಾದ ಅವಕಾಶಗಳಿವೆ. ಆದ್ದರಿಂದಲೇ ಬೌದ್ಧಧರ್ಮ ಸಮಾಜದಲ್ಲಿ ನ್ಯಾಯಾಲಯದ ನ್ಯಾಯದ ಜೊತೆಗೆ ಸಾಮಾಜಿಕ ನ್ಯಾಯವನ್ನೂ ಪ್ರತಿಪಾದಿಸುತ್ತದೆ.

ಬುದ್ಧನ ತತ್ತ್ವಗಳು ಸಾರ್ವತ್ರಿಕವಾದದ್ದರಿಂದ, ನಿರಂತರ ಚಲನೆಯೇ ನನ್ನ ಚಿತ್ರಗಳ ಅಡಿಪಾಯ. ಕುವೆಂಪು ಅವರ 'ಅನಿಕೇತನ' ಕವಿತೆಯ ಪ್ರತಿಯೊಂದು ಶಬ್ದ ಕೂಡ ನಿರಂತರ ಚಲನೆಯನ್ನು ಪ್ರತಿಪಾದಿಸುತ್ತದೆ. ನನ್ನ ಕಲಾಕೃತಿಗಳೂ ಕೂಡ ಈ ಜಾಡಿನಲ್ಲಿ ಸಾಗುತ್ತಿವೆ ಎಂದು ನಾನು ದೃಢವಾಗಿ ಭಾವಿಸಿದ್ದೇನೆ.

□

ಜಿ.ವಿ. ಆನಂದಮೂರ್ತಿ
'ಅಕ್ಕರೆ' ನೇತಾಜಿ ರಸ್ತೆ, ವಾಟರ್‌ಟ್ಯಾಂಕ್ ಪೂರ್ವಭಾಗ, ವಿದ್ಯಾನಗರ, ತುಮಕೂರು-೫೭೨೧೦೩

# ನಾನು ಮತ್ತು ಅವಳು

ಮುಳ್ಳೂರು ನಾಗರಾಜ

ಒಂದು ವಿಷಾದದ ಬಟ್ಟಲಿನಿಂದ
ವಿಷವನ್ನು ಸುರಿದಿದ್ದೇನೆ ನಿನ್ನೆಡೆಗೆ
ನಿನ್ನ ಹೃದಯ ಪ್ರೇಮಾಮೃತದ ಬಟ್ಟಲು
ವಿಷವೆಲ್ಲ ಅಮೃತವಾಗಿ ಬೆಳದಿಂಗಳ
ಬೀದಿಗಳಲ್ಲಿ ಚೆಲ್ಲಿಕೊಂಡಿದೆ!

ನಿನ್ನ ಪ್ರೇಮದ ನುಡಿಗಳಿಂದ
ನನ್ನೊಳಗಿನ ವಿಷ ಇಂಗಿ ಹೋಗಿದೆ
ಕೇವಲ ಒಂದು ಸ್ಪರ್ಶದಿಂದ
ನಾನು ಪಾವನಗೊಳ್ಳುತ್ತೇನೆ
ಕಾಲವೆಂಬ ಕನಸಿನ ಕನ್ಯೆ
ನನ್ನನ್ನು ಸೆಳೆದೊಯ್ಯಲು ಬಂದರೂ
ಬಿಡಲಿಲ್ಲ ನೀನು ನನ್ನನ್ನು
ನಿನ್ನ ಹೃದಯದ ಪ್ರೇಮದ
ಚಿಪ್ಪಿನಲ್ಲಿ ಬಚ್ಚಿಟ್ಟುಕೊಂಡಿರುವೆ
ಕಾಲದ ಕೆರಗಳು ತಾಕದ ನಿನ್ನ

ಹೃದಯ ಸರೋವರದಲ್ಲಿ
ನಾನು ಬೆಚ್ಚಗೆ ಮುಳುಗಿರುವೆ
ನಿನ್ನ ಸವಿಯ ಕೋಮಲತೆಯ
ಮನಸ್ಸಿನಲ್ಲಿ ಸೂರ್ಯಕಿರಣಗಳು
ಮುಟ್ಟದ ಕತ್ತಲೆಯಲ್ಲಿ
ಅಗಾಧ ಪ್ರಕೃತಿಯ
ನಿರಂತರ ಸಂತೋಷದಲ್ಲಿ
ನಾನು ಅರಳುತ್ತಲೇ ಇರುವೆ
ಇದಕ್ಕೆ ಕೊನೆಯೂ ಇಲ್ಲ
ಮೊದಲೂ ಇಲ್ಲ!

ದ್ವೇಷ ಈರ್ಷ್ಯೆ ಮತ್ಸರಗಳೆಂಬ
ಮಾಟಗಾತಿಯರ ಆಲಿಂಗನದಲ್ಲಿ
ಕೋಪೋದ್ರಿಕ್ತ ಸಂಕಟಗಳಲ್ಲಿ
ಮುಳುಗಿರುವ ನನ್ನನ್ನು
ತನ್ನೆಡೆಗೆ ಸೆಳೆದುಕೊಂಡು
ಪ್ರೇಮದಲ್ಲಿ ಮುಳುಗಿಸಿದ
ನಿನ್ನನ್ನು ಮರೆಯಲಾರೆ!

ದಿಕ್ಕು ತಪ್ಪಿದ ನನಗೆ
ದಿಕ್ಕಾಗಿರುವ ನಿನ್ನ ಸುಕೋಮಲ ಮೌನ
ನನಗೆ ತುಂಬಾ ಇಷ್ಟ
ಕಷ್ಟಗಳ ಕಡಲಿಂದ
ಸುಖದ ಕಡಲಿಗೆ ಎತ್ತಿ
ಎಸೆದ ನಿನ್ನ ಉದಾರತೆಗೆ
ಸಮನಾದದ್ದು ಬೇರೆ ಇಲ್ಲ!

ನೀನೀಗ ಹೊಸಬಳು ನಿಜ
ಬಹು ಹಳಬಳಂತೆ ಗೋಚರಗೊಳ್ಳುವೆ
ಎಷ್ಟೋ ಕಾಲದ ಗೆಳತಿಯಂತೆ
ಎಲ್ಲೂ ನಿಲ್ಲದ ಚಿಲುಮೆಯಂತೆ
ನನ್ನನ್ನು ಎಲ್ಲ ದಿಕ್ಕುಗಳಿಂದ
ಆವರಿಸಿಕೊಳ್ಳುತ್ತಿರುವೆ

ಏಕಾಂತದ ಬೀದಿಗಳಲ್ಲಿ
ಬಾಚಿ ತಬ್ಬಿಕೊಳ್ಳುತ್ತಿರುವೆ
ನನ್ನ ಕವಿತೆಯ ಆಪ್ತ ಸಾಲುಗಳಲ್ಲಿ
ನೀನು ಕರಗಿ ಹೋಗಿರುವೆ!

□

ಮುಳ್ಳೂರು ನಾಗರಾಜ
ಮುಳ್ಳೂರು, ನಂಜನಗೂಡು ತಾಲ್ಲೂಕು, ಚಾಮರಾಜನಗರ ಜಿಲ್ಲೆ

# ಶರೀಫಜ್ಜ ನಮ್ಮ ಪೂರ್ವಿಕ

ರಾಜಪ್ಪ ದಳವಾಯಿ

'ಸಣ್ಣ ಹುಡುಗಿಯೆ ನಿನ್ನ ಬಣ್ಣಿಸಲಸಲಳವೆ...' ಎಂದು ನನ್ನಜ್ಜ ಕಾಟೀರ ಬಸಪ್ಪ ಹಾಡುತ್ತಿದ್ದನೆಂದರೆ, ಆತನ ಗೆಳೆಯರೆಲ್ಲರೂ ಮೈದುಂಬಿ ಕೇಳಿ, ಮೆಚ್ಚಿ ಉತ್ಸಾಹ ತುಂಬುತ್ತಿದ್ದರು. 'ಹೋಗುತಿಹುದು ಕಾಯಾ ವ್ಯರ್ಥಾ...' ಎಂದು ಮತ್ತೊಬ್ಬರು ಸುರು ಮಾಡುತ್ತಿದ್ದರೆ, ಮಲ್ಡೆಜ್ಜ ಬಂಗಿಸೊಪ್ಪು ತಿಕ್ಕಿ ಚಿಲುಮೆ ರೆಡಿ ಮಾಡುತ್ತಿದ್ದ. ಬೆಂಕಿ ಹಚ್ಚಿ ಒಂದು ರೌಂಡ್ ಸೇವೆ ಆಯಿತೆಂದರೆ ಒಬ್ಬ 'ಹ್ಯಾಂಗ ಬಳಕಿ ಮಾಡಬೇಕಣ್ಣಾ...' ಪದವನ್ನೂ ಮತ್ತೊಬ್ಬ 'ನಗೆಯು ಬರುತಿದೆ ಜಗದಾಟವ ನೋಡಿ...' ಇನ್ನೊಬ್ಬ 'ಮೂಕನಾಗಿರಬೇಕೋ ಈ ಜಗದೊಳು...' ಮುಂತಾಗಿ ಹಾಡುಗಳ ಗಾಯನ ನಡೆಯುತ್ತಿತ್ತು. ಇಂಥ ಹಾಡುಗಳ ಕಾರ್ಯಕ್ರಮವಿದೆಯೆಂದರೆ, ನಮ್ಮ ಹಟ್ಟಿ ಅದರಲ್ಲೂ ನಮ್ಮ ಮನೆ ವಿಶೇಷ ರಂಗಿನಿಂದ ಕೂಡಿರುತ್ತಿತ್ತು. ನಮಗಂತೂ ಕಲ್ಲು ನೀರು ಕರಗೋ ಹೊತ್ನಲ್ಲಿ ಮಾಂಸದ ಊಟ ಸಿಗುತ್ತದೆಂಬ ಊಹೆ. ನಮ್ಮ ಯಮಯಾಪಿ ನಿದ್ದೆ ಆ ಊಟದ ಸವಿಯನ್ನೂ ಹಾಳು ಮಾಡುತ್ತಿತ್ತು. ಮುದ್ದೆಗಿಂತ ನಿದ್ದೆಗೇ ಪ್ರಾಶಸ್ತ್ಯ, ಅಧಿಕವಾಗಿ ಕೆಲವ್ರೊಮ್ಮೆ ಊಟದ ಬದಲಿಗೆ ಏಟುಗಳೇ ಅಧಿಕ ಆಗುತ್ತಿದ್ದವು. ಈ ಪದಗಳೆಲ್ಲ ನಮ್ಮ ಅಜ್ಜಂದಿರೇ ಕಟ್ಟಿ ಹಾಡಿದವೆಂಬುದೇ ನನ್ನ ಭಾವನೆ ಅಂದು. ಅವೆಲ್ಲ ಕ್ಯಾಸೆಟ್ಟಾಗಿ ಬಂದ ಮೇಲೆ, ನಾನು ಪದೇ ಪದೇ ಕೇಳಹತ್ತಿದ ಮ್ಯಾಲೆ ಶಿಶುನಾಳ ಅನ್ನೋನು ಬರೆದಿರೋದು, ಶರೀಫ ಅಂತ ಒಬ್ಬ ಅದನೆ ಅಂತ ಗೊತ್ತಾತು.

ನಮ್ಮ ಹೋಬಳಿ ಶಿವನಿ. ಅಲ್ಲಿ ಧಾರವಾಡ ರಂಗಣ್ಣನ ಹೋಟೆಲು ತುಂಬಾ ಫೇಮಸ್ಸು. ಆ ಹೋಟಲಿಗೆ ರಂಗಣ್ಣನ ಹೋಟಲು, ಧಾರವಾಡನ ಹೋಟಲು, ಶರೀಫನ ಹೋಟಲು

ಎಂಬ ಭಿನ್ನ ನಾಮಗಳಿದ್ದವು. ರಂಗಣ್ಣ ಶರೀಫನ ಪರಮಭಕ್ತ. ಬಾಯಲ್ಲಿ ಪುಂಖಾನುಪುಂಖವಾಗಿ ಶರೀಫರ ಗೀತೆಗಳನ್ನು ಹೇಳುತ್ತಿದ್ದ. ಅವನ ಕಾಯಕವೇ ಅವನಿಗೆ ಸತ್ಸಂಗ. ಇವೆಲ್ಲ ನಾನು ಬಾಲ್ಯದಲ್ಲಿ ಕಂಡುಂಡ ಅನುಭವಗಳು. ಶಿಶುನಾಳ ಶರೀಫನೆಂಬ ಜ್ಞಾನದ ಘನ ಹೀಗೆ ನಮ್ಮ ಪೂರ್ವಿಕನಾಗಿದ್ದ. ನಮ್ಮ ಪರಂಪರೆಯ ಭಾಗವಾಗಿದ್ದ ನಮ್ಮ ಜನರ ಸತ್ಸಂಗದ ಒಂದು ಗುಪ್ತಾಚರ ಪದ್ಧತಿಯನ್ನು "ಕಾರ್ಯ" ಎಂದು ಕರೆಯುತ್ತಾರೆ. ಇದು ತಮ್ಮದೇ ಆದ ಸುದ್ದಿ ಜಾಲ ಹೊಂದಿರುತ್ತದೆ. ಒಬ್ಬ ಗುರು ಇರುತ್ತಾನೆ. ಆತನ ನೇತೃತ್ವದಲ್ಲಿ ಸೇರುವ ಈ ಕೂಟ ಎಲ್ಲ ಜಾತಿಯವರನ್ನೂ ಒಳಗೊಂಡಿರುತ್ತದೆ. ಲಿಂಗಭೇದ, ಜಾತಿಭೇದಗಳಿಲ್ಲದ ಮಧ್ಯರಾತ್ರಿಯಿಂದ ನಡೆದು ಬೆಳಗಿನೊಂದಿಗೆ ಲೀನವಾಗುವ ಈ ಪರಿ ಇಂದಿಗೂ ಜೀವಂತ. ಸಹಪಂಕ್ತಿ ಭೋಜನ, ಮಾಂಸದೂಟ, ಆತ್ಮ ಪರಮಾತ್ಮನ ಚಿಂತನೆ, ದೇಹನಶ್ವರತೆ, ತಾವು ದೈನಂದಿನ ಬದುಕಿನಲ್ಲಿ ಮಾಡುತ್ತಿರುವ ಭಿನ್ನ ಭೇದಗಳ ಪರಿಶೀಲನೆ, ಅಂತಿಮವಾಗಿ ಮನುಷತ್ವದ ವಿವೇಚನೆ ಇಡೀ ಕಾರ್ಯದ ಮುಖ್ಯ ಜಿಜ್ಞಾಸೆ. ಇದಕ್ಕೆ ಪೂರಕವಾಗಿ ತತ್ವಪದಗಳ ಗಾಯನ ಮತ್ತು ಅವುಗಳ ವಿಮರ್ಶೆ. ಈ ನಿಟ್ಟಿನಲ್ಲಿ ಶಿಶುನಾಳ ಶರೀಫನ ತತ್ವಪದಗಳ ಸಾಮೀಪ್ಯ ಇವೆಲ್ಲ ಒಂದು ಜೀವನದ ಹೊಸ ವಿವೇಚನೆಗೆ ಕಾರಣವಾಗಿರುತ್ತವೆ.

ನಾನು ಎಂ.ಎ., ವ್ಯಾಸಂಗಕ್ಕೆ ಬಂದ ಮೇಲೆ ಶಿಶುನಾಳ ಶರೀಫ ಕುತೂಹಲ ಕೆರಳಿಸಿದ. ಕನ್ನಡ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ಇವನ್ನೂ ಮುಖ್ಯ ಎಂಬುದು ಮನವರಿಕೆಯಾಯಿತು. ಇಸ್ಲಾಂ ಸಂಬಂಧವಾಗಿ ಕನ್ನಡ ಸಾಹಿತ್ಯ ಪಡೆದ ಹೊಸ ರೂಪಕ್ಕೆ ಸಾಕ್ಷಿಯಾಗಿ ಪಾಠ ಕೇಳಿದ್ದಿದೆ. ನಂತರ ವಿಶ್ವಕನ್ನಡ ಸಮ್ಮೇಳನಕ್ಕೆ ಶಿವಾನಂದ ಗುಬ್ಬಣ್ಣನವರ "ಬರಕೋ ಪದ ಬರಕೋ" ಎಂಬ ಸಂಕಲನ ಗ್ರಂಥ "ಶಿಶುನಾಳ ಶರೀಫರ ಗೀತೆಗಳು" ಎಂಬ ಹೆಸರಿನಲ್ಲಿ ಬಂದಿತು. ಈ ಗ್ರಂಥಗಳು ನನಗೆ ಹೆಚ್ಚು ಶರೀಫನ ವ್ಯಾಪಕ ಗ್ರಹಿಕೆಗೆ ಅವಕಾಶ ಮಾಡಿಕೊಟ್ಟವು. ನಂತರ ಲಕ್ಷ್ಮೀನಾರಾಯಣಭಟ್ಟ, ಶಿವಮೊಗ್ಗ ಸುಬ್ಬಣ್ಣ, ಸಿ. ಅಶ್ವತ್ಥರ ಟೀಮು ಕ್ಯಾಸೆಟ್ ತಂದು ಹೆಚ್ಚು ಪ್ರಸಿದ್ಧಿಗೊಳಿಸಿತು. ಆಮೇಲೆ ನಾಗಾಭರಣ 'ಸಂತ ಶಿಶುನಾಳ ಶರೀಫ' ಸಿನಿಮಾ ಮಾಡಿ ಇನ್ನೂ ವ್ಯಾಪಕ ಗ್ರಹಿಕೆಗೆ ಕಾರಣವಾದಂತೆ, ಈಗ ದಿನವೂ 'ಈಶ್ವರ ಅಲ್ಲಾ ನೀನೇ ಎಲ್ಲಾ' ಎಂಬ ಸೀರಿಯಲ್ ಮೂಲಕ ಶಿಶುನಾಳ ಶರೀಫ ಮನೆಮಾತಾಗಿದ್ದಾನೆ.

ಶಿಶುನಾಳ ಶರೀಫರ ಮಾತು ಬಂದಾಗ ಹೋಟೆಲ್ ರಂಗಣ್ಣ ಭಾವುಕನಾಗುತ್ತಿದ್ದ. ಅವ 'ಅಜ್ಜರ (ಶರೀಫರ) ಗ್ಯಾನದ ಮುಂದೆ ಜಗತ್ತಿಲ್ಲ ತಮ್ಮ' ಎನ್ನುತ್ತಿದ್ದ. ಅವರ ಗೀತೆಗಳ ಸಂಕಲನ ಬಂದಿದೆ. ನಾನು ಅದನ್ನು ನಮ್ಮಜ್ಜನಿಗೆ ತಂದು ಕೊಟ್ಟಿರುವೆ ಎಂದು ಹೇಳಲಾಗಿ, ಅವನು ನಮ್ಮ ಅಜ್ಜ ಕಾಟೀರ ಬಸಪ್ಪನನ್ನು ಕೇಳಲಾಗಿ, ನಮ್ಮಜ್ಜ ಜೀವಕ್ಕೆ ಹೆಚ್ಚಾಗಿ ಮುಡಿಪಿನಂತೆ ಇಟ್ಟುಕೊಂಡ ಆ ಕೃತಿ ಕೊಡಲು ನಿರಾಕರಿಸಲಾಗಿ, ರಂಗಣ್ಣ ನಮ್ಮಜ್ಜನನ್ನು ಆಗಾಗ ಘೋರವಾಗಿಯೇ ಬೈಯುತ್ತಿದ್ದನು. ನಾನು ಸಮಾಧಾನಿಸಿ ನಿನಗೊಂದು ಪ್ರತ್ಯೇಕ ಪುಸ್ತಕ ತಂದುಕೊಡುವೆ ಎಂದು ಭರವಸೆ ನೀಡಿ ಸಮಾಧಾನಿಸುತ್ತಿದ್ದೆ. ಮತ್ತ್ಯಾವಾಗಲೊ ಬರಿಗೈಲಿ ಸಿಕ್ಕಿ ಫಜೀತಿ ಪಟ್ಟಿದ್ದೆ. ಒಮ್ಮೆ

ಪ್ರತಿಜ್ಞೆಗೈದು 'ಬರಕೋ ಪದ ಬರಕೋ' ಪುಸ್ತಕವನ್ನು ಬೆಂಗಳೂರಿನ ಉಪ್ಪಾರಪೇಟೆ ಪೋಲಿಸ್ ಸ್ಟೇಷನ್ ಪಕ್ಕದ ಸೆಕೆಂಡ್‌ಹ್ಯಾಂಡ್ ಪುಸ್ತಕ ರಾಶಿಯಲ್ಲಿ ಕಂಡು ದುತ್ತನೆ ರಂಗಣ್ಣ ನೆನಪಾಗಿ ೫೦ ರೂಪಾಯಿಯ ರೇಟನ್ನು ೨೦ ರೂಪಾಯಿಗೆ ಪಡೆದು, ಈ ಪುಸ್ತಕ ಕೊಟ್ಟಾಗ ರಂಗಣ್ಣ ಖಂಡಿತ ನನಗೆ ಸ್ಪೆಷಲ್ ಖಾಲಿ ದೋಸೆ ಕೊಟ್ಟೇ ಕೊಡುತ್ತಾನೆಂದು ಎಂದೊ ಒಂದು ದಿನ ಅವನ ಹೋಟಲ್ ಪ್ರವೇಶಿಸಿದರೆ, ರಂಗಣ್ಣ ಗುರುಗೋವಿಂದನ ಪಾದ ಸೇರಿದ ದ್ಯೋತಕವಾಗಿ ಅವನ ಹೆಂಡತಿ ಮಕ್ಕಳು ಆತನ ಫೋಟೋವನ್ನು ಹೋಟೆಲ್‌ನಲ್ಲಿಟ್ಟು ಅದಕ್ಕೊಂದು ಮಬ್ಬು ಬೆಂಡಿನ ಹಾರ ಹಾಕಿದ್ದರು. ಅವನ ಹೆಂಡತಿ ನಿಮ್ಮ ಬಗ್ಗೆ ಭಾಳ ಕೇಳುತ್ತಿದ್ದರು, 'ತಮ್ಮನಿಗೆ ಅಜ್ಜನ ಪುಸ್ತಕ ಸಿಕ್ಕಲೇ ಇಲ್ವೇನೊ' ಎನ್ನುತ್ತಲೇ ಇದ್ದರು. ಎಂದೆಲ್ಲಾ ಹೇಳುತ್ತ ಗಂಡನ ನೆನಪನ್ನು ಮರುಕಳಿಸಿಕೊಂಡು ಬಿಕ್ಕಳಿಸತೊಡಗಿದಳು. ಕಿರಿಮಗ, ಸಂತೆ ವಡೆ ತಂದಿಟ್ಟ 'ಅಣ್ಣ ಟೀ ಮಾಡಲೊ, ಕಾಫಿ ಮಾಡಲೊ' ಎಂದ. 'ಯಾವುದಾದ್ರೂ ಕೊಡಪ್ಪಾ' ಎಂದೆ. ನಾನು ಶರೀಫನೆಂಬ ಘನವನ್ನು ಪುಸ್ತಕ ರೂಪಿಯಾಗಿ ಒಯ್ಯುವ ಹೊತ್ತಿಗೆ ಧಾರವಾಡ ರಂಗಣ್ಣ ಫೋಟೋವೆಂಬ ಘನದಲ್ಲಿ ಚಿತ್ರರೂಪಿಯಾಗಿದ್ದ. ಮತಿರೂಪದಲ್ಲಿ ಶರೀಫನನ್ನು ಜೀವಂತವಾಗಿಟ್ಟುಕೊಂಡಿದ್ದವರ ಬಗ್ಗೆ ನಮ್ಮಲ್ಲಿ ಪರಿಜ್ಞಾನ ಕಡಿಮೆ. ಬದುಕಿನಲ್ಲಿ ಶರೀಫನನ್ನು ಬದುಕಿದವರೇ ಹೆಚ್ಚು. ಏಕೆಂದರೆ, ಶರೀಫನಲ್ಲಿ ಒಣಚರ್ಚೆಗೆ ಅವಕಾಶವಿಲ್ಲ. ಮುಂದೆ ಸಾಹಿತ್ಯ ವಿಮರ್ಶೆಯಲ್ಲಿ ಹೂತು ಎಂಥೆಂಥದೋ ಚರ್ಚೆ ಮಾಡುವಾಗಲೆಲ್ಲ ನನಗೆ ಧಾರವಾಡ ರಂಗಣ್ಣ ಮನಸಿಗೆ ಬಂದು 'ತಮ್ಮ ಇದೆಂಥ ಚರ್ಚೆಪ. ಅಜ್ಜ ಹಿಂಗೆಲ್ಲ ಮಾಡ್ರಪ ಅಂತ ಎಲ್ಲಿ ಹೇಳಿದನಪ?' ಎಂದಾಗ, ನಮ್ಮ ಪ್ರಾಯೋಗಿಕ ವಿಮರ್ಶೆಗಳೆಲ್ಲ ಪಾಠ ಮಾಡೋ ಮೇಸ್ಟ್ರ ಕಪ್ಪೆ ಕೊಯ್ಯೋ ಬುದ್ಧಿ ಆಗಿಬಿಡುವ ದುರಂತವನ್ನೂ ಮನಗಂಡೆ. ನಂತರ ರಹಮತ್ ತರೀಕೆರೆಯವರ 'ಕರ್ನಾಟಕದ ಸೂಫಿಗಳು' ಕೃತಿ ಓದಿದ ಮೇಲೆ ರಂಗಣ್ಣ ಇನ್ನೂ ದೊಡ್ಡ ಸಂತನಾಗಿ ಕಂಡ. ಶರೀಫನನ್ನ ಓದಿ ತಿಳಿಯಲೊ, ತಿಳಿದು ಓದಲೋ, ಕ್ಯಾಸೆಟ್ಟಿನ ಶರೀಫನನ್ನು ಕೇಳಿ ತಿಳಿಯಲೊ, ಸಿನಿಮಾದ ಶರೀಫನನ್ನು ನೋಡಿ ತಿಳಿಯಲೊ ಎಂಬಂಥ ಪ್ರಶ್ನೆಗಳು ನನ್ನ ಮುಂದಿವೆ.

ನನ್ನ ದೃಷ್ಟಿಯಲ್ಲಿ ಶರೀಫನನ್ನು ಓದುವುದೆಂದರೆ, ಕರ್ನಾಟಕದ ಜನಜೀವನವನ್ನು ಓದುವುದೆಂದೇ ಅರ್ಥ. ಕಾರಣ ಶರೀಫ ಕೇವಲ ಪದಗಳಲ್ಲಿಲ್ಲ. ಪದಗಳನ್ನು ಜೀರ್ಣಿಸಿಕೊಂಡು ಬದುಕುತ್ತಿರುವ ಬದುಕಿನಲ್ಲಿದ್ದಾನೆ. ನಿಚ್ಚತನದ ಬದುಕಿನಲ್ಲಿ ತಮ್ಮೊಳಗೇ ಲವಣಗೊಳಿಸಿಕೊಂಡಿರುವ ಶರೀಫನನ್ನು ಪ್ರತ್ಯೇಕಿಸಲು ಸಾಧ್ಯವೇ ಇಲ್ಲ. ನನ್ನ ಮನೆಯ ಅಂಗಳಕ್ಕೆ ಶರೀಫನನ್ನು ತಂದ ನನ್ನ ಜನರ ಜೀವನದರ್ಶನ ಎಷ್ಟೊಂದು ದೊಡ್ಡದು. ಬಾಲ್ಯದಲ್ಲಿ ಕೇಳಿದ ಆ ತತ್ವಪದಗಳ ಸಂಗೀತ ವಿನ್ಯಾಸ ಓದಿನ ಪಠ್ಯವಾಗಿ, ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿ, ಅಧ್ಯಾಪಕನಾಗಿ ನಾನು ಶುಷ್ಕಗೊಳಿಸುತ್ತಿರುವ ಶರೀಫನಿಗೆ ಚೈತನ್ಯರಾಹಿತ್ಯಗೊಳಿಸಿದ್ದ ನನ್ನ ಅಕ್ಷರದ ಅಹಂಕಾರಕ್ಕೆ ನಾಶ ಯಾವಾಗ? ಅಕ್ಷರ ಲಯವಾಗದೆ ಜೀವನದ ಲಯ ಸಿಗದಿರುವ ಬಿಕ್ಕಟ್ಟಿನಲ್ಲಿ ನನ್ನ ಆಯ್ಕೆ ಯಾವುದು? ಬಾಲ್ಯದ ನೆನಹು ಇಂದಿನ ರೂಹವನ್ನು ನುಂಗಿದಡೆ ಶರೀಫನ ಸಾಕ್ಷಾತ್ಕಾರವುಂಟು. ಬಾಲ್ಯದ ಲಯವನ್ನು ಅಕ್ಷರ ನುಂಗಿದಡೆ ಅಹಂಕಾರ ನೆರೆಗೊಂಡಿತ್ತು ನೋಡಾ! ಇವೆರಡರ

ಸಂಕ್ರಮಣದೊಳಗೆಲ್ಲೋ ಶರೀಫನ ಹುಡುಕಾಟಕ್ಕೆ ನಿರಂತರ ತೊಡಗಿರುತ್ತೇನೆ. ಅಲ್ಲಿ ಸಣ್ಣ ಹುಡುಗಿ ದೊಡ್ಡವಳಲ್ಲ. ಕಾಯ ವ್ಯರ್ಥವಲ್ಲ. ಜಗದೊಳು ಮೂಕವಾಗಿರಲು ಬಾರದಯ್ಯ. ಕಳೆದ ನಲವತ್ತು ವರ್ಷಗಳಿಂದಲೂ ನಾನು ಶರೀಫನನ್ನು ಅರ್ಥೈಸಿಕೊಳ್ಳಲು ಯತ್ನಿಸುತ್ತಲೇ ಇದ್ದೇನೆ. ರೂಹು ಪಡೆದು ಅರ್ಥ ನನ್ನದಾಯಿತೆನ್ನುತ್ತಿದ್ದಂತೆಯೆ ಅರಿತೆನೆಂಬ ಅಗ್ನಿಯಲ್ಲಿ ಅರ್ಥದ ಕಾಯ ಕರ್ಪೂರದಂತೆ ಕರಗಿ ಕಣ್ಣೆದುರಿಗೇ ಅರ್ಥದ ರಚನೆಗಳು ಇಲ್ಲವಾಗುತ್ತವೆ. 'ಬಿದಿರು ನಾನಾರಿಗಲ್ಲದವಳು' ಎಂಬ ಪದದಂತೆ ಶರೀಫ ಎಲ್ಲರಿಗೂ ಆಗುವವನು; ಎಲ್ಲದಕ್ಕೂ ಆಗುವವನು. ಅವನ ಲಯವೊಂದು ನಮ್ಮ ಜೀವನದೊಳಗೆ ಮಿದ್ದುಕೊಂಡಿರುವ ಹದವನ್ನು ಬೇರ್ಪಡಿಸಲೂ ಆಗದು; ತೋರಲೂ ಆಗದು. ಶರೀಫನನ್ನು ಬದುಕಿ ಗೊತ್ತಿರುವ ನನ್ನ ಪರಿಸರ ನನ್ನ ನ್ನು ರೂಪಿಸಿದ ಬಗೆಗೆ ಸಲಾಂ ಸಲಾಂ! ಆದ್ದರಿಂದಲೇ ನಾನು ಶರೀಫನ ಬಗ್ಗೆ 'ಜವಾಬೊಂದು ನಿನ್ನ ಮ್ಯಾಲ ಶಾಹಿರಕ' ಎನ್ನುತ್ತಲೇ ಇರುತ್ತೇನೆ. ಶರೀಫನ ಪದಗಳು ಓದತೊಡಗಿದರೆ ಅರ್ಥವಾಗುವುದಿಲ್ಲ. ಅರ್ಥ ಮಾಡಿಕೊಳ್ಳತೊಡಗಿದರೆ ಓದು ವ್ಯರ್ಥ. ಬದಲಿಗೆ ಬದುಕುವವರಲ್ಲಿ ಓದೂ ಇದೆ ಅರ್ಥವೂ ಇದೆ. ಸಾಮಾನ್ಯ ಜನರು ಶರೀಫನನ್ನು ಸ್ವೀಕರಿಸಿಕೊಂಡಂತೆ ಪರಿಜ್ಞಾನದ ಓದು ಗ್ರಹಿಸಲು ಸಾಧ್ಯವಾಗಿಲ್ಲ. ಈ ದೇಶದ ಇಂದಿನ ಮತೀಯವಾದಕ್ಕೆ ಶರೀಫನನ್ನು ಜೀವಂತ ಇಟ್ಟುಕೊಳ್ಳದಿದ್ದರೆ, ದಾರಾಶಿಕೊನನ್ನು ಗ್ರಹಿಸದಿದ್ದರೆ ಅಪಾಯ ಹೆಚ್ಚಿದೆ. ಶರೀಫನನ್ನು ಜೀರ್ಣಿಸಿಕೊಂಡಿರುವ ನನ್ನ ಜನಸಮುದಾಯಕ್ಕೆ ಶರಣು. ಶರಣು. ಅಲ್ಲಿ ಯಾವ ಜಾತಿಗಳ ದೊಡ್ಡಸ್ತಿಕೆ, ಕೀಳರಿಮೆಗಳಿಲ್ಲ. ಮುಲ್ಲಾ ಪಿಂಜಾರ ಕುರಾನ್ ರಾಮಾಯಣಗಳ ಭೇದವಿಲ್ಲ. ಅಂತರವಿಲ್ಲದ ಅಂಥ ಬದುಕನ್ನು ಬದುಕುತ್ತಿರುವ ಜನಸಮುದಾಯಕ್ಕೆ ನಾವು ಹೇಳುವ ಪಾಠಗಳಾದರೂ ಯಾವಿವೆ? ಅಂಥ ಬದುಕಿನಿಂದ ನಾವು ಕಲಿಯಬೇಕಾದ್ದು, ತಿಳಿಯಬೇಕಾದ್ದು ಬಹಳಷ್ಟಿದೆ. ಆದ್ದರಿಂದ ಶರೀಫನ ಓದು ಒಕ್ಕಾಲಾಗಿ, ಜೀವನ ಮಿಳಿತ ತಿಳಿಯದಿದ್ದರೆ ಮುಕ್ಕಾಲು ನಷ್ಟವಾಗಿ ಶರೀಫನ ಅರ್ಥಲಯಗಳಾಗುವ ಸಂಭವಗಳೇ ಅಧಿಕ. ಆದ್ದರಿಂದ ನನ್ನ ಓದಿನ ಶರೀಫನಿಗಿಂತ ಬಾಲ್ಯದ ಲಯರೂಪಿ ಶರೀಫ ಇಂಡಿಯಾದ ಬದುಕಿಗೆ ಸಮಕಾಲೀನ ಕೋಮುವಾದಕ್ಕೆ ತುಂಬಾ ಅಗತ್ಯನಾದವನೆಂಬುದು ನನ್ನ ಸಾಮಾನ್ಯ ತಿಳಿವಳಿಕೆ.

□

---

ರಾಜಪ್ಪ ದಳವಾಯಿ
ಉಪನ್ಯಾಸಕ, ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾನಿಲಯ

# ವೊಲೆ ಸೊಯೆಂಕಾ

ಕೆ. ಚಿನ್ನಸ್ವಾಮಿ

ಆಫ್ರಿಕಾದ ಸಾಹಿತ್ಯದಲ್ಲಿ ಪ್ರಸಿದ್ಧರಾದ ಮೂವರು ಲೇಖಕರಲ್ಲಿ ಅಗ್ರಗಣ್ಯರೆಂದರೆ ವೊಲೆ ಸೊಯಿಂಕಾ. ಇತರ ಇಬ್ಬರೆಂದರೆ ಚಿನುವ ಅಚಿಬೆ ಮತ್ತು ಎನೌಗೊಗಿ ವಾ ತೋಂಗ್. ೧೯ನೇ ಶತಮಾನದಿಂದೀಚೆಗೆ ಸೊಯಿಂಕಾರವರ ಕೃತಿಗಳು ನೈಜೀರಿಯಾದಿಂದ ಆಚೆ ಹೆಚ್ಚು ಜನಪ್ರಿಯವಾಗಿದೆ. ೧೯೮೬ರಲ್ಲಿ ದೊರೆತ ನೊಬೆಲ್ ಪ್ರಶಸ್ತಿ ಅವರನ್ನು ವಿಶ್ವದ ಲೇಖಕರ ಸಾಲಿನಲ್ಲಿ ತಂದು ನಿಲ್ಲಿಸಿದೆ. ಆಫ್ರಿಕಾದ ಜನರ ಜೀವವೈವಿಧ್ಯತೆ, ಸುಪ್ರದಾಯ, ಆಚರಣೆ, ವಸಾಹತು ಅನುಭವ ಮುಂತಾದುವುಗಳನ್ನು ತಮ್ಮ ಬರವಣಿಗೆಯಲ್ಲಿ ಎಳೆ ಎಳೆಯಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಇಪ್ಪತ್ತು ನಾಟಕಗಳು, ಎರಡು ಕಾದಂಬರಿಗಳು, ಹಲವು ಬಾನುಲಿ ನಾಟಕಗಳನ್ನು ಬರೆದಿದ್ದಾರೆ.

೧೩–೭–೧೯೩೪ರಂದು ಇಬೆಬು ಇಸರ ಎಂಬ ಪುಟ್ಟ ಊರಿನಲ್ಲಿ ಕ್ರೈಸ್ತ ಕುಟುಂಬದಲ್ಲಿ ಸೊಯಿಂಕಾ ಜನಿಸಿದರು. ಅವರ ಮಾತೃಭಾಷೆಯೇ ಇಂಗ್ಲೀಷ್ ಆಗಿತ್ತು. ಆದ್ದರಿಂದ ಸರಳವಾಗಿ ಮತ್ತು ನಿರರ್ಗಳವಾಗಿ ಬರೆಯುವ ಕಲೆ ಅವರಿಗೆ ಮೈಗೂಡಿ ಬಂದಿತು. ತಮ್ಮ ಬಾಲ್ಯದ ಅನುಭವವನ್ನು "Ake; The years of childhood" ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ತಮ್ಮ ಆತ್ಮಕಥೆ "Isara; A voyage Around Essay" ಯಲ್ಲಿ ತಮ್ಮ ತಂದೆ ಮತ್ತು ಹುಟ್ಟೂರಿನ ಬಗ್ಗೆ ಸವಿವರವಾದ ಮಾಹಿತಿ ನೀಡಿದ್ದಾರೆ. ಬಾಲ್ಯದಲ್ಲಿಯೇ ಆಫ್ರಿಕಾ ಜನರ ಆಚರಣೆ, ಸಂಪ್ರದಾಯ ಇತ್ಯಾದಿಗಳ ಬಗ್ಗೆ ಅಪಾರವಾದ ಕುತೂಹಲ ಹೊಂದಿದ್ದರು.

ತಮ್ಮ ಪ್ರಾಥಮಿಕ ಶಿಕ್ಷಣವನ್ನು ೧೯೩೮–೧೯೪೫ರವರೆಗೆ ಸ್ಥಳೀಯ ಶಾಲೆಯಲ್ಲಿ ಪೂರ್ಣಗೊಳಿಸಿ,

ಇಬದಾನ್ ಸರಕಾರಿ ಕಾಲೇಜಿನಲ್ಲಿ ಅಧ್ಯಯನ ಮಾಡಿ ನಂತರ ಲೀಡ್ಸ್ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗ ಮಾಡಿದರು. ಬಿ.ಬಿ.ಸಿ.ಗೆ ಹಲವಾರು ಬರಹಗಳನ್ನು ನೀಡಲು ಆರಂಭಿಸಿದರು. ಆ ಸಮಯದಲ್ಲೆ ತಾವೊಬ್ಬ ನಾಟಕಕಾರನಾಗಬೇಕೆಂದು ದೃಢಸಂಕಲ್ಪ ಮಾಡಿ ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು. ಆ ಮೂಲಕ ಆಫ್ರಿಕಾ ಜನಜೀವನವನ್ನು ತಮ್ಮ ನಾಟಕಗಳ ಮೂಲಕ ಅಭಿವ್ಯಕ್ತಗೊಳಿಸುವ ಮಹತ್ವಾಕಾಂಕ್ಷೆ ಹೊಂದಿದ್ದರು.

ಅವರ ವೃತ್ತಿಜೀವನದಲ್ಲಿ ಅವರು ಲೀಡ್ಸ್ ವಿಶ್ವವಿದ್ಯಾನಿಲಯ ಮತ್ತು ಲಂಡನ್‌ನಲ್ಲಿ ಕಳೆದ ಅವಧಿ ಬಹಳ ಮಹತ್ವಪೂರ್ಣ ಆಗಿದೆ. ಪ್ರಸಿದ್ಧ ವಿಮರ್ಶಕರಾದ ವಿಲ್ಸನ್ ನೈಟ್ ಸೊಯಿಂಕಾರವರ ಗುರುಗಳಾಗಿದ್ದರು. ಹಲವು ಪ್ರಕಾರಗಳಲ್ಲಿ ಅವರು ಸೊಯಿಂಕಾರವರಿಗೆ ಪ್ರೇರಣೆ ನೀಡಿದರು. ಅವರ ಪ್ರಭಾವವೇ "The Lion and The Jewel" ಮತ್ತು "The Fourth Stage" ಕೃತಿಗಳಲ್ಲಿ ಮೂಡಿಬಂದಿದೆ. ಲಂಡನ್‌ನಲ್ಲಿ ಅನೇಕ ಯುವ ಬರಹಗಾರರ ಪರಿಚಯ ಅವರಿಗಾಯಿತು. ಅವರಲ್ಲಿ ಪ್ರಮುಖರೆಂದರೆ John osborne, John Arden, Samuel Becket ಮತ್ತು Harold Pinter.

ನೈಜೀರಿಯಾಕೆ ಮರಳಿದ ನಂತರ ದೇಶಿಯ ನಾಟಕ ಪ್ರಕಾರಕ್ಕೆ ಹೊಸ ಆಯಾಮ ಕೊಡಲು ನಿರ್ಧರಿಸಿದರು. ತಮ್ಮದೆ ಆದ ನಾಟಕ ಕಂಪನಿಯನ್ನು ೧೯೬೦ರಲ್ಲಿ ಆರಂಭಿಸಿದರು. ನೈಜೀರಿಯಾದಲ್ಲಿ ಕಂಡುಬಂದ ರಾಜಕೀಯ ಅಶಾಂತಿಯ ಪರಿಣಾಮವಾಗಿ ಮೂರು ಪ್ರಮುಖ ನಾಟಕಗಳು ಹೊರಬಂದವು. ಅವುಗಳೆಂದರೆ "The Strong Bread", "The Road ಮತ್ತು Kongi's Harvest.

ಈ ನಾಟಕಗಳಲ್ಲಿ ಅಲ್ಲಿನ ಜನರ ಆಚಾರ-ವಿಚಾರಗಳನ್ನು ವಿಶ್ಲೇಷಿಸಿದ್ದಾರೆ. ರಾಜಕೀಯ ವಿದ್ಯಮಾನಗಳನ್ನು ಕುರಿತ ಬರಹಗಳಿಂದಾಗಿ ಅವರು ಎರಡು ವರ್ಷಗಳ ಕಾಲ ಕಠಿಣ ಸೆರೆವಾಸವನ್ನು ಅನುಭವಿಸಿದರು. ಆದರೆ ತಮ್ಮ ಸೃಜನಶೀಲತೆಯನ್ನು ಸೆರೆಯಾಗಿಸದೆ ಸೆರೆಮನೆಯಲ್ಲೇ ಹಲವು ನಾಟಕಗಳನ್ನು ರಚಿಸಿದರು. ಅವುಗಳೆಂದರೆ : "The man Died" "Open sore of continen" ಎಂಬ ನಾಟಕಗಳು ಮತ್ತು "A shuttle in the crypt". ಎಂಬ ಕವನ ಸಂಕಲನ. ಜನಾಂಗೀಯ ಕಲಹ ಕೂಡ ಹಲವು ನಾಟಕಗಳಿಗೆ ವಸ್ತುವಾಯಿತು. ಅವುಗಳಲ್ಲಿ ಹೆಸರಿಸಬಹುದಾದ ಕೃತಿಗಳೆಂದರೆ "Madmen ocud Specialists", The Bacchae of Euripides, Death and the kings Horse man, "The swamp, Dwellers" ಮುಂತಾದ ನಾಟಕಗಳು. 'ಯರುಬಾ' ಅಧ್ಯಾತ್ಮದ ಬಗ್ಗೆ ಹಾಗೂ ಹಳೆಯ ಮತ್ತು ಹೊಸ ತಲೆಮಾರಿನ ನಡುವೆ ಉಂಟಾದ ಗೊಂದಲ ಮತ್ತು ಸಂಪ್ರದಾಯಸ್ಥ ಜನರ ಹಾಗೂ ಸರಕಾರದ ನಡುವಿನ ಘರ್ಷಣೆಗಳ ಮೇಲೂ ಬೆಳಕು ಚೆಲ್ಲುತ್ತದೆ.

ಸ್ವಾತಂತ್ರ್ಯ ನಂತರ ಮಿಲಿಟರಿ ಆಡಳಿತವೇ ಬಹುಕಾಲ ಅಸ್ತಿತ್ವದಲ್ಲಿ ಇದ್ದುದ್ದರ ಫಲವಾಗಿ ಅಲ್ಲಿನ ಜನಜೀವನ ಅಸ್ತವ್ಯಸ್ತವಾಗಿತ್ತು. ಸರ್ವಾಧಿಕಾರಿಗಳ ದುರಾಡಳಿತವನ್ನು ಸೊಯೆಂಕಾರವರು

ತಮ್ಮ ನಾಟಕ ಹಾಗೂ ರಾಜಕೀಯ ಬರಹಗಳ ಮೂಲಕ ಖಂಡಿಸಲು ಆರಂಭಿಸಿದರು. "Opera wonyosi" ಮತ್ತು "A play of Giants" ಉಗಾಂಡದ ಸರ್ವಾಧಿಕಾರಿಗಳಾದ ಇದಿ ಅಮಿನ್. ಅಂತಹವರ ಬಗ್ಗೆ ಬೆಳಕು ಚೆಲ್ಲುತ್ತವೆ. ಧರ್ಮದ ಹೆಸರಿನಲ್ಲಿ ಜನರನ್ನು ವಂಚಿಸುವವರನ್ನು ಕುರಿತು ಕೂಡ ಸೋಯೆಂಕಾ ಹಲವು ಕೃತಿಗಳನ್ನು ರಚಿಸಿದ್ದಾರೆ.

ಗ್ರೀಕ್ ನಾಟಕಗಳ chorus ಮಾದರಿಯಲ್ಲಿ ಸೋಯಿಂಕಾ 'ಯರೂಬಾ' ಭಾಷೆಯನ್ನ, ಯರೂಬಾ ಸಂಸ್ಕೃತಿಯನ್ನು ಆಳವಾಗಿ ಅಧ್ಯಯನ ಮಾಡಿ ಯರೂಬಾ ದುರಂತ ನಾಟಕಗಳನ್ನು ರಚಿಸಿದರು.

"ಡೆತ್ ಅಂಡ್ ದ ಕಿಂಗ್ಸ್ ಹಾರ್ಸ್‌ಮನ್" ಸೋಯೆಂಕಾರವರ ನಾಟಕಗಳಲ್ಲಿ ಪ್ರಮುಖವಾದುದು. ಈ ನಾಟಕದ ಕಥಾ ವಸ್ತು ಸ್ಥಳೀಯ ಸಂಪ್ರದಾಯವಾದಿಗಳ ಮತ್ತು ಸರಕಾರದ ನಡುವಿನ ಘರ್ಷಣೆ. ಇಲಿಸನ್ ಓಬಾ ಗತಿಸಿದ ತಮ್ಮ ಬುಡಕಟ್ಟು ನಾಯಕನ ಗೌರವಾರ್ಥ ತನ್ನನ್ನು ತಾನು ಸಮರ್ಥಿಸಿಕೊಳ್ಳುವ ವಿಧಿವಿಧಾನದಲ್ಲಿ ತೊಡಗುತ್ತಾನೆ. ಅಂದರೆ ಬಿಳಿಯರ ಸರಕಾರದ ದೃಷ್ಟಿಯಲ್ಲಿ ಅದು ಆತ್ಮಹತ್ಯೆ. ಇದು ಅಲ್ಲಿಯ ಸರಕಾರದ ಧೋರಣೆಗೆ ವಿರುದ್ಧವಾದ ಆಚರಣೆ. ಬಿಳಿಯರ ಸರಕಾರ ಕರಿಯರ ಅಂಥ ಆಚರಣೆಗಳನ್ನು ನಿಷೇಧಿಸಿದ್ದ ಕಾಲವದು. ಕರಿಯರ ಮುಖವಾಡ ಧರಿಸಿದ ಉಡುಪು, ಆಚಾರವಿಚಾರ ಆಳುವ ಬಿಳಿಯರಿಗೆ ಅಪಹಾಸ್ಯವಾಗಿ ತೋರುತ್ತದೆ. ಇಲಿಸನ್ ಓಬಾ, ಆತ್ಮಸಮರ್ಪಣೆ ಹಾದಿಯಲ್ಲಿ ಯುವತಿಯೊಬ್ಬಳಲ್ಲಿ ಮೋಹಿತನಾಗುತ್ತಾನೆ. ಇದು ಅವನ ಕಡೆಯ ಆಸೆಯಾಗಿರುವುದರಿಂದ ಸ್ಥಳೀಯ ಜನರು ಶ್ರದ್ಧಾಭಕ್ತಿಯಿಂದ ಅವನ ಆಸೆಯನ್ನು ನೆರವೇರಿಸುತ್ತಾರೆ. ದಾರಿಯಲ್ಲಿ ಇಲಿಸನ್ ಓಬಾನನ್ನು ಪೋಲಿಸರು ಬಂಧಿಸುತ್ತಾರೆ. ಅವನ ಮನವೊಲಿಸಲು ಉನ್ನತ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ತೆರಳಿದ್ದ ಅವನ ಮಗ ಓಲುಂಡೆಯನ್ನು ಅಧಿಕಾರಿಗಳು ಕರೆಸಿದರೂ ಯಾವುದೇ ಪ್ರಯೋಜನವಾಗುವುದಿಲ್ಲ. ಪಾಶ್ಚಿಮಾತ್ಯ ಶಿಕ್ಷಣ ಪಡೆದರೂ ಒಲುಂಡೆ ತನ್ನ ಪೂರ್ವಿಕರ ಸಂಪ್ರದಾಯವನ್ನು ಬಿಡುವುದಿಲ್ಲ.

ಪೋಲಿಸ್ ಬಂಧನದಿಂದ ನಿಗಧಿಯಾದ ಸಮಯಕ್ಕೆ ತನ್ನನ್ನು ತಾನು ಸಮರ್ಪಿಸಿಕೊಳ್ಳಲು ವಿಫಲನಾದ ತನ್ನ ತಂದೆಯನ್ನು ಅವನು ಶಪಿಸುತ್ತಾನೆ. ಮತ್ತು ವಿರೋಚಿತವಾಗಿ ತಂದೆಯ ಸ್ಥಾನದಲ್ಲಿ ತಾನೇ ಆತ್ಮಸಮರ್ಪಣೆ ಮಾಡಿಕೊಳ್ಳುತ್ತಾನೆ. ಹಾಗೆ ಮಾಡದಿದ್ದರೆ ಪೂರ್ವಿಕರ ಕೋಪಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಅವನು ಭಾವಿಸಿದ್ದ. ಈ ಸುದ್ದಿ ತಿಳಿದ ಇಲಿಸನ್ ಓಬಾ ಸಹ ತನ್ನ ಕೈಸರಪಳಿಯಿಂದ ಸೆರಮನೆಯಲ್ಲೇ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಈ ಘಟನೆಗಳನ್ನು ಅತ್ಯಂತ ಸೂಕ್ಷ್ಮವಾಗಿ ಸೊಯೆಂಕಾ ಓದುಗರಿಗೆ ಮನಮುಟ್ಟುವಂತೆ ನಿರೂಪಿಸಿದ್ದಾರೆ.

'Road' ನಾಟಕವು ಹಲವಾರು ವಿಷಯಗಳಲ್ಲಿ ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿದೆ. ಪ್ರೊಫೆಸರ್ ಪಾತ್ರದ ಮೂಲಕ ದುರಾಸೆ, ವಂಚನೆ ಹಾಗೂ ಮೋಸ ಇತ್ಯಾದಿಗಳನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ. ಅಲ್ಲಿಯ ಜನರ ನಂಬಿಕೆಯಂತೆ ಕಾಲಕಾಲಕ್ಕೆ ರಸ್ತೆ ದೇವತೆಗೆ

ಬಲಿ ನೀಡಬೇಕಾಗಿತ್ತು. ರಸ್ತೆಯನ್ನು ಜನರು ದ್ವೇಷಿಸುತ್ತಿದ್ದರು. ರಸ್ತೆ ಅವರಿಗೆ ಸಾವಿನ ಪ್ರತಿರೂಪವಾಗಿತ್ತು. ಆದರೆ ಪ್ರೊಫೆಸರ್‌ರಂತಹ ಆಸೆಬುರುಕರಿಗೆ ರಸ್ತೆಯೇ ವರದಾನವಾಗಿತ್ತು. ರಸ್ತೆ ಬದಿಯಲ್ಲಿ ಅಂಗಡಿಯನ್ನಿಟ್ಟು ವಾಹನಗಳ ಬಿಡಿಭಾಗಗಳನ್ನು ಮಾರಲಾಗುತ್ತಿತ್ತು. ಆ ಅಂಗಡಿಯಲ್ಲಿದ್ದ ಬಹುತೇಕ ವಸ್ತುಗಳು ರಸ್ತೆ ಅಪಘಾತದಲ್ಲಿ ಕದ್ದು ತಂದ ಮಾಲುಗಳಾಗಿದ್ದವು. ಹಲವೊಮ್ಮೆ ಪ್ರೊಫೆಸರ್ ಖುದ್ದಾಗಿ ತಮ್ಮ ಸಹಚರರೊಂದಿಗೆ ಸೇರಿ ರಸ್ತೆಯ ಫಲಕಗಳನ್ನು ಬದಲಿಸಿ ಅಪಘಾತಗಳು ನಡೆಯುವಂತೆ ಮಾಡುತ್ತಿದ್ದ. ತನ್ನ ಅಂಗಡಿಗೆ ಅಪಘಾತದ ಅಂಗಡಿ ಎಂದು ನಾಮಕರಣ ಕೂಡ ಮಾಡಿಕೊಂಡಿದ್ದ. ಅಪಘಾತಕ್ಕೆ ಈಡಾದ ಚಾಲಕರ ಪರವಾನಗಿಗಳನ್ನು ಕದಿಯುತ್ತಿದ್ದ ಹಲವೊಮ್ಮೆ ಪರವಾನಗಿ ಮಾಡಿಸಿ ಕೊಡುವುದಾಗಿ ದಲ್ಲಾಳಿ ಕೆಲಸವನ್ನು ಮಾಡುತ್ತಿದ್ದ ವಾಹನ ಚಾಲಕರಿಗೆ ಕುಡಿಸಿ ಅಪಘಾತ ಉಂಟಾಗುವ ಹಾಗೆ ಸಹ ಮಾಡುತ್ತಿದ್ದ ರಾಜಕಾರಣಿಗಳು ಮತ್ತು ಪೋಲಿಸರು ಕೂಡ ಹೇಗೆ ಲಂಚಕ್ಕಾಗಿ ಹಾತೊರೆಯುತ್ತಿದ್ದರು ಎನ್ನುವುದನ್ನು ಮಾರ್ಮಿಕವಾಗಿ ಇಲ್ಲಿ ವರ್ಣಿಸಲಾಗಿದೆ. ಸೊಯೆಂಕಾ ದೃಷ್ಟಿಯಲ್ಲಿ ರಸ್ತೆ ಜನರ ಜೀವನವನ್ನು ಉತ್ತಮಗೊಳಿಸುವ ಸಂಕೇತ. ತನ್ನ ಸ್ವಾರ್ಥವನ್ನು ಬದಿಗೊತ್ತಿ ಎಲ್ಲರೂ ಒಂದಾಗಿ ಬಾಳಬೇಕೆಂಬುದು ಇದರ ಆಶಯವಾಗಿತ್ತು. ಒಬ್ಬ ವ್ಯಕ್ತಿ ಹಣ ಮತ್ತು ಅಂತಸ್ತನ್ನು ಗಳಿಸಲು ಏನೆಲ್ಲ ದುರ್ಮಾರ್ಗ ಹಿಡಿಯಬಹುದು ಎನ್ನುವುದಕ್ಕೆ ಪ್ರೊಫೆಸರ್ ಪಾತ್ರವೇ ಉತ್ತಮ ಉದಾಹರಣೆ ಆಗಿದೆ. ಚರ್ಚಿನ ಉದ್ಯೋಗಿ ಆಗಿ, ಧರ್ಮಬೋಧಕನಾಗಿ, ದಲ್ಲಾಳಿಯಾಗಿ, ಎಲ್ಲಾ ರೀತಿಯ ಅನಾಚಾರಗಳನ್ನು ಮಾಡಿ ಕೊನೆಗೆ ಅಪಘಾತದಲ್ಲೇ ಪ್ರೊಫೆಸರ್ ಕೊನೆಯುಸಿರೆಳೆಯುತ್ತಾನೆ.

೧೯೬೩ರಲ್ಲಿ ರಚಿಸಿದ "A dance of the Forest" ನಾಟಕವು ನೈಜೀರಿಯಾದ ಸ್ವಾತಂತ್ರ್ಯ ಆಚರಣೆಯನ್ನು ಕುರಿತದ್ದಾಗಿದೆ. ಈ ನಾಟಕ ಇದಕ್ಕೂ ಮೊದಲು ೧೯೬೦ರಲ್ಲಿ ಬರೆದ "A dance of the African Forests" ಎಂಬ ವರ್ಣಭೇದ ನೀತಿಯ ರೌದ್ರಾವತಾರದ ಮರು ಮುದ್ರಣದಂತಿದೆ. ಈ ನಾಟಕ ಅಧಿಕಾರ, ಭ್ರಷ್ಟಾಚಾರ ಹಾಗೂ ಬಹುಮುಖ್ಯವಾಗಿ ನೈಜೀರಿಯಾ ಸಮಾಜಕ್ಕೆ ಅವಶ್ಯಕವಿದ್ದ ಸೃಜನಶೀಲತೆಯನ್ನು ಕುರಿತದ್ದಾಗಿದೆ. ಆಫ್ರಿಕಾದಲ್ಲಿ ಪ್ರಚಲಿತವಾಗಿದ್ದ ಗುಲಾಮರ ಮಾರಾಟ ಮತ್ತು ಆ ಸಮಾಜದ ಗೊಂದಲವನ್ನೊಳಗೊಂಡಿದ್ದ ಈ ನಾಟಕ ಬಹುಬೇಗ ಜನಮನ್ನಣೆ ಗಳಿಸಿತ್ತು.

ಈ ನಾಟಕದ ಮೂಲಕ ತನ್ನ ದೇಶದ ಜನರಿಗೆ ಸ್ವಾತಂತ್ರ್ಯ ಸಂಭ್ರಮದಲ್ಲಿ ತೊಡಗದೆ ದೇಶದ ಒಳಿತಿಗಾಗಿ ದುಡಿಯಬೇಕೆಂದು ಸಲಹೆ ಕೊಡುತ್ತಾರೆ. ಜನರ ಐತಿಹಾಸಿಕ ಮಹತ್ವವನ್ನು ಎತ್ತಿ ತೋರಿಸುತ್ತಾರೆ.

'Kongi's Harvest (1968) ಸೊಯೆಂಕಾರವರ ಮೊಟ್ಟಮೊದಲ ರಾಜಕೀಯ ವಿಡಂಬನಾ ಬರಹವಾಗಿದೆ. ಈ ನಾಟಕ 'ಕೊಂಗಿ' ಎಂಬ ಸರ್ವಾಧಿಕಾರಿಯನ್ನು ಕುರಿತು ರಚಿಸಲಾಗಿದ್ದರೂ ಒಟ್ಟಾರೆ ಆಫ್ರಿಕಾ ದೇಶಗಳ ಸರ್ವಾಧಿಕಾರಿಗಳ ದೌರ್ಜನ್ಯವನ್ನು ಪ್ರತಿನಿಧಿಸುತ್ತದೆ. ಸುಗ್ಗಿ ಆಚರಣೆಯಲ್ಲಿ 'ಯರುಬಾ' ಸಮಾಜ ತಮ್ಮ ದೇವತೆಗಳಿಗೆ ಕೃತಜ್ಞತೆಯಿಂದ ಬಲಿ ನೀಡುವುದು ಮೊದಲಿನಿಂದಲೂ

ನಡೆದು ಬಂದ ಆಚರಣೆ. ರಾಜನೇ ಮೊದಲು ಹೊಸ ಬೆಳೆಯನ್ನು ಸ್ವೀಕರಿಸಬೇಕು, ಅವನು ದೇವರ ಪ್ರತಿನಿಧಿ ಎಂಬುದು ನಂಬಿಕೆ. ಬಹುಮುಖ್ಯವಾಗಿ ಮೂರು ಪಾತ್ರಗಳ ಸುತ್ತ ಈ ನಾಟಕ ಕೇಂದ್ರಿಕೃತವಾಗಿದೆ. ಅವುಗಳೆಂದರೆ 'ಓಬಾ ಡೋಲೋನಾ (ವಯೋವೃದ್ಧ ರಾಜ) ಕೊಂಗಿ (ಕಾರ್ಯದರ್ಶಿ) ಮತ್ತು ದಾವಡು, ರಾಜನ ಉತ್ತರಾಧಿಕಾರಿ. ಕೊಂಗಿ ಸೈನ್ಯದ ಸಹಾಯದಿಂದ ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡು ಆಯರುಬಾ ಸಮಾಜದ ನಾಯಕ ತನಗೇ ಮೊದಲ ತೆನೆಯನ್ನು ಸಮರ್ಪಿಸಬೇಕೆಂದು ಆದೇಶಿಸುತ್ತಾನೆ. ಒಟ್ಟಾರೆ ರಾಜಕೀಯ ಅಸ್ಥಿರತೆಯನ್ನು ಮತ್ತು ಸರ್ವಾಧಿಕಾರಿಗಳ ಅಟ್ಟಹಾಸವನ್ನು ಈ ನಾಟಕ ತೋರಿಸುತ್ತದೆ. ಕೊಂಗಿಯನ್ನು ಷೇಕ್ಸ್‌ಪಿಯರ್‌ನ ಲಿಯರ್ ರಾಜನಿಗೂ ಮತ್ತು ಜೂಲಿಯಸ್ ಸೀಸರನಿಗೂ ಅನೇಕ ವಿಮರ್ಶಕರು ಹೋಲಿಸಿದ್ದಾರೆ.

"Madmen and Specialists" (1971) ಕೃತಿಯಲ್ಲಿ ಸ್ವಾತಂತ್ರ್ಯ ನಂತರದ ನೈಜೀರಿಯಾದ ಅಸ್ಪಷ್ಟ ಭವಿಷ್ಯದಲ್ಲಿ ತಮ್ಮ ಕಳವಳವನ್ನು ಸೊಯೆಂಕಾ ವ್ಯಕ್ತಪಡಿಸುತ್ತಾರೆ. ವಾರಿಯರ್ ಪಾತ್ರದ ಮೂಲಕ ಬರುವ ದಿನಗಳಲ್ಲಿ ನೈಜೀರಿಯಾದಲ್ಲಿ ನಡೆಯಲಿರುವ ಕರಾಳ ಘಟನೆಗಳನ್ನು ತಿಳಿಸುತ್ತಾರೆ.

Warrior : "unborn genarations will be cannibals most worshipful physician. unborn gcharations will as we have done, eat up one another" (P. 49 Adance)

ಈ ಮೇಲಿನ ಮಾತುಗಳು ನಿಜವಾದಂತೆ ಆರು ವರ್ಷಗಳಲ್ಲೇ ನೈಜೀರಿಯಾ ಜನಾಂಗೀಯ ಕಲಹದಲ್ಲಿ ತತ್ತರಿಸಿಹೋಯಿತು. ಪ್ರಜಾಸತ್ತಾತ್ಮಕ ಸರ್ಕಾರ ಪತನಗೊಂಡು ಸರ್ವಾಧಿಕಾರಿಗಳ ದುರಾಡಳಿತ ಆರಂಭವಾಯಿತು. ರಾಷ್ಟ್ರದಲ್ಲಿ ತುರ್ತು ಪರಿಸ್ಥಿತಿ ಘೋಷಿಸಿ ಸೊಯೆಂಕಾರವರನ್ನು ದಿನಪತ್ರಿಕೆಯೊಂದರಲ್ಲಿ ಲೇಖನ ಬರೆದ ಆರೋಪದ ಮೇಲೆ ಇಪ್ಪತ್ತೇಳು ತಿಂಗಳುಗಳ ಕಾಲ ಬಂಧಿಸಲಾಯಿತು. "Madmen and Specialist" ನಾಟಕವು ಕ್ಷಿಪ್ರ ಕ್ರಾಂತಿಯ ನಂತರದ ಕರಾಳ ಚಿತ್ರಣ ನೀಡುತ್ತದೆ.

"The swamp Dwellers" ನಾಟಕದಲ್ಲಿ ಸೊಯೆಂಕಾರವರು ತನ್ನ ಜನಾಂಗದ ಭಾಷೆ, ಸಂಸ್ಕೃತಿ, ಪರಿಸರ, ಆಚಾರ ವಿಚಾರ ಇತ್ಯಾದಿಗಳ ಬಗ್ಗೆ ತಮಗಿದ್ದ ಅತೀವ ಕಾಳಜಿಯನ್ನು ಮಾರ್ಮಿಕವಾಗಿ ವಿಶ್ಲೇಷಿಸುತ್ತಾರೆ. ಈ ನಾಟಕವನ್ನು 'ಜಾನ್ ಮಿಲಿಂಗ್‌ಟನ್ ಸಿಂಜ್'ರವರ 'Riders to the sea' ನಾಟಕಕ್ಕೂ ಹೋಲಿಸಬಹುದಾದರೂ ಈ ಕೃತಿ ಓಗುನ್ ಪರಂಪರೆಗೆ ಸೇರಿದ್ದಾಗಿದೆ. ಅಲು ಮತ್ತು ಮಕುರಿ ಬಡ ದಂಪತಿಗಳು ಬುಟ್ಟಿ ನೆಯ್ಗೆಯಿಂದ ಹಾಗೂ ಕ್ಷೌರಿಕನ ವೃತ್ತಿಯಿಂದ ಗುಡಿಸಲೊಂದರಲ್ಲಿ ವಾಸವಾಗಿರುತ್ತಾರೆ. ಅವರ ಅವಳಿ ಮಕ್ಕಳಿಬ್ಬರೂ ಉದ್ಯೋಗ ವನ್ನರಸಿ ಒಬ್ಬರಾದ ಮೇಲೆ ಒಬ್ಬರಂತೆ ಪೇಟೆಗೆ ಹೋಗುತ್ತಾರೆ. ಹಾಗೆ ಹೋಗುವ ಮೊದಲು ತಮ್ಮ ಕುಲದೇವರಿಗೆ ನೈವೇದ್ಯವನ್ನು ಅರ್ಪಿಸುತ್ತಾರೆ. ಪ್ರಾಕೃತಿಕ ವಿಕೋಪದಿಂದ ಅವರ ಬೆಳೆ ಹಾಳಾಗಿ ಭಾರಿ ನಷ್ಟ ಅನುಭವಿಸುತ್ತಾರೆ. ಹಾಗೆಯೇ ಸ್ಥಳೀಯ ಜಮೀನುದಾರರಿಂದ ಅವರು ಅನುಭವಿಸಿದ ಶೋಷಣೆಯನ್ನು ಮನಮುಟ್ಟುವ ಹಾಗೆ ಗ್ರಂಥಕರ್ತರು ತೋರಿಸಿದ್ದಾರೆ. ತಲೆ

ತಲಾಂತರದಿಂದ ತಮ್ಮದಾಗಿದ್ದ ನೆಲದಲ್ಲಿ ಅವರು ಬೇಸಾಯ ಮಾಡಲಾಗದ ದುಃಸ್ಥಿತಿಗೆ ಬಂದು ತಲುಪುತ್ತಾರೆ. ಪ್ರಕೃತಿಯ ವಿಕೋಪಕ್ಕಿಂತಲೂ ಪುರೋಹಿತರ ನಿರಂತರ ಶೋಷಣೆಗೆ ಬಡಜನರು ಒಳಗಾಗುತ್ತಾರೆ.

ಒಟ್ಟಾರೆ ಆಫ್ರಿಕಾದ ಸಾಹಿತ್ಯದ ಸಂದರ್ಭದಲ್ಲಿ ಸೊಯೆಂಕಾ ಒಬ್ಬ ಕ್ರಾಂತಿಕಾರಿ ಲೇಖಕರಾಗಿ ಕಂಡುಬರುತ್ತಾರೆ. ತಮ್ಮ ಅನೇಕ ಭಾಷಣಗಳ ಮೂಲಕವೂ ಸರ್ವಾಧಿಕಾರಿಗಳ ಧೋರಣೆಯನ್ನು ನೇರವಾಗಿ ಖಂಡಿಸುತ್ತಾ ಬಂದಿದ್ದಾರೆ. ತಮ್ಮ ಮೂಲಭಾಷೆಯಾದ 'ಯರೂಬಾ' ಬಗ್ಗೆ ಅಪಾರವಾದ ಕಳಕಳಿ ಹೊಂದಿದ್ದಾರೆ. ತಾವು ಇಂಗ್ಲೀಷ್‌ನಲ್ಲಿ ಬರೆದುದರ ಬಗ್ಗೆ ಅವರಿಗೆ ಹಲವೊಮ್ಮೆ ಬೇಸರವೂ ಆಗಿತ್ತು. ಇದಕ್ಕೆ ಮುಖ್ಯ ಕಾರಣ ಇಂಗ್ಲೀಷ್ ವಸಹಾತುಗಾರರ ಭಾಷೆ ಎನ್ನುವುದು. ಆಫ್ರಿಕಾದ ಸರ್ವತೋಮುಖ ಅಭಿವೃದ್ಧಿಗೆ Kiswahili ಭಾಷೆಯನ್ನು ಅಳವಡಿಸಿಕೊಳ್ಳಬೇಕೆನ್ನುವುದು ಅವರ ಅಭಿಮತ. ಕಾಲಕ್ರಮೇಣ ಭಾಷೆಗಿಂತಲೂ ಆಫ್ರಿಕಾದ ವಿವಿಧ ಸಂಸ್ಕೃತಿ ಹಾಗೂ ಜನಾಂಗಗಳು ಪ್ರಪಂಚದ ಇತರ ಜನರೊಂದಿಗೆ ಸಂಪರ್ಕ ಸಾಧಿಸುವುದೇ ಬಹು ಮುಖ್ಯ ಎನ್ನುತ್ತಾರೆ. ಮಾನವ ಹಕ್ಕುಗಳ ಹೋರಾಟಗಾರರಾಗಿ, ಶೋಷಿತರ ಧ್ವನಿಯಾಗಿ, ಸರ್ವಧರ್ಮ ಸಾಮರಸ್ಯಕ್ಕಾಗಿ ಆಶಿಸುತ್ತಾರೆ. ಭಯೋತ್ಪಾದನೆ ಮತ್ತು ಧಾರ್ಮಿಕ ಮೂಲಭೂತವಾದವನ್ನು ತಿರಸ್ಕರಿಸುತ್ತಾರೆ. ಇತ್ತೀಚೆಗೆ ಆಫ್ಘಾನಿಸ್ತಾನದಲ್ಲಿ ಬುದ್ಧನ ಪುರಾತನ ವಿಗ್ರಹದ ಮೇಲೆ ದಾಳಿ ನಡೆದಾಗ ಅದನ್ನು ಖಂಡಿಸಿ "A Rain of stones" ಎನ್ನುವ ರೇಡಿಯೋ ನಾಟಕವನ್ನು ರಚಿಸಿ ಮಾನವೀಯತೆಯನ್ನು ಮೆರೆದಿದ್ದಾರೆ. ಹೀಗೆ ವಸಹಾತುಗಾರರ ಶೋಷಣೆ ಮತ್ತು ಪುರೋಹಿತಶಾಹಿಯ ದೌರ್ಜನ್ಯವನ್ನು ಸಂದರ್ಭೋಚಿತವಾಗಿ ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ.

□

---

ಚಿನ್ನಸ್ವಾಮಿ ಕೆ.
ಉಪನ್ಯಾಸಕರು, ಮಹಿಳಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಂಡ್ಯ

# ನಿರ್ಲಿಪ್ತತೆ

ಶ್ರೀಮತಿ ಅಮ್ಮಯ್ಯ

ಎಲ್ಲೆಡೆ ನಿರ್ಲಿಪ್ತ ಮನಸ್ಸು
ಗುಂಪಿನಲ್ಲಿ ಗೋವಿಂದ ಎಂಬ ಬದುಕು
ಏತಕ್ಕೆ ಈ ರೀತಿ
ಕಾಡಿನಿಂದ ನಾಡಿಗೆ ಬಂದವನು
ಹೆಜ್ಜೆ ಹೆಜ್ಜೆಗೂ ಹೊಸ ರೀತಿ ಬದಲಾದೆ
ಪರಿಸರ ಬದಲಿಸಿಕೊಂಡೆ

ಸಿಕ್ಕಿದ್ದನ್ನೆಲ್ಲಾ ನಾನಾ ರೂಪಾಂತರಗೊಳಿಸಿದೆ
ವಿಜ್ಞಾನ ಬೇರೆ ಗ್ರಹಕ್ಕೇರಿಸಿತು
ಹಾರಿದೆ ತೂರಿದೆ ಓಲಾಡಿದೆ
ಈಗ ಹೀಗೇಕೆ ನಿರ್ಲಿಪ್ತನಾದೆ

ಭೂಮಿಯೊಳಗಿನ ಬಿಸಿಗೆ ಮುಖವೊಡ್ಡಿ
ಕ್ಷಣದಲ್ಲೆ ಎಲ್ಲ ಹೊರಗೆಳೆದೆ
ರಾಸಾಯನಿಕ ಪದಾರ್ಥಗಳ ಧೂಪದೀಪ ಹಚ್ಚಿ
ಓಜೋನ್ ಪರದೆಗೆ ಕಿಡಿ ಹಾರಿಸಿ ಅಲ್ಲಲ್ಲಿ ರಂಧ್ರ
ನೇರವಾಗಿ ರವಿದಿಟ್ಟಿಗೆ ಸಿಕ್ಕಿ ಬಿದ್ದೆ

ಈಗ ಹೀಗೇಕೆ ನಿರ್ಲಿಪ್ತನಾದೆ
ತಂಪಿನ ಮರೆಯಲ್ಲಿದ್ದವ ತಲೆ ಎತ್ತಿದರೆ ಉರಿ ಉರಿ
ನೆಲಜಲ ಗಾಳಿ ತೇವಾಂಶ ಆಕಾಶದೇ ಮಡುಗಟ್ಟಿದೆ
ಹಸಿರು ಹೊನ್ನು ಲೂಟಿ ಮಾಡಿ
ಖಜಾನೆ ತುಂಬಿ ಬೀಗಿ ಬಿಕ್ಕುತ್ತಿರುವೆ ಈಗ
ಸಿಕ್ಕಿದ್ದನ್ನು ಕಬಳಿಸಲು ಬುದ್ಧಿ ಖರ್ಚು
ಯೋಚನೆ ಯೋಜನೆಗೆ ಬಳಲಿದ ಮನ
ಈಗ ನಿರ್ಲಿಪ್ತವಾಗಿದೆಯೆ

ತನ್ನಲ್ಲಿನ ಗುಂಡು ತಾಯಿಯ ಸಿಡುಕು
ಗುಡುಗಾಡಿ ನೋಯಿಸುತ್ತಿದ್ದರು
ಈಗೇಕೆ ಹೀಗೆ ನಿರ್ಲಿಪ್ತನಾಗಿರುವೆ
ನಿನ್ನಿಂದಲೆ ಬದುಕಲ್ಲಿ ಉಂಟಾದ ಸಮಸ್ಯೆಗೆ
ಪರಿಹಾರ ಕಂಡುಹಿಡಿ ಈ ನಿರ್ಲಿಪ್ತತೆ ಸರಿಯಲ್ಲವೀಗ

□

ಶ್ರೀಮತಿ ಅಮ್ಮಯ್ಯ
ಕನ್ನಡ ಉಪನ್ಯಾಸಕಿ, ಸರ್ಕಾರಿ ಪದವಿಪೂರ್ವ ಕಾಲೇಜು, ಹಳೆಕೋಟೆ
ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ

# ಹಾಸನದ ರಾಜಾರಾವ್ ಅವರ 'ಕಾಂತಾಪುರ': ಒಂದು ವಿವೇಚನೆ

ಡಾ. ವಸಂತಕುಮಾರ್ ಹ್ಯಾರಾನೆ

ಕಾದಂಬರಿಕಾರ, ಬಹುಭಾಷಾ ಪಂಡಿತ ರಾಜಾರಾವ್ ಅವರು ಹಾಸನ ಜಿಲ್ಲೆಯ ಆಲೂರು ತಾಲ್ಲೂಕಿನ ಕಾಂತಾಪುರದಲ್ಲಿ ೧೯೦೮ರಲ್ಲಿ ಜನಿಸಿದರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಅಭ್ಯಸಿಸಿ, ಸಾಹಿತ್ಯ ಮತ್ತು ಸಂಸ್ಕೃತಿಗೆ ಪ್ರೋಷಕವಾದ ವಾತಾವರಣದಲ್ಲಿ ಬಾಲ್ಯವನ್ನು ಕಳೆದರು. ಉರ್ದು ಮಾಧ್ಯಮದಲ್ಲಿ ವ್ಯಾಸಂಗ ಮುಂದುವರೆಸಿ ಮಹಮ್ಮದೀಯ ಸಂಪ್ರದಾಯ ಮತ್ತು ಪದ್ಧತಿಗಳಿಗೆ ಆದರ್ಶಪ್ರಾಯರಾಗಿ ಹೊಂದಿಕೊಂಡಿದ್ದರು.

ಉನ್ನತ ವ್ಯಾಸಂಗಕ್ಕೆ ಆಲಿಘರ್ ವಿಶ್ವವಿದ್ಯಾನಿಲಯ ಸೇರಿದ ರಾಜಾರಾವ್ ತತ್ವಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದರು. ವಿದೇಶಿ ಪ್ರಾಧ್ಯಾಪಕರೊಬ್ಬರ ಪ್ರಭಾವಕ್ಕೆ ಒಳಗಾಗಿ, ಅವರ ಸಲಹೆ ಮೇರೆಗೆ ಸಂಶೋಧನಾರ್ಥಿಯಾಗಿ ಫ್ರಾನ್ಸ್ ದೇಶಕ್ಕೆ ಹೋದರು. ಮೊದಲಿಗೆ ಮೌಂಟ್ ಪೆಲಿಯರ್‌ನಲ್ಲೂ, ನಂತರ ವಿಶ್ವವಿಖ್ಯಾತ ಲೇಖಕ ಡಾ. ಕ್ಯಾಸಾಮಿಯನ್ ನೇತೃತ್ವದಲ್ಲಿ ಸುಪ್ರಸಿದ್ಧ ಸಾರಾಬಾನ್ ವಿಶ್ವವಿದ್ಯಾಲಯದಲ್ಲೂ ಸಂಶೋಧನೆ ಕೈಗೊಂಡು, ಬರಹಗಾರನಾಗಬೇಕೆಂಬ ಆಸಕ್ತಿಯಿಂದ ಸಂಶೋಧನೆಯನ್ನು ಅರ್ಧಕ್ಕೇ ಕೈ ಬಿಟ್ಟ ರಾಜಾರಾವ್ ಆ ವೇಳೆಗಾಗಲೇ ಪಾಂಡಿತ್ಯ ಪಡೆದಿದ್ದ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಬರವಣಿಗೆಯನ್ನು ಪ್ರಾರಂಭಿಸಿದರು.

ಸನಾತನ ಹಿಂದೂ ಧರ್ಮದಲ್ಲಿ ಹುಟ್ಟಿ ಬೆಳೆದು ಇಸ್ಲಾಂ ಸಂಸ್ಕೃತಿಗೆ ಒಳಗಾಗಿ ಪಾಶ್ಚಿಮಾತ್ಯ ರೀತಿ-ನೀತಿಗಳಲ್ಲಿ ವಿಕಾಸ ಹೊಂದಿದ ರಾಜಾರಾವ್ ಫ್ರಾನ್ಸಿನ ಯುವತಿಯೋರ್ವಳನ್ನು ವಿವಾಹವಾದರು. ಕನ್ನಡ, ಸಂಸ್ಕೃತ, ಇಂಗ್ಲಿಷ್, ಫ್ರೆಂಚ್ ಭಾಷೆಗಳಲ್ಲಿ ಪಾರಂಗತರಾಗಿದ್ದ ರಾಜಾರಾವ್

ಫ್ರಾನ್ಸ್ ಮತ್ತು ಅಮೆರಿಕಾಗಳಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಇಂಗ್ಲಿಷ್ ಭಾಷೆಯಲ್ಲಿ ಅಪಾರ ಪಾಂಡಿತ್ಯ ಪಡೆದಿದ್ದ ರಾಜಾರಾವ್ ಆ ಭಾಷೆಯಲ್ಲೆ ಹಲವು ಕಾದಂಬರಿಗಳನ್ನು ಬರೆದಿದ್ದಾರೆ.

ಇವರ ಮೊದಲ ಕಾದಂಬರಿ 'ಕಾಂತಾಪುರ' ೧೯೩೮ರಲ್ಲಿ ತಮ್ಮ ೨೯ನೇ ವಯಸ್ಸಿನಲ್ಲೆ ಇಂಗ್ಲೆಂಡಿನ George Allen & Unuin Ltd, ಎಂಬ ಸುಪ್ರಸಿದ್ಧ ಪ್ರಕಾಶನ ಸಂಸ್ಥೆಯಿಂದ ಪ್ರಕಟಣೆಗೊಂಡು ಪ್ರಖ್ಯಾತಿ ಪಡೆಯಿತು.

'ಕಾಂತಾಪುರ' ಕಾದಂಬರಿಯ ಯಶಸ್ಸಿನಿಂದಾಗಿ ಸ್ಪೂರ್ತಿಗೊಂಡ ರಾಜಾರಾವ್ ೧೯೪೭ರಲ್ಲಿ ಸಣ್ಣ ಕಥಾ ಸಂಕಲನವೊಂದನ್ನು ಪ್ರಕಟಿಸಿದರು. ಅದರಲ್ಲಿನ 'ಜಾವನಿ' ಎಂಬ ಸಣ್ಣ ಕಥೆ ವಿಮರ್ಶಕರೆಲ್ಲರ ಗಮನ ಸೆಳೆದು ಪ್ರಪಂಚದ ಉತ್ಕೃಷ್ಟ ಸಣ್ಣಕಥೆಗಳ ಮಾಲಿಕೆಯಲ್ಲಿ ಸೇರಿತು. ಇಂದಿಗೂ ಸಹ ಈ ಕಥೆ ರವೀಂದ್ರನಾಥ ಟಾಗೂರರ 'ಕಾಬೂಲಿವಾಲಾ'ದಂತೆ ಕಲ್ಲುಹೃದಯವನ್ನು ಕರಗಿಸಿ ಮನಸ್ಸಿನ ಮೇಲೆ ಅಚ್ಚಳಿಯದ ಪರಿಣಾಮ ಉಂಟುಮಾಡುತ್ತದೆ"[೧]

೧೯೬೦ರಲ್ಲಿ ಪ್ರಕಟವಾದ ಇವರ 'ದಿ ಸರ್‌ಪೆಂಟ್ ಅಂಡ್ ದಿ ರೋಪ್' (ಸರ್ಪ ಮತ್ತು ರಜ್ಜು) ಬಹಳ ಬೇಗ ಅಂತರರಾಷ್ಟ್ರೀಯ ಖ್ಯಾತಿ ಪಡೆದು ಮಹಾನ್ ಕೃತಿ ಎಂಬ ಗೌರವಕ್ಕೆ ಪಾತ್ರವಾಯಿತು. ಈ ಕೃತಿಯನ್ನು ಓದಿದ ಅಮೆರಿಕಾದ ಟೆಕ್ಸಾಸ್ ವಿಶ್ವವಿದ್ಯಾನಿಲಯದ ಕುಲಪತಿಗಳು ರಾಜಾರಾವ್ ಅವರನ್ನು ಅಲ್ಲಿಯೆ ಭಾರತ ತತ್ವಶಾಸ್ತ್ರದ ಪ್ರಾಧ್ಯಾಪಕರನ್ನಾಗಿ ನೇಮಿಸಿಕೊಳ್ಳುತ್ತಾರೆ. ಅಷ್ಟರಮಟ್ಟಿಗೆ ಈ ಕಾದಂಬರಿ ಮೆಚ್ಚುಗೆ ಪಡೆಯುತ್ತದೆ. "ಆತ್ಮಕಥನರೂಪದಲ್ಲಿರುವ ಈ ಕಾದಂಬರಿ ಪಾಶ್ಚಿಮಾತ್ಯ ಮತ್ತು ಭಾರತೀಯ ಸಂಸ್ಕೃತಿಗಳ, ಮೌಲ್ಯಗಳ, ದೃಷ್ಟಿಗಳ, ದರ್ಶನಗಳ, ಮಿಲನದಿಂದ ಉದ್ಭವಿಸುವ ನೂತನ ಸಾಮರ್ಥ್ಯದ, ವಿಶಾಲ ಮನೋಭಾವದ, ಚಿತ್ತವಿಕಾಸದ ಹೃದಯಂಗಮ ನಿರೂಪಣೆಯಾಗಿದೆ".[೨]

'ದಿ ಕ್ಯಾಟ್ ಅಂಡ್ ಷೇಕ್ಸ್‌ಪಿಯರ್' (ಬೆಕ್ಕು ಮತ್ತು ಷೇಕ್ಸ್‌ಪಿಯರ್) ೧೯೬೫ರಲ್ಲಿ ಪ್ರಕಟವಾದ ಇವರ ಮತ್ತೊಂದು ಕಾದಂಬರಿ. ಇದಲ್ಲದೆ 'ದಿ ಚೆಸ್ ಮಾಸ್ಟರ್ ಅಂಡ್ ಹಿಸ್ ಮೂವ್ಸ್' ರಾಜಾರಾವ್ ಅವರ ಕೊನೆಯ ಇಂಗ್ಲಿಷ್ ಕಾದಂಬರಿ. ೧೯೮೮ರಲ್ಲಿ ಪ್ರಕಟವಾಯಿತು.

ಪ್ರಸ್ತುತ ಕಾದಂಬರಿ ಕಾಂತಾಪುರ ಗಾಂಧೀತತ್ವದ ಆಧಾರದ ಮೇಲೆ ವಿರಚಿತವಾದುದು. ಇದರ ವಸ್ತು ಭಾರತ ಸ್ವಾತಂತ್ರ್ಯ ಸಂಗ್ರಾಮದ ಮುಖ್ಯ ಘಟನೆ ಉಪ್ಪಿನ ಸತ್ಯಾಗ್ರಹ ಮತ್ತು ಅದರಿಂದ ದೇಶದಲ್ಲಿ ಉಂಟಾದ ಜಾಗೃತಿ, ಆಂದೋಲನ, ಆಡಳಿತ ವರ್ಗದವರ ದಬ್ಬಾಳಿಕೆ ದೌರ್ಜನ್ಯ. ಇಂತಹ ವಸ್ತುವನ್ನೊಳಗೊಂಡ ಕಾದಂಬರಿಯೊಂದು, ಆಡಳಿತ ವರ್ಗದವರ ಚಕ್ರಾಧಿಪತ್ಯದ ಅಡಿಯಲ್ಲೆ, ಅದರಲ್ಲೂ ೧೯೩೮ರ ಸಂದರ್ಭದಲ್ಲೆ ಪ್ರಕಟಗೊಂಡದ್ದು ನಿಜವಾಗಿಯೂ

---

೧. ಪ್ರೊ. ಎನ್. ನಂಜುಂಡಶಾಸ್ತ್ರಿ ಹಾಸನದ ರಾಜಾರಾವ್ ವ್ಯಕ್ತಿ ಮತ್ತು ಕೃತಿ. (ಮುನ್ನುಡಿ)

೨. ಅದೇ

ಆಶ್ಚರ್ಯಕರ. ಅವರ ದೇಶದಲ್ಲಿದ್ದುಕೊಂಡೇ ಅವರ ಚಕ್ರಾಧಿಪತ್ಯದ ಅಧೀನದಲ್ಲಿರುವ ದೇಶದ ಸ್ವಾತಂತ್ರ್ಯಂಬೋಣವನ್ನು ಬಿಂಬಿಸುವ, ದಾಸ್ಯದ ನೊಗವನ್ನು ಕಿತ್ತೊಗೆಯಲೆತ್ನಿಸುವ ಇಂತಹ ಕಾದಂಬರಿಯನ್ನು ರಚಿಸಿರುವ ರಾಜಾರಾವ್ ಅವರ ಧೈರ್ಯ, ಸಾಹಸ, ಆತ್ಮಸ್ಥೈರ್ಯವನ್ನ ಮೆಚ್ಚಲೇಬೇಕು.

ಪುರಾಣದ ರೂಪಿನಲ್ಲಿ ರಚಿತವಾಗಿರುವ ಕಾದಂಬರಿಯ ಕಥಾನಿರೂಪಣೆ, ರಚನೆ, ಭಾಷಾ ಶೈಲಿಗಳು ಶುದ್ಧ ಭಾರತೀಯತೆಯನ್ನು ಒಳಗೊಂಡಿವೆ. ಭಾರತದ ಪ್ರತಿಯೊಂದು ಗ್ರಾಮಕ್ಕೂ ತನ್ನದೇ ಆದ ವಿಶಿಷ್ಟ ಸ್ಥಳಪುರಾಣವಿದೆಯೆಂದು ಹೇಳಿ ಕಾಂತಾಪುರದ ನವೀನ ಪುರಾಣವನ್ನು ಹಳ್ಳಿಯ ವೃದ್ಧೆಯೊಬ್ಬಳಿಂದ ಹೇಳಿಸಿದ್ದಾರೆ ಕಾದಂಬರಿಕಾರರು.

ಅಂದಿನ ಮೈಸೂರು ಸಂಸ್ಥಾನದ ಮಲೆನಾಡಿನ ಮೂಲೆಯೊಂದರ ಕುಗ್ರಾಮ ಕಾಂತಾಪುರ. ಅಗ್ರಹಾರ, ಕುಂಬಾರಗೇರಿ, ನೇಕಾರರ ಬೀದಿ, ಹರಿಜನ ಕೇರಿಗಳು ಕಾಂತಾಪುರದ ಪ್ರಮುಖ ಬೀದಿಗಳು. ಮೂರ್ತಿ ಈ ಗ್ರಾಮದ ನಾಯಕ. ಕಾದಂಬರಿಯ ನಾಯಕ. ಪೋಸ್ಟ್‌ಮಾಸ್ಟರ್ ಸೂರ್ಯನಾರಾಯಣ, ಏಜೆಂಟ್ ನಂಜುಂಡಯ್ಯ, ವೆಂಕಮ್ಮ, ರಂಗಮ್ಮ, ಭಟ್ಟ, ಪಟೇಲ್ ರಂಗೇಗೌಡ, ಹೊಲೆಯರ ರಾಜಣ್ಣ, ಕುಂಬಾರ ಸಿದ್ದಯ್ಯ, ತುತ್ತೂರಿ ನಿಂಗಯ್ಯ, ಗಾಡಿರುದ್ರಪ್ಪ, ನಂಜಮ್ಮ, ತೋಟನಿಂಗಯ್ಯ, ದೇವಾಂಗದ ರಾಮಯ್ಯ ಮೊದಲಾದವರು ಇತರ ಪಕ್ಕಲುಗಳು.

ಮಹಾತ್ಮಗಾಂಧಿಯವರ ಆದರ್ಶ, ಪ್ರಭಾವಕ್ಕೊಳಗಾದ ವಿದ್ಯಾವಂತ ಯುವಕ ಮೂರ್ತಿ ತನ್ನ ಸ್ನೇಹಿತರುಗಳೊಂದಿಗೆ ಮಣ್ಣಿನಲ್ಲಿ ಅರ್ಧ ಮುಚ್ಚಿಹೋಗಿದ್ದ ಶಿವಲಿಂಗವನ್ನು ಮೇಲ್ತೆಗೆದು ಶಾಸ್ತ್ರೋಕ್ತವಾಗಿ ಅದನ್ನು ಪ್ರತಿಷ್ಠಾಪಿಸಿ ಶಿವದೇವಸ್ಥಾನದ ನಿರ್ಮಾಣ ಮಾಡಿದಂದಿನಿಂದ ಆ ಗ್ರಾಮದಲ್ಲಿ ಮಹತ್ತರ ಬದಲಾವಣೆಗಳಾಗುತ್ತವೆ. ಈ ಮೂಲಕ ಮೂರ್ತಿಯ ಸಂಘಟನ ಶಕ್ತಿ ಊರನ್ನೆ ಒಂದು ಮಾಡಿ ಕ್ರಾಂತಿಯ ಬೀಜೋತ್ಪಾದನೆಗೆ ಸಾಧಕವಾಗುತ್ತದೆ. ಕಾಫಿ ತೋಟದ ಮಾಲೀಕನ ದೌರ್ಜನ್ಯ ಮತ್ತು ದುರ್ನಡತೆಗಳಿಗೆ ಸಿಕ್ಕಿ ಒದ್ದಾಡುತ್ತಿದ್ದ ಕೂಲಿಗಳಲ್ಲಿ ಮತ್ತು ಹಳ್ಳಿಯ ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸಿ ದೇಶಪ್ರೇಮವನ್ನು ಕೆರಳಿಸಿ ತಮ್ಮ ಸ್ವಶಕ್ತಿಯಲ್ಲಿ ಭರವಸೆ ಮೂಡಿಸಿ ಕ್ರಾಂತಿಯ ಕಿಡಿ ಹೊತ್ತಿಸುತ್ತಾನೆ ಮೂರ್ತಿ.

ಇವನ ಸಂಘಟನ ಶಕ್ತಿಯನ್ನ, ಊರಿನ ಜನರಲ್ಲಿ ಜಾಗೃತಗೊಂಡ ದಾಸ್ಯದ ವಿರುದ್ಧದ ಹೋರಾಟದ ಮನೋಭಾವವನ್ನು, ಕಾಂಗ್ರೆಸ್‌ನ ಅಸ್ತಿತ್ವವನ್ನು ಮನಗಂಡ ಬ್ರಿಟಿಷ್ ಸರ್ಕಾರ ಬಡೇಖಾನ ಎಂಬ ಪೋಲೀಸ್ ಪೇದೆಯನ್ನು ನೇಮಿಸುವ ಮೂಲಕ ಅಂತಹ ಪ್ರಯತ್ನವನ್ನು ಮೊಳಕೆಯಲ್ಲೆ ಮುರಿಯಲೆತ್ನಿಸುತ್ತದೆ. ಆದರೆ ಆ ವೇಳೆಗಾಗಲೇ ಮೂರ್ತಿ ಉಪವಾಸದ ಮೂಲಕ, ತನ್ನ ಸಜ್ಜನಿಕೆಯ ಮೂಲಕ, ತ್ಯಾಗದ ಮೂಲಕ ಜನರ ಮನಗೆದ್ದಿದ್ದರಿಂದ ಊರಿನೆಲ್ಲಾ ಪ್ರಮುಖರು ಕಾಂಗ್ರೆಸ್ ಸಂಸ್ಥೆಯ ಸದಸ್ಯರಾಗಿ ನೂಲು ತೆಗೆಯುವ ಕಾಯಕದಲ್ಲಿ ಮಗ್ನರಾಗಿ ಬಡೇಖಾನನ ಯಾವ ಬೆದರಿಕೆಗೂ ಮಣಿಯುವುದಿಲ್ಲ. ಇದನ್ನರಿತ ಬಡೇಖಾನ ತನ್ನ ಮೇಲಾಧಿಕಾರಿಗೆ ವಿಷಯ

ತಿಳಿಸುತ್ತಾನೆ. ಕಾರ್ತಿಕದ ಇರುಳು ಇನ್ಸ್‌ಪೆಕ್ಟರ್ ಪೋಲಿಸ್ ಛಲದೊಂದಿಗೆ ಬಂದು ಮೂರ್ತಿಯನ್ನು ದಸ್ತಗಿರಿ ಮಾಡುತ್ತಾನೆ. ಆ ಸಂದರ್ಭದಲ್ಲಿ ನಡೆದ ಅಚಾತುರ್ಯದ ಸಂಘರ್ಷ, ಪೋಲಿಸರ ಮಿತಿಮೀರಿದ ದೌರ್ಜನ್ಯ ಇಡೀ ಕಾಂತಾಪುರವನ್ನು ಸೂತಕದ ಛಾಯೆ ಆವರಿಸುವಂತೆ ಮಾಡುತ್ತದೆ.

ಆದರೂ ಧೃತಿಗೆಡದ ಜನ ಮೂರ್ತಿಯ ಗೈರುಹಾಜರಿಯಲ್ಲೇ ಭಜನೆಯ ಮೂಲಕ ಸಂಘಟಿತರಾಗಿ ಕಾಂಗ್ರೆಸ್‌ನ ನಿಯಮಾವಳಿಗಳಿಗೆ ಬದ್ಧರಾಗಿ ನಡೆಯುತ್ತಾರೆ. ಆ ವೇಳೆಗೆ ರಂಗಮ್ಮನ ತಂದೆ ರಾಮಕೃಷ್ಣಯ್ಯ ಮರಣ ಹೊಂದುತ್ತಾರೆ. ಅವರ ಸಂಸ್ಕಾರ ಮುಗಿಸಿ ರಂಗಮ್ಮ ಕಾರವಾರದ ಕಾಂಗ್ರೆಸ್ ಸಮಿತಿಯ ಸದಸ್ಯ ಶಂಕರನ ಮನೆಗೆ ತೆರಳಿ ಮೂರ್ತಿಯ ಬಿಡುಗಡೆಗೆ ಯತ್ನಿಸುವಂತೆ ಕೇಳಿಕೊಳ್ಳುತ್ತಾಳೆ. ಹಿಂದಿರುಗಿದ ರಂಗಮ್ಮ ಹೆಂಗೆಳೆಯರನ್ನ ಸಂಘಟಿಸುವ ಮೂಲಕ ಸ್ವಯಂಸೇವಕರಾಗುವಂತೆ ಮಾಡುತ್ತಾಳೆ. ಆರು ತಿಂಗಳ ಸಜೆಯ ನಂತರ ಮೂರ್ತಿಯ ಬಿಡುಗಡೆಯಾಗುತ್ತದೆ. ಇದನ್ನರಿತ ಪೋಲಿಸಿನವರು ಮೂರ್ತಿಯನ್ನು ಬಸ್ಸಿನಲ್ಲಿ ಕಳುಹಿಸದೆ ಕಾರಿನ ಮೂಲಕ ರಾತ್ರಿ ವೇಳೆ ಊರಿಗೆ ತಂದು ಬಿಡುತ್ತಾರೆ. ಬಿಟ್ಟು ಊರವರ ಉತ್ಸಾಹಕ್ಕೆ ತಣ್ಣೀರೆರಚುತ್ತಾರೆ.

ಕೆಲವೇ ದಿನಗಳಲ್ಲಿ ಮಹಾತ್ಮಾಗಾಂಧಿಯವರು ಇಡೀ ದೇಶದಲ್ಲೆ ಅಸಹಕಾರ ಚಳುವಳಿಗೆ ಕರೆ ನೀಡಿದ ವಿಷಯ ತಿಳಿಸಿದ ಮೂರ್ತಿ, ಸರ್ಕಾರದವರು ನಿಮ್ಮ ಜಮೀನು ಮುಟ್ಟುಗೋಲು ಹಾಕಿಕೊಂಡರೂ ಕಂದಾಯ ಕೊಡಬೇಡಿ, ಈಚಲು ಮರಗಳು ಸರ್ಕಾರದ ಸ್ವತ್ತಾಗಿರುವುದರಿಂದ ಮತ್ತು ಹೆಂಡದ ಗಡಂಗುಗಳು ಬಡವರ ಅಸುಖಿಗಳ ಶೋಷಣೆಗೆ ಕಾರಣವಾಗಿರುವುದರಿಂದ ಅವುಗಳನ್ನು ನಾಶಪಡಿಸಬೇಕೆಂದು, ಅದಕ್ಕಾಗಿ ತಾವೆಲ್ಲರೂ ಸಹಕಾರ ನೀಡಬೇಕೆಂದೂ ಕೇಳಿಕೊಂಡು ಕಾರ್ಯೋನ್ಮುಖನಾಗುತ್ತಾನೆ. ಅದರ ಫಲವಾಗಿ ಬೋರಣ್ಣನ ಈಚಲು ತೋಪಿನಲ್ಲಿ ರಣರಂಗವೇ ನಡೆಯುತ್ತದೆ. ಪೋಲಿಸರು ಎಷ್ಟೇ ಪ್ರಯತ್ನಪಟ್ಟರೂ ಈಚಲು ತೋಪನ್ನು ಉಳಿಸಿಕೊಳ್ಳಲಾಗದೆ ವಿಫಲರಾಗುತ್ತಾರೆ. ಆನಂತರ ಮೂರ್ತಿಯ ತಂಡ ಹೆಂಡದಂಗಡಿ ಮುಂದೆ ಮುಷ್ಕರ ಹೂಡಿ ಕೂಲಿಗಳು ಹೆಂಡ ಕುಡಿಯದಂತೆ ಮನವೊಲಿಸುವಲ್ಲಿ ಸಫಲವಾಗುತ್ತದೆ. ಅದರ ಫಲವಾಗಿ ಕಾಂತಾಪುರದ ಸುತ್ತಮುತ್ತಲ ಹತ್ತಾರು ಹಳ್ಳಿಗಳಲ್ಲಿ ಜನರಿಂದ ಹೆಂಡದ ಬಹಿಷ್ಕಾರವಾಗುತ್ತದೆ.

ಇತ್ತ ಸರ್ಕಾರದಿಂದ ಕಂದಾಯ ಕಟ್ಟುವಂತೆ ಒಂದರ ಮೇಲೊಂದು ನೋಟೀಸು ಬಂದರೂ ಧೃತಿಗೆಡದ ಚಳುವಳಿಗಾರರು ಅಸಹಕಾರ ಮುಂದುವರೆಸುತ್ತಾರೆ. ಕೊನೆಗೆ ಸರ್ಕಾರ ಊರಿನ ಎಲ್ಲರ ಜಮೀನು ಹರಾಜಿಗೆ ಮುಂದಾಗುತ್ತದೆ. ಬೆಳೆದ ಫಸಲನ್ನು ದೂರದ ಕೂಲಿಗಳನ್ನು ಕರೆತಂದು ಪೋಲಿಸ್ ಹಾಗೂ ಸೈನಿಕರ ಬಿಗಿಬಂದೋಬಸ್ತ್ ನಡುವೆ ಕಟಾವು ಮಾಡಿಸಲು ಯತ್ನಿಸುತ್ತದೆ. ಇದನ್ನರಿತ ಕಾರವಾರ ನಗರದ ಸಾವಿರಾರು ಕಾಂಗ್ರೆಸ್ ಸ್ವಯಂಸೇವಕರು ಕಾಂತಾಪುರಕ್ಕೆ ಆಗಮಿಸಿ ಚಳುವಳಿಗಾರರಿಗೆ ಸಹಾಯ ಮಾಡುತ್ತಾರೆ. ಇದರಿಂದ ಸ್ಫೂರ್ತಿಗೊಂಡ ಚಳುವಳಿಗಾರರು ಆ ಕೂಲಿಗಳನ್ನ ಅಡ್ಡಗಟ್ಟಿ ಕಟಾವು ಮಾಡದಂತೆ ಅವರ ಮನವೊಲಿಸುವ ಪ್ರಯತ್ನ ಮಾಡುತ್ತಾರೆ. ಆ ಸಂದರ್ಭದಲ್ಲಿ ಲಾಠಿಚಾರ್ಜ್ ಹಾಗೂ ಸೈನಿಕರಿಂದ ಗುಂಡಿನ ಸುರಿಮಳೆಯಾಗುತ್ತದೆ. ಹಲವಾರು

ಜನ ಮೃತರಾಗುತ್ತಾರೆ. ಮನುಷ್ಯತ್ವ ತೊರೆದ ಬಿಳಿಯರ ಸೈನ್ಯಾಧಿಕಾರಿ ಸೈತಾನನಂತೆ ವರ್ತಿಸಿ ಚಳುವಳಿಯನ್ನ, ಚಳುವಳಿಗಾರರನ್ನ ಹತ್ತಿಕ್ಕುವಲ್ಲಿ ಯಶಸ್ವಿಯಾಗುತ್ತಾನೆ. ಅಳಿದುಳಿದ ಚಳುವಳಿಕಾರರು ರಾತ್ರಿ ವೇಳೆಯಲ್ಲಿಯೇ ಚದುರುತ್ತಾರೆ. ಇದನ್ನೆಲ್ಲಾ ನೋಡಿದ ರಾಚಣ್ಣನ ಹೆಂಡತಿ ಇಡೀ ಕಾಂತಾಪುರಕ್ಕೆ ಬೆಂಕಿ ಹಚ್ಚುತ್ತಾರೆ. ಕಾಂತಾಪುರ ಸುಟ್ಟು ಬೂದಿಯಾಗುತ್ತದೆ. ಅಳಿದುಳಿದ ಕಾಂತಾಪುರದ ಜನ ಆಶ್ರಯಕ್ಕಾಗಿ ಅಕ್ಕ-ಪಕ್ಕದ ಊರುಗಳಿಗೆ ಹೋಗುತ್ತಾರೆ. ಕೆಲವರು ಸೆರೆಮನೆ ಸೇರುತ್ತಾರೆ. ಭಟ್ಟ ಮೊದಲೇ ತನ್ನೆಲ್ಲಾ ಜಮೀನನ್ನು ಮಾರಿ ಕಾಶಿ ಸೇರಿರುತ್ತಾನೆ. ಸೂಳೆ ಚೆನ್ನಿ ಮಾತ್ರ ಉರಿದುಳಿದ ಆ ಊರಲ್ಲೆ ತನ್ನ ಬಿಡಾರ ಹೂಡುತ್ತಾಳೆ. ಹೀಗೆ ಕಾದಂಬರಿ ದುರಂತದಲ್ಲಿ ಕೊನೆಯಾಗುತ್ತದೆ.

ಕಾದಂಬರಿ ಕಾಂತಾಪುರದ ವರ್ಣನೆಯೊಂದಿಗೆ ಪ್ರಾರಂಭವಾಗುತ್ತದೆ. ಆರಂಭದಲ್ಲೆ ಅತಿಯಾದ ಭಕ್ತಿ ಅಥವಾ ಮೂಢನಂಬಿಕೆಯೆಂದೇ ಹೇಳಬಹುದಾದ ಮಟ್ಟಿಗೆ "ಓ ದೇವಿ ಕೆಂಚಮ್ಮ...ನಮ್ಮೆಲ್ಲರನ್ನು ಕ್ಷಾಮ-ಡಾಮರಗಳಿಂದ ಕಾಯಿಲೆ ಕಸಾಲೆಗಳಿಂದ, ಸಾವು-ನೋವುಗಳಿಂದ ಪಾರು ಮಾಡಮ್ಮ...ನಮ್ಮ ಮೊದಲ ಫಲ-ಫಸಲನ್ನು ನಿನಗೆ ತಂದೊಪ್ಪಿಸುತ್ತೇವೆ. ತಾಯಿ! ಮದುವೆ ಮುಂಜಿ, ಹೆರಿಗೆಯಾದಾಗ, ಹಬ್ಬ ಮಾಡಿದಾಗ ನಿನಗೆ ಸೀರೆ ಕುಪ್ಪಸಗಳನ್ನು ಸಮರ್ಪಿಸುತ್ತೇವೆ"[೩] ಎಂಬ ಬೇಡಿಕೆ ಇದೆ. ಕಾದಂಬರಿಯುದ್ದಕ್ಕೂ ಅಲ್ಲಲ್ಲಿ ಹಿಮವತಿ ನದಿಯ (ಹೇಮಾವತಿ ನದಿಯ) ಹಾಗೂ ಕೆಂಚಮ್ಮ ದೇವಿಯ ಗುಣಗಾನವಿದೆ. ಇಂತಹ ಸಂದರ್ಭಗಳಲ್ಲಿ ರಾಜಾರಾವ್ ಅವರು ಭಾವಪರವಶರಾಗಿ ಭಾವೋದ್ವೇಗಕ್ಕೆ ಒಳಗಾದವರಂತೆ ಕಂಡುಬರುತ್ತಾರೆ.

ಈ ಕಾದಂಬರಿಯಲ್ಲಿ ಬರುವ ನಾಯಕ ಮೂರ್ತಿ ರಾಜಾರಾವ್ ಅವರ ಕಲ್ಪಿತ ವ್ಯಕ್ತಿಯಾದರೂ ಎಲ್ಲೋ ಒಂದು ಕಡೆ ಅವರೇ ಆ ಪಾತ್ರವಾಗಿರುವಂತೆ ಕಾಣುತ್ತದೆ. ಗಾಂಧೀಜಿಯ ದರ್ಶನ ಪಡೆದ ಮೂರ್ತಿಯನ್ನ ಕಾದಂಬರಿಕಾರರು ಯೋಗಿಯನ್ನಾಗಿ ಮಾಡಲು ಹೋಗಿ ಪವಾಡ ಪುರುಷನನ್ನಾಗಿಸಿದ್ದಾರೆ ಎನಿಸುತ್ತದೆ. ಹಿಮವತಿ ನದಿಯ ಪ್ರವಾಹದಿಂದ ಕಂಗಾಲಾಗಿದ್ದ ಜನರನ್ನು ನೋಡಿದ ಮೂರ್ತಿ "ನಾನು ಮುಳುಗಿಹೋದರೂ ಹೋಗಬಹುದು ಆದರೆ ಮಾತೆ ಹಿಮವತಿ ನಿನ್ನ ಪ್ರಚಂಡ ಪ್ರವಾಹ ತಗ್ಗಿ, ನೀನು ಎಂದಿನಂತೆ ಶಾಂತವಾಗಿ ಹರಿಯುವವರೆಗೆ ನಾನು ಈ ಸ್ಥಳ ಬಿಟ್ಟು ಏಳುವುದಿಲ್ಲ" ಎಂದು ದೃಢ ಮನಸ್ಸಿನಿಂದ ಪದ್ಮಾಸನ ಹಾಕಿ ಕಣ್ಣು ಮುಚ್ಚಿ ಕುಳಿತ, ಆ ಸಂಜೆ ವೇಳೆಗೆ ಪ್ರವಾಹ ತಗ್ಗಿ ಹಿಮವತಿ ಪ್ರಸನ್ನಳಾಗಿದ್ದಳು. ಎನ್ನುವಲ್ಲಿ, ಮೂರ್ತಪ್ಪದೇವರು ಎಂದು ಕರೆಯುವಲ್ಲಿ ರಾಮಕೃಷ್ಣಯ್ಯನವರ ಸಂಸ್ಕಾರದ ಸಂದರ್ಭದಲ್ಲಿ ಕಾದಂಬರಿಕಾರರು ಮೂರ್ತಿಯನ್ನು ಜಾನಪದ ಅತಿಮಾನುಷರಂತೆ ಚಿತ್ರಿಸಿದ್ದಾರೆನ್ನಿಸುತ್ತದೆ.

ಆದರೂ ಮೂರ್ತಿಯ ಉಪವಾಸವ್ರತ ಇಡೀ ಕಾದಂಬರಿಗೆ ಒಂದು ತಿರುವು ಕೊಡುತ್ತದೆ. ಸಂಘಟನಾ ಚತುರನಾದ ಮೂರ್ತಿ ತನ್ನ ನಡೆ-ನುಡಿಗಳಿಂದ ಇಡೀ ಕಾಂತಾಪುರದ ಜನ-ಮನ

---

೩. ಕಾಂತಾಪುರ, ಪುಟ-೧೨.

ಗೆದ್ದು ಕ್ರಾಂತಿಯ ಮೊಳಕೆಯೊಡೆಸುತ್ತಾನೆ. ಆದರೆ ಕಾದಂಬರಿಕಾರರು ಮೂರ್ತಿಗಿತ್ತ ಆದರ, ಅಭಿಮಾನ ಸ್ವಲ್ಪ ಅತಿಯಾಗಿ ವ್ಯಕ್ತಿನಿಷ್ಠೆ ಮೆರೆದಂತಿದೆ. ಮೂರ್ತಿಯ ಉಪವಾಸ ಸತ್ಯಾಗ್ರಹ, ಅವನು ಜೈಲಿನಿಂದ ಹೊರಬರುವ ಸಂದರ್ಭದಲ್ಲಿನ ಹೊಗಳಿಕೆ ಇದಕ್ಕೆ ನಿದರ್ಶನದಂತಿದೆ.

ಮೂರ್ತಿಯಷ್ಟೆ ಪ್ರಮುಖ ಪಾತ್ರ ಭಟ್ಟನದು. ಇಲ್ಲಿ ಭಟ್ಟನ ಪಾತ್ರ ಪ್ರತಿನಾಯಕನಂತೆ ಬಿಂಬಿತವಾಗಿದೆ. ಆರಂಭದಲ್ಲಿ ಒಂದು ತುಂಡು ಪಂಚೆ, ತಾಮ್ರದ ಚೊಂಬು ಹೊಂದಿದ್ದ ಭಟ್ಟ ಪಿತೃಶ್ರಾದ್ಧದ ದಕ್ಷಿಣೆಯಿಂದ ಬಂದ ಹಣವನ್ನು ಬಡ್ಡಿಗೆ ಬಡ್ಡಿ ಸೇರಿಸಿ ಕ್ರಮೇಣ ಇಡೀ ಊರನ್ನೆ ತನ್ನ ಬಿಗಿ ಮುಷ್ಟಿಯಲ್ಲಿಟ್ಟುಕೊಳ್ಳುತ್ತಾನೆ. ಆ ಕಾಲದಲ್ಲೇ ಅವನಿಗೆ ೩೭ ಎಕರೆ ಗದ್ದೆ, ೯೦ ಎಕರೆ ಹೊಲ ಇತ್ತೆಂದರೆ ಅವನ ವಹಿವಾಟು ಎಷ್ಟೆಂಬುದು ತಿಳಿಯುತ್ತದೆ. ಶೋಷಣೆಯ ಒಂದು ಮುಖ ಭಟ್ಟನದು.

ಕಾದಂಬರಿಕಾರರು ಭಟ್ಟನ ಪಾತ್ರದ ಮೂಲಕ ಅಂದಿನ ಗ್ರಾಮ ಮತ್ತು ನಗರ ಜೀವನದ ಸಂಕ್ರಮಣ ಸ್ಥಿತಿಯನ್ನು ಹೊರಗೆಡಹಿದ್ದಾರೆ. "ಈ ಆಧುನಿಕ ವಿದ್ಯಾಭ್ಯಾಸವೋ! ಈ ಆಧುನಿಕ ಮಹಿಳೆಯರೋ! ಪಟ್ಟಣ ನಗರಗಳಲ್ಲಿ...ಮೂರು ನಾಲ್ಕು ಮಕ್ಕಳ ತಾಯಂದಿರಾಗುವ ವಯಸ್ಸಾಗಿದ್ದರೂ ಇನ್ನೂ ಮದುವೆಯಾಗದ ಅನೇಕ ಕನ್ಯಾಮಣಿಗಳಿದ್ದಾರೆ...ಅವರು ಗಂಡುಹುಡುಗರ ಜೊತೆಯಲ್ಲೆ ಕಾಲೇಜುಗಳಿಗೆ ಓದೋಕೂ ಹೋಗ್ತಾರೆ ಅಂದರೆ ಕಾಲ ಎಷ್ಟು ಕೆಟ್ಟುಹೋಗಿದೆ ಅನ್ನೋದು ನಿಮಗೆ ಗೊತ್ತಾಗುತ್ತೆ...ಒಬ್ಬಳಂತೂ ಅಲ್ಲಿ ಇಲ್ಲಿ ಹೋಗಿ ಒಬ್ಬ ಮಹಮದೀಯನನ್ನೆ ಮದುವೆಯಾಗಿದ್ದಾಳಂತೆ. ರಾಮ ರಾಮ! ಏನು ಕಾಲ ಬಂತಪ್ಪ?"[೪]

ಇಲ್ಲಿ ಬರುವ ವಾಲಗದ ರಾಮಯ್ಯ, ಕುಂಬಾರ ಸಿದ್ಧಯ್ಯ, ಗಾಡಿರುದ್ರಪ್ಪ, ಮೂಗುತುರಿಯುವ ನಂಜಮ್ಮ, ತುತ್ತೂರಿನಿಂಗಯ್ಯ, ವೀಳೆಯದೆಲೆ ವ್ಯಾಪಾರಿ ಮಾದಯ್ಯ, ಅಡ್ವೋಕೇಟ್ ಸೀನಪ್ಪ, ಹಜಾಮ ವೆಂಕಟ, ಬಳೆಗಾರ್ತಿ ನಿಂಗಮ್ಮ, ಪೋಸ್ಟ್ ಮಾಸ್ಟರ್ ಸೂರ್ಯನಾರಾಯಣ, ಬಾಯ್ ಬಡುಕಿ ವೆಂಕಮ್ಮ, ಕಾಮರೋಗಪೀಡಿತ ಸ್ಟೆಫಿಂಗ್‌ಟನ್ ಸೂಳೆ ಜೆನ್ನಿ, ಅಡಿಕೆ ಲಕ್ಷ್ಮಮ್ಮ, ಮಾತಿನ ಮಲ್ಲಿ ನಂಜಮ್ಮ, ಮೊದಲಾದ ಪಾತ್ರಗಳು ತಮ್ಮ ಹೆಸರಿನೊಂದಿಗೆ ಕಸುಬು ಸೇರಿಸಿಕೊಂಡಿರುವಂತೆ ಅನ್ವರ್ಥವಾಗಿ ಬಂದಿರುವುದು ಗ್ರಾಮೀಣ ಜನರ ನಡವಳಿಕೆಯ ಪ್ರತೀಕ ಎನ್ನಬಹುದು. ಇಲ್ಲಿಯ ಪಾತ್ರಗಳು ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪ್ರಬಂಧಗಳ ಪಾತ್ರಗಳಂತೆ ಬಿಂಬಿತವಾಗಿವೆ.

ಕಾದಂಬರಿಯಲ್ಲಿ ಗಾಂಧೀಜಿಯವರ ಆದರ್ಶಗಳ ಪರಿಪಾಲನೆಯನ್ನ ಕಾಣಬಹುದು. ದೇಶಪ್ರೇಮವನ್ನ ಬಿತ್ತರಿಸುವ ಅನೇಕ ಸನ್ನಿವೇಶಗಳನ್ನು ನೋಡಬಹುದು. ಉದಾಃ ಝಾನ್ಸಿರಾಣಿ ಲಕ್ಷ್ಮೀಬಾಯಿ ಹೋರಾಟದ ಕಥೆ, 'ಗಾಂಧೀಜಿ ಅವತಾರ' ಎಂಬ ಶೀರ್ಷಿಕೆಯಡಿಯಲ್ಲಿ ಮೂಡಿದ ಕಥೆ ಇತ್ಯಾದಿ.

---

೪. ಅದೇ.

ಇಲ್ಲಿ ಭಜನೆ ಕ್ರಾಂತಿಯ ಬೀಜಮಂತ್ರ. ಈ ಮೂಲಕ ಕಾದಂಬರಿಕಾರರು ಏಕತೆಯನ್ನು ಸಾಧಿಸಲು ಭಜನೆಗೆ ಮಹತ್ವ ನೀಡಿದ್ದಾರೆ. ಮೂರ್ತಿ ಹುಟ್ಟು ಹಾಕಿದ ಕ್ರಾಂತಿಯ ಬೀಜ ಅವನ ಅನುಪಸ್ಥಿತಿಯಲ್ಲೂ ಮೊಳಕೆಯೊಡೆದು ಹೆಮ್ಮರವಾಗಿ ಬೆಳೆಯುತ್ತದೆ. ಅದರ ಫಲವೇ ಭಜನೆ, ಉತ್ಸವಗಳು.

ಕಾದಂಬರಿಯಲ್ಲಿ ವಲ್ಲಿ, ವಸ್ತ್ರ, ಕಣ, ಬಳೆ, ಟೇಪ್ರ, ಮಕ್ಕಳು ಮರಿ, ಚಡಾವು ಹೀಗೆ ಗ್ರಾಮ್ಯ ಪದಗಳ ಭಂಡಾರವೇ ಇದೆ. ಗ್ರಾಮ ಜೀವನದ ವಾಸ್ತವ ಚಿತ್ರಣ ಸಶಕ್ತವಾಗಿ ಮೂಡಿಬಂದಿದೆ. "ಮನೆ ಬೇಕೆಂದು ಹೋಗಿ ಪಟೇಲ್ ರಂಗೇಗೌಡನಿಂದ ಅವಮಾನಿತನಾದ ಪೊಲೀಸ್ ಪೇದೆ ಬಡೇಖಾನನ ರೋಷಕ್ಕೆ ತುತ್ತಾದ ಒಂಟಿ ಕಿವಿ ಕಂತ್ರಿ ನಾಯಿಯ ರೋಧನ ಕೇಳಿದ ಕೋಳಿಗಳೆಲ್ಲಾ ಭಯದಿಂದ ಏಕಕಾಲದಲ್ಲಿ ಕಿರುಚಲು ಮೊದಲು ಮಾಡಿದವು. ಎಲ್ಲೊ ದೂರದಲ್ಲಿದ್ದ ಕತ್ತೆಯೊಂದು ನಾನೇನು ಕಮ್ಮಿ ಎಂಬಂತೆ ತನ್ನದೇ ಆದ ಶೈಲಿಯಲ್ಲಿ ಅರಚಿತು" ಎಂಬಲ್ಲಿ ಗ್ರಾಮಜೀವನದ ನಿತ್ಯಸತ್ಯವನ್ನು ಕಾಣಬಹುದಾಗಿದೆ.

ಕಾದಂಬರಿಯಲ್ಲಿ ಗ್ರಾಮೀಣ ಗುಡಿ ಕೈಗಾರಿಕೆಗಳಿಗೆ ಇದ್ದ ಪ್ರಾಮುಖ್ಯತೆ ಮತ್ತು ಅಂದಿನ ಅವುಗಳ ಸ್ಥಿತಿಗತಿಗಳ ಬಗೆಗೆ ವಿವರಿಸಲಾಗಿದೆ. ಮಲೆನಾಡಿನಲ್ಲಿ ಕಂಡುಬರುವ ರೋಗರುಜಿನಗಳ ಬಗ್ಗೆ ವಿವರ ಇದೆ. ಕಾದಂಬರಿಕಾರರು ಮಲೆನಾಡಿನವರಾಗಿದ್ದು ಬೇಸಾಯಗಾರ ಕುಟುಂಬದಲ್ಲಿ ಜನಿಸಿದವರಾಗಿರುವುದರಿಂದ ಅಲ್ಲಿನ ಎಲ್ಲ ಜೀವಜಂತುಗಳ ಪರಿಚಯ ಬಲ್ಲವರಾಗಿದ್ದಾರೆ. ಹಾಗಾಗಿ ಮಲೆನಾಡಿನ ಘಟ್ಟಪ್ರದೇಶಗಳಲ್ಲಿ ವಾಸಿಸುವ ವಿವಿಧ ಜಾತಿಯ ಜಂತುಗಳ ಬಗೆಗೆ ಅದರಲ್ಲೂ ಹಾವುಗಳ ಬಗೆಗೆ ಪರಿಚಯ ನೀಡಿದ್ದಾರೆ. ಕೂಲಿ ಸಿದ್ದಯ್ಯ ಹೇಳುವ ಹಾವಿನ ಕಥೆಗಳು ಹೊಸ ಕೂಲಿಕಾರರಿಗೆ ಆ ಪ್ರದೇಶದ ಜೀವ ವೈವಿಧ್ಯಗಳನ್ನು ಪರಿಚಯಿಸುವಲ್ಲಿ ಸಹಕಾರಿಯಾಗಿದೆ. ಇಲ್ಲಿನ ಕುಂಭದ್ರೋಣ ಮಳೆಯ ಆರ್ಭಟ, ಮಲೆನಾಡಿನ ಮುಂಗಾರು ಮಳೆಯ ತೀಕ್ಷ್ಣತೆ, ತೀವ್ರತೆ ಕಾದಂಬರಿಕಾರರ ಅನುಭವದ ಮೂಸೆಯಲ್ಲಿ ಸಶಕ್ತವಾಗಿ ಚಿತ್ರಿಸಲ್ಪಟ್ಟಿದೆ.

ರಾಜಾರಾವ್ ಅವರು ತುಂಬಾ ಸೊಗಸಾಗಿ ಸನ್ನಿವೇಶಗಳನ್ನ ವರ್ಣಿಸಿದ್ದಾರೆ. "ಕಾಂತಾಪುರ ಹಸುಗೂಸು ತಾಯಿಯ ತೊಡೆಯ ಮೇಲೆ ಮುದುರಿ ಮಲಗಿದಂತೆ ಕಾಣುತ್ತದೆ" ಎನ್ನುವಲ್ಲಿ ಎಂತಹ ನಯಗಾರಿಕೆ! ತಮ್ಮ ಹುಟ್ಟೂರನ್ನ ತಾಯಿ ಮಗುವಿನ ವಾತ್ಸಲ್ಯಕ್ಕೆ ಹೋಲಿಸಿರುವಲ್ಲಿ ಲೇಖಕರ ಅಭಿಮಾನ ಪೂರ್ವಕ ಪ್ರೀತಿ ಹೊರದೇಶದಲ್ಲಿದ್ದರೂ ತಾಯ್ ನೆಲದ ಮಮತೆ ಮರೆತಿಲ್ಲ ಎಂಬುದನ್ನು ನೆನಪಿಸುತ್ತದೆ.

ಹೊನ್ನಾರಿನ ಸಡಗರ, ನೇಗಿಲಪೂಜೆಯ ಮೂಲಕ ಗ್ರಾಮೀಣರು ಮುಂಗಾರನ್ನು ಸ್ವಾಗತಿಸುವ ಸಂಭ್ರಮ, ಕಾರ್ತಿಕ ಮಾಸದ ಆಗಮನವನ್ನು ಕಾದಂಬರಿಕಾರರು ತುಂಬಾ ರಸವತ್ತಾಗಿ, ರಮ್ಯವಾಗಿ ನಿರೂಪಿಸಿದ್ದಾರೆ. "...ಕಾಂತಾಪುರದ ಮಬ್ಬು ಕವಿದ ರಸ್ತೆಗಳ ಮೇಲೆ, ಅಗ್ರಹಾರದಿ ಹಾದು, ಹೊಲಗೇರಿ ಹೊಕ್ಕು ಕುಂಬಾರಗೇರಿಯಲ್ಲಿ ನುಗ್ಗಿ ದೇವಾಂಗ ಬೀದಿಯಲಿ ಇಳಿದು ಬಂದಿತಾ

ಇರುಳು ಮಾವಿನ ತೋಪಿನ ಮೂಲಕ ರೆಕ್ಕೆ ಬಡಿದು ಹಾರಿ ಹೋಗಿ ಕ್ಷಣ ಮಾತ್ರ ಆ ದೊಡ್ಡ ಅರಳಿ ಮರದ ಮೇಲೆ ನಿಧಾನಿಸಿ, ಉತ್ತ ಹೊಲಗದ್ದೆಗಳ ಮೇಲೆ ಅಂಬಿನಂತೆ ಸಾಗಿ, ಹೊಳೆಯ ಮೇಲೆ ಸಾವಧಾನವಾಗಿ ಇಳಿದು ಅಳಿಯಿತು ಆ ಇರುಳು."[೩]

ಮಲೆನಾಡಿನ ಜನ ಜಾತ್ರೆ ದೇವರುತ್ಸವಗಳ ಸಂದರ್ಭದಲ್ಲಿ ಗರುಡದರ್ಶನ ಶುಭ ಎಂದು ನಂಬುತ್ತಾರೆ. ಅದರಂತೆ ಅಂದು ತಪ್ಪದೆ ಗರುಡ ನೆರದಿದ್ದ ಜನಸಮೂಹಕ್ಕೆ ದರ್ಶನ ಕೊಡುತ್ತಾನೆಂಬುದು ನಂಬಿಕೆ. ಹಾಗೆಯೆ ಇಲ್ಲೂ ಗರುಡದರ್ಶನ ಮಾಡಿಸಿದ್ದಾರೆ. ಇಲ್ಲಿ ಸಾಕುವ 'ಅಮೃತ ಮಹಲ್' ಜಾತಿಯ ಎತ್ತುಗಳನ್ನ ಪರಿಚಯಿಸಿರುವ ಕಾದಂಬರಿಕಾರರು ಮಲೆನಾಡಿನ ಎಲ್ಲ ಆಚಾರ-ವಿಚಾರ ಸಂಪ್ರದಾಯಗಳನ್ನ ಚಾಚೂತಪ್ಪದೆ ವಿವರಿಸಿದ್ದಾರೆ.

ಕಾದಂಬರಿಯುದ್ದಕ್ಕೂ ಬಾಯಿಬಡುಕಿ ವೆಂಕಮ್ಮನ ಮೂಲಕ ಗ್ರಾಮೀಣ ಬೈಗುಳಗಳ ಮಳೆಯನ್ನೆ ಸುರಿಸಿರುವ ರಾಜಾರಾವ್ ವಿಧವೆ ರತ್ನಳ ಪಾತ್ರದ ಮೂಲಕ ಸಂಪ್ರದಾಯದ ಅಮಾಯಕ ಹೆಣ್ಣುಗಳ ಮೇಲಿನ ದೌರ್ಜನ್ಯ, ಸ್ವಾತಂತ್ರ್ಯ ಪೂರ್ವದಲ್ಲಿ ಹಳ್ಳಿಗಳಲ್ಲಿ ಪೊಲೀಸರಿಂದಾಗುತ್ತಿದ್ದ ದೌರ್ಜನ್ಯ, ಹಳ್ಳಿಗಳಲ್ಲಿ ನಡೆಯುವ ಶೋಷಣೆಯ ಎಲ್ಲ ಮಗ್ಗಲುಗಳನ್ನು ಯಥಾವತ್ತಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅದರಲ್ಲೂ ಸ್ಟೆಫಿಂಗ್‌ಟನ್ ತೋಟದ ಕೂಲಿಗಳ ಮೇಲಿನ ದೌರ್ಜನ್ಯದ ಚಿತ್ರಣ ಕರುಳು ಮಿಡಿಸುತ್ತದೆ.

ಪರಕೀಯರ ನಾಡಿನಲ್ಲಿದ್ದುಕೊಂಡೇ ಅವರ ವಿರುದ್ಧ ಸಮರ ಸಾರಿದ, ದೇಶದ ಮುಕ್ತಿಗಾಗಿ ಹೋರಾಡಿದ ಧೀರ ಜನರ ಚರಿತ್ರೆ ಬರೆಯ ಹೊರಟವರು ರಾಜಾರಾವ್. ನಿಜವಾಗಿಯೂ ಕಾಂತಾಪುರದಲ್ಲೂ ಸ್ವಾತಂತ್ರ ಸಂಗ್ರಾಮದ ಆಂದೋಲನ ನಡೆಯಿತೇನೋ ಎನ್ನುವಷ್ಟರ ಮಟ್ಟಿಗೆ ಅಸಹಕಾರ ಚಳುವಳಿಯನ್ನು ಬಿಂಬಿಸಿದ್ದಾರೆ. ಕಾಂತಾಪುರದ ಮಹಿಳೆಯರ ಹೋರಾಟವನ್ನು ನೋಡಿದ, ಕೇಳಿದ ಜನ "ಪೋಲೀಸರೊಡನೆ ಹೋರಾಡಿದ ವೀರಮಹಿಳೆಯರು ನೀವು" ಎಂದು ಕರೆದು ಹೊಗಳುವ ಸನ್ನಿವೇಶವನ್ನು ಬಣ್ಣಿಸಿ ಸ್ವಾತಂತ್ರ ಸಂಗ್ರಾಮದ ಸವಿನೆನಪಿನ ಕಾವು ಕೊಟ್ಟಿದ್ದಾರೆ.

ಆದರೆ ರಾಜಾರಾವ್ ಅವರು ಕಾದಂಬರಿಯಲ್ಲಿ ವಿಕ್ಟೋರಿಯಾ ರಾಣಿಯನ್ನು ನಮ್ಮೆಲ್ಲರ "ಮಹಾತಾಯಿ ಭವ್ಯರೂಪಿಣಿ, ಧರ್ಮರಕ್ಷಣೆಗೆ ಮುಂದಾದವಳು. ಮಹಾಮಹಿಮಳು" ಎಂದೆಲ್ಲಾ ವರ್ಣಿಸಿರುವುದು ಅಷ್ಟು ಸಮಂಜಸವಲ್ಲ ಎನಿಸುತ್ತದೆ. ಬಹುಷ ಅವರು ಇಂಗ್ಲೆಂಡಿನಲ್ಲಿ ನೆಲಸಿದ್ದರ ಫಲ ಅದಿದ್ದಿರಬಹುದು.

ಏನೇ ಆಗಲಿ 'ಕಾಂತಾಪುರ' ಕಾದಂಬರಿಯಲ್ಲಿ ಕನ್ನಡ ನಾಡು-ನುಡಿಯ ಮತ್ತು ಅಚ್ಚಗನ್ನಡತ್ವದ ಸೊಗಡು ಪರಿಮಳ ಪುಟ-ಪುಟದಲ್ಲೂ ಘಮಘಮಿಸುತ್ತದೆ. ನಮ್ಮ ರಾಜ್ಯದ ಮಲೆನಾಡಿನ ವರ್ಣನೆ, ಹಬ್ಬ ಹರಿದಿನಗಳ ಚಿತ್ರಣ. ಆಚಾರ-ವಿಚಾರಗಳ ಪ್ರತಿಪಾದನೆ ನಮ್ಮ ಹಳ್ಳಿಗರ ದೃಷ್ಟಿ ಧೋರಣೆಗಳು ಬಹಳ ಸೊಗಸಾಗಿ ಹೃದಯಂಗಮವಾಗಿ ವರ್ಣಿತವಾಗಿವೆ. ಕಾಂತಾಪುರ ನಮ್ಮ

೩ ಕಾಂತಾಪುರ, ಪುಟ. ೧೪೭.

ಮಲೆನಾಡಿನ ಹೇಮಾವತಿ ಕಣಿವೆಯಲ್ಲಿ ಹುದುಗಿ ನಿಷ್ಕ್ರಿಯವಾಗಿ ಕುಳಿತಿದ್ದ ಒಂದು ಕುಗ್ರಾಮ. ಆ ಗ್ರಾಮದ ಮೇಲ್ಮೈ ಲಕ್ಷಣ, ಅಲ್ಲಿಯ ಜೀವನದ ಒಳ-ಹೊರಗಿನ ರೂಪು-ರೇಷೆಗಳು, ಹಳ್ಳಿಗರ ಮಾತು-ಮನಸು, ಸಂಪ್ರದಾಯಸ್ಥರ ನಂಬಿಕೆ, ಶ್ರದ್ಧೆ ಸನಿಹದ ಕಾಫಿ ತೋಟದ ಮಾಲೀಕ-ಕೂಲಿಗಳ ಸಂಬಂಧ. ಅಲ್ಲಿಯ ಪ್ರಭಾವ ಪರಿಸರಗಳ ನಿಕಟ ಪರಿಚಯ ಕಾದಂಬರಿಕಾರರಿಗೆ ಇದ್ದುದರಿಂದ ಅವುಗಳ ಜೀವಂತ ಚಿತ್ರಣ ಸಾಧ್ಯವಾಗಿದೆ. ಜೊತೆಗೆ ಭಾರತ ಸ್ವಾತಂತ್ರ ಸಂಗ್ರಾಮ ಸಂದರ್ಭದ ೧೯೩೦ರ ಉಪ್ಪಿನ ಸತ್ಯಾಗ್ರಹದಿಂದ ಸಿಡಿದೆದ್ದ ಆಂದೋಲನದ ಅಲೆಗಳು ದೇಶದ ಮೂಲೆ ಮೂಲೆಗಳಿಗೂ ಪಸರಿಸಿ ದಾಸ್ಯದ ಮುಕ್ತಿಗಾಗಿ ಹಾತೊರೆಯುವ ಕೆಚ್ಚೆದೆಯ ಮನಸ್ಸುಗಳ ಮನೋಭಾವ ರಾಜಾರಾವ್ ಅವರ ಲೇಖನಿಗೆ ಶಕ್ತಿ ನೀಡಿದೆ. ಹಾಗಾಗಿಯೆ ಅವರ ಕಾಂತಾಪುರದ ನಿರ್ಜೀವಿ ಮುಗ್ಧ ಹಳ್ಳಿಗರು ಸಜೀವಿಗಳಾಗಿ ಕ್ರಾಂತಿ ವೀರರಾಗಿ ಚಿತ್ರಿತರಾಗಿದ್ದಾರೆ. ಅವರನ್ನ ಕ್ರಾಂತಿಯ ದಳ್ಳುರಿಯಲ್ಲಿ ಧುಮುಕಿಸುವ ಕಾದಂಬರಿಕಾರರ ಸನ್ನಿವೇಶ ನಿರ್ಮಾಣ, ಬರವಣಿಗೆಯ ರೀತಿ ಅಮೋಘವಾಗಿದೆ.

ಅನುವಾದಕರಾದ ಪ್ರೊ. ಎನ್. ನಂಜುಂಡಶಾಸ್ತ್ರಿಗಳ ಬಗ್ಗೆ ಹೇಳುವುದಾದರೆ ಅವರು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ನಿರ್ದೇಶಕರಾಗಿದ್ದವರು. ಇಂಗ್ಲಿಷ್ ಪಾಂಡಿತ್ಯ ಪಡೆದಿದ್ದವರು. ಹಾಗಾಗಿ ಒಂದು ಸ್ವತಂತ್ರ ಕೃತಿ ಎಷ್ಟರ ಮಟ್ಟಿಗೆ ವಿಜೃಂಭಿಸಿತೊ ಅಷ್ಟರಮಟ್ಟಿಗೆ ಅವರ ಈ ಕನ್ನಡಾನುವಾದ ಒಡಮೂಡಿದೆ. ಪ್ರತಿಯೊಂದು ಸನ್ನಿವೇಶ, ಘಟನೆಗಳನ್ನು ಅಷ್ಟೇ ಅಚ್ಚುಕಟ್ಟಾಗಿ ಸ್ವಲ್ಪವೂ ತೊಡಕಿಗೆ, ಅಪಾರ್ಥಕ್ಕೆ ಎಡೆಯಿಲ್ಲದಂತೆ ಸ್ಪಷ್ಟವಾಗಿ ಅನುವಾದಿಸಿದ್ದಾರೆ. ಈ ಭವ್ಯ ಆಂಗ್ಲ ಕಾದಂಬರಿಯನ್ನು ತಮ್ಮ ಭಾಷೆ ಕನ್ನಡಕ್ಕೆ ಅನುವಾದಿಸಿ ಕನ್ನಡಿಗರಿಗೆ ಸಮರ್ಪಿಸಬೇಕೆಂಬ ಅವರ ಮನದಾಸೆ ಈಡೇರಿದೆ ಎಂದರೆ ತಪ್ಪಾಗಲಾರದು.

□

---

ಡಾ. ವಸಂತಕುಮಾರ್ ಹ್ಯಾರಾನೆ
ಉಪನ್ಯಾಸಕ, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಹೇಮಗಂಗೋತ್ರಿ, ಹಾಸನ

# ಬುದ್ಧ ಮತ್ತು ಅಂಗುಲಿಮಾಲ

ಡಾ. ಮುನಿವೆಂಕಟಪ್ಪ

ಬರೆದಿಟ್ಟ ಇತಿಹಾಸ ನಮ್ಮದಲ್ಲ
ಪುರಾಣದೊಳಗಿನ ಪುರಾಣವಷ್ಟೆ
ಬರೆದಿಟ್ಟ ಸಾಹಿತ್ಯ ನಮ್ಮದಲ್ಲ
ಪುರೋಹಿತರ ಪಂಡಿತರ ಹುನ್ನಾರವಷ್ಟೆ.

ವ್ಯಾಸ, ವಾಲ್ಮೀಕಿ ಕೂಡ
ಮೇಲ್ವರ್ಗದವರ ಪಕ್ಷಪಾತಿಗಳು
ಪಂಪ, ರನ್ನ ಕೂಡ
ರಾಜರಾಣಿಯರ ಪಕ್ಷಪಾತಿಗಳು.

ಶ್ರಮಜೀವಿಗಳ ಬದುಕು, ಬವಣೆ
ದಾಖಲಿಸಲಿಲ್ಲ ನಮ್ಮ ಪಂಡಿತರು
ರಾಜಕಾರಣಿಯರ ರಾಸಲೀಲೆಗಳನ್ನ
ಚಿತ್ರಿಸಿದರು ನಮ್ಮ ಕವಿ ಕಲಾವಿದರು.

ಸಿದ್ಧಾರ್ಥ ರಾಜನ ಮಗ, ಅರಮನೆಯ
ವೈಭೋಗದ ಸುಖದ ಸುಪ್ಪತ್ತಿಗೆಯಲ್ಲಿ

ಬೆಳೆದ, ಸಾವು, ನೋವು, ವೃದ್ಧಾಪ್ಯ, ರೋಗ
ಅರಿಯದವ, ಮದುವೆ ಆಗಿ ತಂದೆಯೂ ಆದ.
ಒಂದು ದಿನ ಉದ್ಯಾನದಲ್ಲಿ ನಿಂತು
ಆಸ್ವಾದಿಸುತಿದ್ದಾಗ ಸಿದ್ಧಾರ್ಥನಿಗೆ
ಹೆಣ ಹೊತ್ತು ಹೋಗುವ ದೃಶ್ಯ ಕಣ್ಣಿಗೆ ಬಿತ್ತು.
ಮನ ಸೂರೆಗೊಂಡಿತು. ಜಿಜ್ಞಾಸೆಯಲ್ಲಿ ಮುಳುಗಿದ.

ಕಣ್ಣೀರಿಗೆ, ದುಃಖಕ್ಕೆ ಕಾರಣ ತಿಳಿಯಲು
ನಡುರಾತ್ರಿಯಲ್ಲಿ ಎಲ್ಲವನ್ನು ತೊರೆದು
ಮಡದಿ, ಮಗುವನ್ನು ಬಿಟ್ಟು ಕಾಡು ಸೇರಿದ.
ಇನ್ನು ಅಂಗುಲಿಮಾಲ
ಒಬ್ಬ ದರೋಡೆಕೋರ, ರಾಕ್ಷಸ,
ದೋಚುವುದು, ಕೊಲ್ಲುವುದು, ಇವನ ಕಾಯಕ
ರುಂಡ ಚೆಂಡಾಡಿ, ಬೆರಳುಗಳನ್ನು ಬೇರ್ಪಡಿಸಿ

ಹೂಮಾಲೆ ಮಾಡಿ ಧರಿಸಿ ವಿಕೃತಾನಂದ
ಅನುಭವಿಸುವುದು ಇವನ ನಿತ್ಯ ಕಾಯಕ
ಇದಿಷ್ಟು ಪುರೋಹಿತ ಪಂಡಿತರ
ಇತಿಹಾಸಕಾರರ ವಿಕೃತ ಚಿತ್ರಣ
ವಾಸ್ತವ ಸಂಗತಿ ಇದಲ್ಲ.

ಸಿದ್ಧಾರ್ಥ ಒಬ್ಬ ಬುಡಕಟ್ಟು ನಾಯಕ
ಸಾವಿರಾರು ಎಕರೆ ಒಡೆತನದ
ಭೂಮಾಲೀಕನ ಮಗ.
ಬೇಸಾಯಕ್ಕೆ ಗೋವುಗಳಿಲ್ಲದೆ ಪರದಾಡಬೇಕಿತ್ತು

ಯಜ್ಞ ಯಾಗಾದಿಗಳ ಹೆಸರಿನಲ್ಲಿ ಗೋವುಗಳನ್ನು
ಕೊಂದು ತಿನ್ನುತ್ತಿದ್ದರು ಬ್ರಾಹ್ಮಣರು
ಸ್ತ್ರೀಯರ ಮೇಲೆ ಅತ್ಯಾಚಾರವೆಸಗಿ
ಭೋಗಿಸುತ್ತಿದ್ದರು.
ಶೂದ್ರರನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದರು.

ಸ್ತ್ರೀಯರಿಗೆ, ಶೂದ್ರರಿಗೆ, ಸ್ವಾತಂತ್ರ್ಯವಿರಲಿಲ್ಲ
ಅವರಿಗೆ ಆಸ್ತಿ ಹಕ್ಕು ನಿರಾಕರಣೆಯಾಗಿತ್ತು

ವೇದಾಧ್ಯಯನ ನಿಷಿದ್ಧ, ಉಲ್ಲಂಘಿಸಿದರೆ
ಕಠಿಣ ಶಿಕ್ಷೆ ವೇದವನ್ನು ಕದ್ದು ಓದಿದರೆ
ಅವರ ನಾಲಿಗೆ ಸೀಳಬೇಕು, ಕದ್ದು ಕೇಳಿದರೆ
ಕಿವಿಗೆ ಕಾದ ಸೀಸ ಹುಯ್ಯಬೇಕು.
ಗಂಡನಿಗೆ ಹೆಂಡತಿ ವಿಧೇಯಳಾಗಿರಬೇಕು
ದೇವರೆಂದು ನಿರಂತರವಾಗಿ ಪೂಜಿಸಬೇಕು
ಶೂದ್ರ ಸೇವಾಕಾರ್ಯದಲ್ಲಿ ತೊಡಗಬೇಕು
ಬ್ರಾಹ್ಮಣ ಸೇವೆಯೇ ಉತ್ತಮ ಕಾಯಕ.

ಸ್ತ್ರೀಯರನ್ನು, ಶೂದ್ರರನ್ನು, ಹೀನಾಯವಾಗಿ
ನಡೆಸಿಕೊಳ್ಳುತ್ತಿದ್ದ ಕಾಲವದು
ಸ್ತ್ರೀಯರು, ಶೂದ್ರರು, ಅಮಂಗಳಕಾರಿ
ಎಂದು ಘೋಷಿಸಿದ್ದ ದಿನಗಳವು.

ಪುರೋಹಿತ ಶಾಹಿಯ, ಕ್ರೌರ್ಯದ ಕಪಟತನ ಕುತಂತ್ರ
ತಾರತಮ್ಯ ತುಂಬಿದ್ದ ಕಾಲವದು, ರೋಸಿ ಹೋದ ಸಿದ್ದಾರ್ಥ
ಜೀವಿ ವಿರೋದಿ ಮೌಲ್ಯಗಳ ವಿರುದ್ಧ ಬಂಡೆದ್ದು
ಈ ನೆಲದ ಜನರ ಕೊರಳ ದನಿಯಾದ ಪ್ರಬುದ್ಧನಾದ
ಮೌನದಲ್ಲಿ ಮುಳುಗಿ ಧ್ಯಾನದಲಿ ತೊಡಗಿ ಬುದ್ಧನಾದ.

ಬುದ್ಧ ಬಂಡಾಯಕ್ಕೆ ಧಾರ್ಮಿಕ ಚೌಕಟ್ಟು ಇತ್ತು
ಈಗಿನಂತೆ ಆಗ ರಾಜಕೀಯ ಆಯಾಮಗಳು ಇರಲಿಲ್ಲ
ಧರ್ಮದ ಮೂಲ ವ್ಯಾಕರಣವನ್ನು ಲೋಕಕ್ಕೆ ಬೋಧಿಸಿದ.
ಬುದ್ಧನ ದರ್ಶನ ಮಾನವೀಯ ಮೌಲ್ಯಗಳ ಸಂಗಮ
ಆಗ ಮಾಂಸಹಾರಿಗಳಾಗಿದ್ದ ಬ್ರಾಹ್ಮಣರು ಬುದ್ಧನಿಗೆ ಉತ್ತರವಾಗಿ
ಗೋಪೂಜೆ ಬಳಕೆಗೆ ತಂದು, ಸಸ್ಯಹಾರಿಗಳಾದರು.
ಅಂಗುಲಿಮಾಲ
ಇತಿಹಾಸಕಾರರು ಚಿತ್ರಿಸಿದಂತೆ ದರೋಡೆಕಾರನಲ್ಲ,
ನರ ರಾಕ್ಷಸನೂ ಅಲ್ಲ, ಒಬ್ಬ ಜೀತಗಾರನ ಮಗ,
ಭೂಮಾಲೀಕನ ತುಳಿತಕ್ಕೆ ಒಳಗಾದವ,
ವೃದ್ಧ ತಂದೆ ಭೂಮಾಲೀಕನ ಮಗನಿಂದ ಕೊಲೆಯಾದ.
ಪ್ರಾಯದ ತಂಗಿ ಭೂಮಾಲೀಕನ ಮಗನಿಂದ ಅತ್ಯಾಚಾರಕ್ಕೊಳಗಾದಳು,
ಇದರಿಂದ ಕುಪಿತಗೊಂಡ ಅಂಗುಲಿಮಾಲ

ಭೂಮಾಲೀಕನ ಮಗನ ರುಂಡವನ್ನು ಕತ್ತರಿಸಿ
ಬೆರಳುಗಳನ್ನು ಬೇರ್ಪಡಿಸಿ ಹೂ ಮಾಲೆ ಮಾಡಿ
ಧರಿಸಿ ಸೇಡು ತೀರಿಸಿಕೊಂಡ, ಪ್ರಾಣಭಯದಿಂದ
ನಾಡು ತೊರೆದು ಕಾಡು ಸೇರಿಕೊಂಡ.

ಕಾಡಿನಲ್ಲಿದ್ದ ಅಂಗುಲಿಮಾಲನಿಗೆ
ಬುದ್ಧನ ಸಂಪರ್ಕ ದೊರೆಕಿತು
ಅದೊಂದು ಅಕಸ್ಮಿಕ ಭೇಟಿ
ಬುದ್ಧನ ದರ್ಶನಕ್ಕೆ ಕರಗಿಹೋದ
ಬುದ್ಧನ ಬೆಳಕಿನಲ್ಲಿ ನಡೆದು ಬಂದ
ಕಾಡಿನಿಂದ ನಾಡಿಗೆ ಅಂದು ಬೆಳದಿಂಗಳ ರಾತ್ರಿ.

ಅಂದೇ ಬುದ್ದನ ಎದುರಿನಲ್ಲೇ
ಭೂಮಾಲೀಕರು ಅಂಗುಲಿಮಾಲನ ಮೇಲೆರಗಿ
ಕಲ್ಲುಗಳಿಂದ ಕ್ರೂರವಾಗಿ ಕೊಂದು ಹಾಕಿದರು.
ನಿರಪರಾಧಿ ಗಾಂಧಿಯನ್ನ ಮಾತಾಂಧರು ಕೊಂದಂತೆ!

ಬರೆದಿಟ್ಟ ಇತಿಹಾಸ ನಮ್ಮದಲ್ಲ
ಪುರಾಣದೊಳಗಿನ ಪುರಾಣವಷ್ಟೆ
ಬರೆದಿಟ್ಟ ಸಾಹಿತ್ಯ ನಮ್ಮದಲ್ಲ
ಪುರೋಹಿತರ ಪಂಡಿತರ ಹುನ್ನಾರವಷ್ಟೆ.

□

ಡಾ. ವಿ. ಮುನಿವೆಂಕಟಪ್ಪ
ವಿಚಾರವಾದಿ ಪ್ರಕಾಶನ
ನಂ. ೧೨೪೦, ೩ನೇ ಕ್ರಾಸ್, ಗಂಗೆ ರಸ್ತೆ, ಕುವೆಂಪುನಗರ
ಮೈಸೂರು – ೫೭೦ ೦೦೩

# ಮಹಾತ್ಮರ ಗುರು ಕುದ್ಮುಲ್ ರಂಗರಾವ್

ಮುಗಳವಳ್ಳಿ ಕೇಶವ ಧರಣಿ

*"ಅಸ್ಪೃಶ್ಯ ಜನಾಂಗದವರ ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕ ಪುನರುದ್ಧಾರದ ಕಾರ್ಯದಲ್ಲಿ ಕುದ್ಮುಲ್ ರಂಗರಾವ್ ನನಗೆ ಸ್ಫೂರ್ತಿ ಮತ್ತು ಮಾರ್ಗದರ್ಶಕರು, ಅವರು ನಿಜವಾಗಿಯೂ ನನ್ನ ಗುರುಗಳು".*

–ಮಹಾತ್ಮಗಾಂಧಿ

ಭಾರತದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಕಾಣಿಸಿಕೊಂಡಿದ್ದ ಜಾತೀಯತೆ, ಅಸ್ಪೃಶ್ಯತೆ, ವರ್ಣಭೇದ ಮೊದಲಾದ ಅನಿಷ್ಟ ಪಿಡುಗುಗಳ ಜತೆಗೆ ಸವರ್ಣೀಯರ ದಬ್ಬಾಳಿಕೆ, ದೌರ್ಜನ್ಯಗಳು ಮೇರೆಮೀರಿದ ಸಂದರ್ಭದಲ್ಲಿ ದಕ್ಷಿಣ ಭಾರತದಲ್ಲಿ ಸಾಮಾಜಿಕ ಸುಧಾರಣಾ ಚಳುವಳಿಯ ಗಾಳಿ ಬೀಸಲಾರಂಭಿಸಿತು. ಆ ಸಾಮಾಜಿಕ ಚಳುವಳಿಯ ನಾಯಕತ್ವವನ್ನು ಮಹಾತ್ಮ ಜ್ಯೋತುಬಾಪುಲೆ, ಶಾಹು ಮಹಾರಾಜ್, ನಾರಾಯಣ ಗುರು, ನಾಲ್ವಡಿ ಕೃಷ್ಣರಾಜ ಒಡೆಯರು ಮೊದಲಾದವರು ವಹಿಸಿದ್ದರು. ಇವರಿಗೆಲ್ಲಾ ನಿಮ್ನ ವರ್ಗೀಯ ಜನರ ವಿಕಾಸಕ್ಕೆ ಶ್ರಮಿಸಲು ಪ್ರೇರಣೆ ನೀಡುತ್ತಾ ಮಹಾತ್ಮಾ ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣಾ ಆಂದೋಲನಕ್ಕೆ ಸ್ಫೂರ್ತಿ, ಪ್ರೇರಣೆ, ಮಾರ್ಗದರ್ಶಕರಾದವರು, ದಕ್ಷಿಣ ಕನ್ನಡ ಜಿಲ್ಲೆಯ ಶೋಷಿತ ಜನಾಂಗದ ಬಾಳಿನಲ್ಲಿ ನೈತಿಕ ಧೈರ್ಯದ ನಂದಾದೀಪ ಹಚ್ಚಿದ ದಲಿತ ಬಂಧು ಶ್ರೀ ಕುದ್ಮುಲ್ ರಂಗರಾವ್.

ಇಂದಿಗೆ ನೂರು ವರ್ಷಗಳ ಹಿಂದೆಯೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ಪೃಶ್ಯ ಜನಾಂಗದವರಿಗೆ ಅರಿವು ಮೂಡಿಸಲು ಮತ್ತು ಹಸಿವು ನೀಗಿಸಲು ಅಸ್ಪೃಶ್ಯರ ಮಕ್ಕಳಿಗಾಗಿಯೇ ಜಿಲ್ಲೆಯಲ್ಲಿ ಹತ್ತಾರು ಕಡೆ ಶಾಲೆಗಳನ್ನು ತೆರೆದು ವಿದ್ಯಾರ್ಥಿ ನಿಲಯಗಳನ್ನು ನಿರ್ಮಿಸಿ ವಿಧವೆಯರು ಮತ್ತು ದೇವದಾಸಿಯರ ಕಲ್ಯಾಣಕ್ಕಾಗಿ ಆಶ್ರಮಗಳನ್ನು ನಿರ್ಮಿಸಿ, ಶ್ರೀಮಂತರಿಂದ ನೂರಾರು ಎಕರೆ ಜಮೀನು ಕೊಂಡು ದಲಿತರಿಗೆ ಕೃಷಿ ಮಾಡಲು ಮತ್ತು ವಸತಿಗೆ ನಿವೇಶನಗಳನ್ನು ಉಚಿತವಾಗಿ ಹಂಚಿ, ದಲಿತ ಜನರ ಆಶಾಕಿರಣವಾಗಿ, ಸಂಪ್ರದಾಯ ಶರಣರಿಗೆ ಸಿಡಿಲಾಗಿ ಕುದ್ಮಲ್ ರಂಗರಾಯರು ಹೋರಾಡಿದರು.

ದಕ್ಷಿಣ ಕನ್ನಡ ಜಿಲ್ಲೆಯೊಂದಿಗೆ ಮೊದಲು ಒಂದಾಗಿದ್ದ ಕಾಸರಗೋಡಿನ ಕುದ್ಮಲ್ ಎಂಬ ಚಿಕ್ಕ ಗ್ರಾಮದಲ್ಲಿ ಜಿಲ್ಲೆಯ ಪ್ರತಿಷ್ಠಿತ ಸಾರಸ್ವತ ಬ್ರಾಹ್ಮಣ ಕುಟುಂಬದಲ್ಲಿ ೨೯-೬-೧೮೫೯ರಂದು ದೇವಪ್ಪಯ್ಯ ಮತ್ತು ಶ್ರೀಮತಿ ಗೌರಿ ದಂಪತಿಗಳ ಮಗನಾಗಿ ರಂಗರಾವ್ ಜನಿಸಿದರು. ಶಿಕ್ಷಣ ಮುಗಿಸಿ ವಕೀಲ ವೃತ್ತಿಯಲ್ಲಿ ತೊಡಗಿದ್ದ ರಂಗರಾಯರು ಬಡವರ ಬಂಧು, ಬಡವರ ವಕೀಲರೆಂದೇ ಪ್ರಸಿದ್ಧರಾದರು. ಒಮ್ಮೆ ಸವರ್ಣೀಯನೊಬ್ಬನ ಬಲಾತ್ಕಾರದಿಂದ ಗರ್ಭಿಣಿಯಾಗಿದ್ದ ದಲಿತ ಯುವತಿಯ ಬಗ್ಗೆ ವಿಷಯ ತಿಳಿದ ಕುದ್ಮಲರು ದಲಿತ ಯುವತಿಯ ಪರವಾಗಿ ದಾವೆ ಹೂಡಿ ಸವರ್ಣೀಯನಿಗೆ ನ್ಯಾಯಾಲಯದಿಂದ ಜೈಲು ಶಿಕ್ಷೆ ಕೊಡಿಸಿ ದಲಿತ ಯುವತಿಗೆ ಜೀವನಾಂಶ ಕೊಡಿಸಿದರು. ಬ್ರಾಹ್ಮಣ ತರುಣಿಯಲ್ಲಿ ಅನುರಕ್ತನಾದ ಶೂದ್ರ ಮರಣ ದಂಡನೆಗೆ ಗುರಿ ಮಾಡುವ, ಶೂದ್ರ ತರುಣಿಯನ್ನು ಮೋಹಿಸಿದ ಬ್ರಾಹ್ಮಣನಿಗೆ ಶುದ್ಧಿಯ ಮೂಲಕ ಕ್ಷಮಿಸುವ ಮತ್ತು ಶೂದ್ರನನ್ನು ಕೊಂದ ಉತ್ತಮ ಕುಲದವರಿಗೆ ಶಿಕ್ಷೆಯಿಲ್ಲ, ಉತ್ತಮ ಕುಲದವರನ್ನು ಕೊಂದ ಶೂದ್ರರಿಗೆ ಮರಣ ದಂಡನೆಯೇ ಕನಿಷ್ಠ ಶಿಕ್ಷೆ ಜಾರಿಯಲ್ಲಿದ್ದ ಆ ದಿನಗಳಲ್ಲಿ ರಂಗರಾಯರು ಸವರ್ಣೀಯರ ಕರ್ಣಕಠೋರದ ನಿಂದೆ, ಅಪಮಾನಗಳಿಗೆ ಬಲಿಯಾದರು. ಇದರಿಂದಾಗಿ ರಂಗರಾಯರು ಕೆಲವರಿಗೆ ಅಪ್ರಿಯರಾಗಿ ಕಂಡುಬಂದರೂ ಬಡವರು ಮತ್ತು ದಲಿತರಿಗೆ ಅತೀ ಪ್ರಿಯರಾಗಿ, ದನಿ ಇಲ್ಲದವರಿಗೆ ದನಿ ಕೊಟ್ಟು ಅವರಲ್ಲಿ ಆತ್ಮಸ್ಥೈರ್ಯ ತುಂಬಿದ ಕುದ್ಮಲರು ದಲಿತರ ಆಶಾಕಿರಣರಾದರು.

೧೮೮೮ರಲ್ಲಿ ಮಂಗಳೂರು ಜಿಲ್ಲಾ ಕೋರ್ಟಿನಲ್ಲಿ ನಡೆದ ಅನಿರೀಕ್ಷಿತ ಘಟನೆ ರಂಗರಾಯರ ಜೀವನದಲ್ಲಿ ಹೊಸ ತಿರುವು ಸೃಷ್ಟಿಸಿತು. ಬೆಂದೂರು ಬಾಬು ಎನ್ನುವ ಅಸ್ಪೃಶ್ಯ ವ್ಯಕ್ತಿ ಕೋರ್ಟಿನಲ್ಲಿ ಪೇದೆ ಕೆಲಸಕ್ಕಾಗಿ ಅರ್ಜಿ ಹಾಕಿದ್ದು ಮತ್ತು ಆಂಗ್ಲ ನ್ಯಾಯಾಧೀಶ ನೇಮಕ ಮಾಡಿದ ವಿಷಯ ತಿಳಿದ ಸವರ್ಣೀಯರು ಒಟ್ಟಾಗಿ ಪ್ರತಿಭಟಿಸಿದರು. ನ್ಯಾಯಾಧೀಶರಿಗೆ ಕೊಲೆ ಬೆದರಿಕೆ ಹಾಕಿದರು. ನ್ಯಾಯಾಲಯವನ್ನು ಬಹಿಷ್ಕರಿಸಿದರು. ಇದನ್ನೆಲ್ಲಾ ಗಮನಿಸಿದ ರಂಗರಾಯರು ಈ ದೀನ ದಲಿತರ ಮತ್ತು ಬಡಜನರ ದಾರುಣ ಪರಿಸ್ಥಿತಿಯ ಬದಲಾವಣೆಗಾಗಿ ದುಡಿಯಬೇಕೆಂದು ನಿರ್ಧರಿಸಿ ವಕೀಲ ವೃತ್ತಿಯನ್ನು ತ್ಯಜಿಸಿ, ಜೀವನ ಪರ್ಯಂತ ದಲಿತೋದ್ಧಾರಕ್ಕಾಗಿ ತಮ್ಮ ಶಕ್ತಿಯನ್ನೆಲ್ಲ ವಿನಿಯೋಗಿಸಲು ನಿರ್ಧರಿಸಿದರು. ಅಸ್ಪೃಶ್ಯರಾಗಿ ಹುಟ್ಟಿ ಸ್ವತಃ ಕಷ್ಟ ಅವಮಾನಗಳನ್ನು ಅನುಭವಿಸಿದ ಅಂಬೇಡ್ಕರ್ ಅವರು ಶೋಷಿತ ವರ್ಗದ ಸಂಘಟನೆಗೆ ಮುಂದಾದರೆ; ಸಾರಸ್ವತ ಬ್ರಾಹ್ಮಣ

ಸಮಾಜದ ಶ್ರೀಮಂತ ಕುಟುಂಬದಲ್ಲಿ ಜನಿಸಿದ ರಂಗರಾಯರು ಗೌತಮಬುದ್ಧ ಮತ್ತು ಬಸವಣ್ಣನ ಸಾಮಾಜಿಕ ಕ್ರಾಂತಿಯಿಂದ ಪ್ರಭಾವಿತರಾಗಿದ್ದರು. ದಲಿತರ ಸರ್ವತೋಮುಖ ಏಳಿಗೆಯ ಮಂತ್ರದೀಕ್ಷೆಯನ್ನು ಕೈಗೊಂಡು ಇಡೀ ಜೀವನವನ್ನು ಅದಕ್ಕಾಗಿ ಧಾರೆಯೆರೆಯಲು ನಿರ್ಧರಿಸಿದರು.

ಪ್ರಗತಿಗೆ ವಿದ್ಯೆಯೇ ಮೂಲವೆಂದು ನಂಬಿದ್ದ ಕುದ್ಮುಲರು ಶೋಷಿತ ಸಮುದಾಯದ ಮಕ್ಕಳಿಗೆ ಶಿಕ್ಷಣ ನೀಡುವ ಕುರಿತು ಚಿಂತಿಸಿದರು. ಅಂದಿನ ಕಾಲದಲ್ಲಿ ಜಿಲ್ಲೆಯ ದಲಿತರಿಗೆ ಯಾವುದೇ ಶಾಲೆಗಳಲ್ಲಿ ಮುಕ್ತ ಪ್ರವೇಶ ಇರಲಿಲ್ಲ. ಅಸ್ಪೃಶ್ಯರನ್ನು ಸವರ್ಣೀಯರು ಮುಟ್ಟುವುದಕ್ಕೂ ಕೂಡ ಹೇಸುತ್ತಿದ್ದರು. ಸಾರ್ವಜನಿಕ ಕೆರೆ, ಬಾವಿ, ಹೊಟೇಲುಗಳಲ್ಲಿ ಪ್ರವೇಶ ನಿಷಿದ್ಧವಾಗಿತ್ತು. ಆದ ಕಾರಣ ದಲಿತರನ್ನು ವಿದ್ಯಾವಂತರನ್ನಾಗಿ ಮಾಡುವುದು ಮತ್ತು ಅವರ ಶ್ರೇಯಸ್ಸಿಗಾಗಿ ದುಡಿಯುವುದು ಅಂದಿನ ಕಾಲದಲ್ಲಿ ಬಲು ಅಪ್ರಿಯ ಕೆಲಸ. ಆದರೆ ರಂಗರಾಯರು ಡಿ.ಸಿ.ಎಂ. (Depressed Classes Mission) ಎಂಬ ಸಂಸ್ಥೆ ಸ್ಥಾಪಿಸಿ ಮಂಗಳೂರಿನ ಕಂಕನಾಡಿ, ಉಳ್ಳಾಲ, ಮುಲ್ಕಿ, ಬೋಳೂರು, ಉಡುಪಿ, ಬನ್ನಂಜೆ, ನೇಜಾರು, ಶೇಡಿಗುಡ್ಡೆ, ಅತ್ತಾವರ ಬಾಬುಗುಡ್ಡೆ, ದಡ್ಡಲ್ ಕಾಡುಗಳಲ್ಲಿ ಶಾಲೆಗಳನ್ನು ತೆರೆದರು. ಅಂದು ರಂಗರಾಯರು ಸ್ಥಾಪಿಸಿದ ಶಾಲೆಗಳಿಗೆ 'ಪಂಚಮ ಶಾಲೆ'ಗಳು ಎಂಬುದಾಗಿ ಕರೆಯುತ್ತಿದ್ದರು. ಶೇಡಿಗುಡ್ಡೆ ಎಂಬಲ್ಲಿ ವೃತ್ತಿಪರ ಶಿಕ್ಷಣ ನೀಡಲು ಕೈಗಾರಿಕಾ ತರಬೇತಿ ಶಾಲೆ ಸ್ಥಾಪಿಸಿದರು. ಹಿಂದೂ ಅಧ್ಯಾಪಕರು ಅಸ್ಪೃಶ್ಯರಿಗೆ ವಿದ್ಯೆ ಕಲಿಸಲು ನಿರಾಕರಿಸಿದ ಕಾರಣ ರಂಗರಾಯರು ಕ್ರೈಸ್ತ ಅಧ್ಯಾಪಕರನ್ನು ನೇಮಿಸಿಕೊಂಡರು. ಶಾಲೆಗಳಲ್ಲಿ ಮಧ್ಯಾಹ್ನದ ಊಟಕ್ಕೆ ವ್ಯವಸ್ಥೆ ಮಾಡಿ ಮಕ್ಕಳು ಶಾಲೆಗೆ ತಪ್ಪದೆ ಬರುವಂತೆ ಪ್ರೋತ್ಸಾಹಿಸಲು ಅಂದು ದಿನಕ್ಕೆ ೨ ಪೈಸೆ ನಗದು ಹಣ ನೀಡುತ್ತಿದ್ದರು. ಹಗಲಲ್ಲಿ ಸೂರ್ಯನ ಬೆಳಕನ್ನೂ ಸಹ ದಲಿತರು ಭಯದಿಂದ ವೀಕ್ಷಿಸುತ್ತಿದ್ದಾರೇನೋ ಎಂಬ ಅನುಮಾನ ಬರುವಂತಹ ದಿನಗಳಲ್ಲಿ ಕುದ್ಮುಲ ರಂಗರಾಯರು ಅಸ್ಪೃಶ್ಯರ ಮಕ್ಕಳನ್ನು ತೊಡೆಯ ಮೇಲೇರಿಸಿಕೊಂಡು ಅವರ ಕೈ ಮೈ ತೊಳೆದು ಶುಭ್ರಗೊಳಿಸುತ್ತಿದ್ದರು. ದಲಿತರ ಮನೆಗಳಿಗೆ ಹೋಗಿ ಅವರ ತಲೆಯನ್ನು ನೇವರಿಸಿದರು, ಅವರ ಕಣ್ಣೀರೊರೆಸಿದರು. ಅವರ ಜತೆ ಕುಳಿತು ಊಟ ಮಾಡಿದರು. ಅಸ್ಪೃಶ್ಯರೊಟ್ಟಿಗೆ ಅವರ ಹಟ್ಟಿಗಳಲ್ಲೇ ಮಲಗಿ ಮಕ್ಕಳನ್ನು ಶಾಲೆಗೆ ಸೇರಿಸಲು ಮನ ಒಲಿಸಿದರು. ಕುದ್ಮುಲರ ಉದಾರ ಮನೋಧರ್ಮದ ಫಲವಾಗಿಯೇ ಜಿಲ್ಲೆಯ ಬಹುಸಂಖ್ಯಾತ ದಲಿತ ಜನ ಸಮುದಾಯದ ಪ್ರತಿಭೆಗಳು ಶತಮಾನದ ಹಿಂದೆಯೇ ಬೆಳಕಿಗೆ ಬರತೊಡಗಿದವು. ನಿಧಾನವಾಗಿಯಾದರೂ ಅಕ್ಷರಸ್ಥರಾಗತೊಡಗಿದರು. ಶಿಕ್ಷಣ ಮತ್ತು ಉದ್ಯೋಗದಲ್ಲಿ ಅವಕಾಶ ಸಿಕ್ಕರೆ ತಾವೂ ಹೇಗೆ ಉನ್ನತಿಗೇರಬಲ್ಲೆವೆಂಬುದನ್ನು ನಿರೂಪಿಸಿದರು. ಅವರು ನೀಡಿದ ಶಿಕ್ಷಣ ದಕ್ಷಿಣ ಕನ್ನಡ ಜಿಲ್ಲೆಯ ದಲಿತ ಸಮುದಾಯದ ನಿಜವಾದ ಅಭಿವೃದ್ಧಿಗೆ ಮೂಲ ನಾಂದಿಯಾಯಿತು ಎಂದೇ ಹೇಳಬಹುದು.

ಭಾರತೀಯ ಸಮಾಜಕ್ಕೆ ಅಂಟಿಕೊಂಡು ಬಂದಿದ್ದ ಅನೇಕ ಸಾಮಾಜಿಕ ಜಾಡ್ಯಗಳಲ್ಲಿ ಜೀತಪದ್ಧತಿಯೂ ಒಂದು. ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸು ಅವರು ಜೀತ ಮುಕ್ತಿಯನ್ನು

ಜಾರಿಗೆ ತಂದು ಸಾವಿರಾರು ಜೀತದಾರರನ್ನು ಬಿಡುಗಡೆ ಮಾಡಿ ಅವರೆಲ್ಲ ಸ್ವತಂತ್ರವಾಗಿ ಬದುಕಲು ವ್ಯವಸ್ಥೆ ಮಾಡಿದಂತೆ, ಶತಮಾನದ ಹಿಂದೆಯೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುದ್ಮುಲ್ ಜೀತದಾಳುಗಳನ್ನು ಬಿಡಿಸಿದರು. ಸವರ್ಣೀಯರಿಂದ ಜೀವ ಬೆದರಿಕೆ ಬಂದರೂ ಕುಗ್ಗದೆ ಅವರು ಸ್ಥಾಪಿಸಿದ್ದ ಡಿಸಿಎಂ ಮಿಶನ್ ಶಾಲೆಗಳಲ್ಲಿ ಮತ್ತು ಕೈಗಾರಿಕಾ ತರಬೇತಿ ಕೇಂದ್ರಗಳಲ್ಲಿ ಬಡಗಿ, ನೇಯ್ಗೆ, ತೋಟಗಾರಿಕೆ, ಕಸೂತಿ, ರೇಷ್ಮೆ ಹುಳು ಸಾಕಾಣಿಕೆ, ತಕಲಿಯಲ್ಲಿ ನೂಲು ಸುತ್ತುವುದು ಇತ್ಯಾದಿಯಾಗಿ ವೃತ್ತಿಪರ ತರಬೇತಿ ನೀಡಿದರು. ಸ್ವಾವಲಂಬಿ ಜೀವನಕ್ಕೆ ದಾರಿ ತೋರಿದರು. ಅನ್ಯರ ಮನೆಯ ಅನ್ನಕ್ಕಿಂತ ಆತ್ಮಗೌರವದ ಗಂಜಿ ಊಟವೇ ದೊಡ್ಡದೆಂದು ತೋರಿಸಿಕೊಟ್ಟರು.

ಜಿಲ್ಲೆಯ ಅಲೆಮಾರಿ ಕೊರಗ ಜನಾಂಗದವರಿಗೆ ಕೋರ್ಟ್‌ಗುಡ್ಡೆ ಬಳಿ ಸಾಲು ಮನೆಗಳನ್ನು ಕಟ್ಟಿಸಿ ಅವರ ಕುಲಕಸುಬಾದ ಗುಡಿಕೈಗಾರಿಕೆ ಅಭಿವೃದ್ಧಿಪಡಿಸಲು ನೆರವಾದರು. ಉಡುಪಿ, ಪುತ್ತೂರುಗಳಲ್ಲಿ ದರಖಾಸ್ತು ಜಮೀನು ಕೊಡಿಸಿ ಕೃಷಿಗೆ ತೊಡಗಿಸಿದರು. ದಲಿತರ ಆರ್ಥಿಕ ಅಭಿವೃದ್ಧಿಗಾಗಿ, ಸಹಕಾರ ಮನೋವೃತ್ತಿ ಬೆಳವಣಿಗೆಗಾಗಿ ಕೋರ್ಟ್ ಹಿಲ್ಸ್‌ನಲ್ಲಿ ಆದಿ ದ್ರಾವಿಡ ಸಹಕಾರ ಸಂಘ ಸ್ಥಾಪಿಸಿದರು. ದಲಿತರು ವಿದ್ಯಾವಂತರಾದರೆ ಅವರು ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಗತಿ ಹೊಂದಿದರೆ, ಜೀತದ ಕೆಲಸವನ್ನು ಮುಂದೆ ಮಾಡುವುದಾದರೂ ಯಾರು? ಎಂಬ ಭಯ ಸವರ್ಣೀಯರಲ್ಲಿ ಮೂಡಿತು. ಕುದ್ಮುಲ್ ರಂಗರಾಯರನ್ನು ಅವರ ಸಾರಸ್ವತ ಸಮಾಜ ಬಾಂಧವರೇ ಬಹಿಷ್ಕರಿಸಿದರು. ಅವರಿಗೆ ದೇವಾಲಯ ಪ್ರವೇಶ ನಿಷೇಧಿಸಿದರು. ಕ್ಷೌರಿಕರು ಕ್ಷೌರ ಮಾಡಲು, ಅಗಸರು ರಾಯರ ಬಟ್ಟೆ ಮುಟ್ಟಲು ನಿರಾಕರಿಸಿದರು. ಕುದ್ಮುಲರು ಹಾದಿಯಲ್ಲಿ ಹೋಗುವಾಗ ಪುಂಡರು ಮೈ ಮೇಲೆ ಸಗಣಿ ಸುರಿದು ಅವಮಾನಿಸಿದರು. ಅವರ ಹೆಣ್ಣು ಮಕ್ಕಳನ್ನು ಮಾನಭಂಗ ಮಾಡುವುದಾಗಿ ಬೆದರಿಸಿ ಪತ್ರ ಬರೆದರು. ಈ ಅಪಮಾನ, ಕಿರುಕುಳ, ಬೆದರಿಕೆಗಳಿಗೆಲ್ಲ ಅಂಜದ ಕುದ್ಮುಲರು "ನನ್ನ ಶಾಲೆಯಲ್ಲಿ ಕಲಿತ ಒಬ್ಬ ದಲಿತ ಜನಾಂಗದ ಹುಡುಗ ದೊಡ್ಡ ವಿದ್ಯಾವಂತನಾಗಿ ಸರ್ಕಾರಿ ನೌಕರಿಗೆ ಸೇರಿ ನಮ್ಮೂರ ರಸ್ತೆಗಳಲ್ಲಿ ಕಾರಿನಲ್ಲಿ ಓಡಾಡಬೇಕು. ಆಗ ರಸ್ತೆಯಲ್ಲಿ ಎದ್ದ ಧೂಳು ನನ್ನ ತಲೆಗೆ ತಾಗಿದರೆ ಅಂದು ನನ್ನ ಜನ್ಮ ಸಾರ್ಥಕ"ವೆಂದು ಹೇಳಿದರು.

ದಲಿತರ ವಿಮೋಚನೆಯಾಗಬೇಕಾದರೆ ಮೊದಲು ದಲಿತ ಮಹಿಳೆಯರ ವಿಮೋಚನೆಯಾಗಬೇಕೆಂದು ಅರಿತ ಕುದ್ಮುಲ್ ರಂಗರಾಯರು ದಲಿತ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷ ಆದ್ಯತೆ ನೀಡಿದರು. ಜಿಲ್ಲೆಯ ದೂರದ ಹಳ್ಳಿಗಳಿಂದ ಬರುವ ಹೆಣ್ಣು ಮಕ್ಕಳಿಗಾಗಿ ನಗರದ ಶೇಡಿಗುಡ್ಡೆಯಲ್ಲಿ ವಿದ್ಯಾರ್ಥಿ ನಿಲಯ ತೆರೆದರು. ಇದರೊಂದಿಗೆ ಅಬಲೆಯರ ಮತ್ತು ವಿಧವೆಯರ ವಿದ್ಯಾಭ್ಯಾಸಕ್ಕಾಗಿ ಆಶ್ರಮಗಳನ್ನು ನಿರ್ಮಿಸಿದರು. ಈ ಆಶ್ರಮಗಳಲ್ಲಿ ಎಲ್ಲಾ ಜಾತಿಯ ಅನಾಥ ಮಹಿಳೆಯರಿಗೆ ರಕ್ಷಣೆಯೊಂದಿಗೆ ಜೀವನೋಪಾಯಕ್ಕೆ ಮಾರ್ಗಗಳನ್ನು ಕಲ್ಪಿಸಿದರು. ಹಲವು ಅಸ್ಪೃಶ್ಯರ ಒಳಜಾತಿಗಳೊಂದಿಗೆ ವಿವಾಹ ಸಂಬಂಧ ಏರ್ಪಡಿಸಿದ ಕುದ್ಮುಲರು,

ದೇವದಾಸಿಯರ ಮತ್ತು ವಿಧವೆಯರ ಮರು ವಿವಾಹ ಮಾಡಿಸಿ ಸಮಾಜದ ಒಳಿತಿಗಾಗಿ ತಮ್ಮನ್ನು ತೆತ್ತುಕೊಂಡರು.

೧೯೧೨ರಲ್ಲಿ ತಮ್ಮ ಮಗಳು ರಾಧಾಬಾಯಿಯವರನ್ನು ಮದ್ರಾಸಿನ ಡಾ। ಸುಬ್ರಾಯನ್ ಅವರಿಗೆ ಕೊಟ್ಟು ಅಂತರ್ಜಾತಿಯ ಸರಳ ವಿವಾಹ ಮಾಡಿದರು. ಈ ಮದುವೆಯ ಪೌರೋಹಿತ್ಯವನ್ನು ಚಕ್ರವರ್ತಿ ರಾಜಗೋಪಾಲಾಚಾರ್ಯರು ವಹಿಸಿದ್ದರು. ಅದ್ದೂರಿ, ಆಡಂಬರ, ವಧುದಕ್ಷಿಣೆ, ವರದಕ್ಷಿಣೆ, ದುಂದು ವೆಚ್ಚಗಳಿಗೆ ಕಡಿವಾಣ ಹಾಕಿದ ಈ ಅಂತರ್ಜಾತಿ ಸರಳ ಮದುವೆಯಿಂದ ಪ್ರೇರಣೆಗೊಂಡ ಗಾಂಧೀಜಿಯವರು, ತಮ್ಮ ಮಗನಿಗೂ ಅಂತರ್ಜಾತಿ ವಿವಾಹ ಮಾಡುವುದರ ಮೂಲಕ ರಾಜಾಜಿಯವರ ಮಗಳನ್ನು ತಮ್ಮ ಸೊಸೆಯಾಗಿ ತಂದುಕೊಂಡರು.

ಸಾವಿರಾರು ವರ್ಷಗಳಿಂದ ಶೋಷಣೆಗೆ ಒಳಗಾದ ಜನರಿಗೆ ರಂಗರಾಯರು ಸ್ವಾಭಿಮಾನ, ಘನತೆಯನ್ನು ಗಳಿಸಿಕೊಟ್ಟರು. ದನಿಹೀನ ಜನರ ಬದುಕಿಗೆ ಮಾತನ್ನು ಕಲಿಸಿಕೊಟ್ಟರು. ದಲಿತರ ದಾಸ ಸಂಕೋಲೆಗಳನ್ನು ಕಳಚಲು ಹಲವಾರು ಯೋಜನೆಗಳನ್ನು ಕೈಗೆತ್ತಿಕೊಂಡರು. ಅದರಲ್ಲಿ ವಿಶೇಷವಾಗಿ ಜಿಲ್ಲೆಯ ಹಲವಾರು ಕಡೆಗಳಲ್ಲಿ ಅಂದಿನ ಶ್ರೀಮಂತರಿಂದ ನೂರಾರು ಎಕ್ಕರೆ ಜಮೀನನ್ನು ಖರೀದಿಸಿ, ದೇರೆಬೈಲಿನ ದಡ್ಡಲ್‌ಕಾಡು, ಬಿಜ್ಯೆ, ಕಾಪಿಕಾಡು, ಕೋಡ್ದೇಲು, ಉಡುಪಿಯ ಬನ್ನಂಜೆ, ಉದ್ಯಾವರ, ಪಣಂಬೂರು, ಬಾಬುಗುಡ್ಡೆ, ಮುಲ್ಕಿ, ಬ್ರಹ್ಮಾವರ, ಪುತ್ತೂರು ಹೀಗೆ ಹತ್ತಾರು ಕಡೆಗಳಲ್ಲಿ ದಲಿತ ಜನಾಂಗದವರಿಗೆ ಕೃಷಿ ಮಾಡಲು ಮತ್ತು ವಸತಿ ಹೀನರಿಗೆ ಮನೆ ಕಟ್ಟಿಕೊಳ್ಳಲು ಉಚಿತವಾಗಿ ಹಂಚಿದರು. ವರ್ಷವಿಡೀ ನೀರು ಸಿಗುವಂತೆ ಹತ್ತಾರು ಬಾವಿಗಳನ್ನು ತೋಡಿಸಿಕೊಟ್ಟರು. ಅಂದು ರಂಗರಾಯರು ಉಚಿತವಾಗಿ ನೀಡಿದ ಜಮೀನು ಮತ್ತು ನಿವೇಶನಗಳು ಇಂದು ಹತ್ತಾರು ಕೋಟಿ ಬೆಲೆಬಾಳುತ್ತವೆ. ಸವರ್ಣೀಯರ ವಿರೋಧದ ನಡುವೆ ಹಣದ ಬೆಂಬಲವಿಲ್ಲದೆ, ಪತ್ರಿಕೆ, ರೈಲು, ಬಸ್ಸುಗಳಿಲ್ಲದ ಆ ಕಾಲದಲ್ಲಿ ಕಾಲ್ನಡಿಗೆಯಲ್ಲಿ ಊರೂರು ಅಲೆದು ದಲಿತರ ಧಮನಿಗಳಲ್ಲಿ ಹೊಸ ಚೈತನ್ಯ ತುಂಬಿದ ಕುದ್ಮುಲರು ನಿಜಕ್ಕೂ ಪ್ರಾತಃಸ್ಮರಣೀಯರು.

ಸಂವಿಧಾನ ಶಿಲ್ಪಿ ಅಂಬೇಡ್ಕರ್ ಜನ್ಮ ತಾಳುವ ಮೊದಲೇ ದಕ್ಷಿಣ ಕನ್ನಡ ಜಿಲ್ಲೆಯ ದಲಿತ ಸಮುದಾಯಕ್ಕೆ ರಾಜಕೀಯ ಮೀಸಲಾತಿ ಒದಗಿಸಿಕೊಟ್ಟ ಕೀರ್ತಿ ಕುದ್ಮುಲರಿಗೆ ಸಲ್ಲುತ್ತದೆ. ಸ್ಥಳೀಯ ಸಂಸ್ಥೆಗಳಾದ ಜಿಲ್ಲಾ ಬೋರ್ಡ್ ಮತ್ತು ಪುರಸಭೆಯಲ್ಲಿ ದಲಿತ ಜನಾಂಗದ ಸದಸ್ಯರಿಗೆ ಅವಕಾಶ ನೀಡಬೇಕೆಂದು ಕುದ್ಮುಲರು ಜನ ಸಂಘಟಿಸಿ ಹೋರಾಟಕ್ಕಿಳಿದರು. ಅವರ ಅನವರತ ಹೋರಾಟದ ಫಲವಾಗಿ ಶ್ರೀ ಅಂಗರ ಮಾಸ್ತರ್ ಮತ್ತು ಗೋವಿಂದ ಮಾಸ್ತರ್ ಇಬ್ಬರೂ ಪ್ರಥಮ ಬಾರಿಗೆ ಸ್ಥಳೀಯ ಸಂಸ್ಥೆಗಳಿಗೆ ಸದಸ್ಯರಾಗಲು ಅವಕಾಶವಾಯಿತು.

ದಲಿತ ಬಂಧು ಕುದ್ಮುಲರ ನಿಸ್ವಾರ್ಥ ಸೇವೆ ದೇಶ ವಿದೇಶಗಳಲ್ಲಿ ಖ್ಯಾತಿ ಪಡೆಯಿತು. ಅವರ ಸಮಾಜ ಸುಧಾರಣೆಯ ಕಾರ್ಯವನ್ನು ಮೆಚ್ಚಿ ಅಮೇರಿಕಾದ ಖ್ಯಾತ ಉದ್ಯಮಿ ಹೆನ್ರಿ

ಫೋರ್ಡ್, ಜಸ್ಟಿಸ್ ವಿಲ್ಬರ್ಟ್, ಡಾ। ಕಾರ್ನರ್ಟ್ ಹೀಗೆ ಹತ್ತಾರು ಶ್ರೀಮಂತರು ಸಾವಿರಾರು ಡಾಲರ್‌ಗಳ ನಿಧಿಯನ್ನು ಡಿ.ಸಿ.ಎಂ. ಸಂಸ್ಥೆಗೆ ಅರ್ಪಿಸಿದರು. ಮಂಗಳೂರಿಗೆ ಅಂದಿನ ಕಾಲದಲ್ಲಿ ಆಗಮಿಸುತ್ತಿದ್ದ ಯಾರೇ ಪ್ರಮುಖರು ಡಿ.ಸಿ.ಎಂ. ಸಂಸ್ಥೆಗೆ ಭೇಟಿ ನೀಡದೆ ಹೋಗುತ್ತಿರಲಿಲ್ಲ. ಮಹಾಕವಿ ರವೀಂದ್ರನಾಥ್ ಠಾಗೂರ್, ದೀನಬಂಧು ಸಿ.ಎಸ್. ಅಂಡ್ರೂಸ್, ಡಾ। ಅನಿಬೆಸೆಂಟ್, ಗೋಪಾಲಕೃಷ್ಣ ಗೋಖಲೆ ಮತ್ತು ಜಿ.ಕೆ. ದೇವದರ್ ಇವರೆಲ್ಲಾ ಸಂಸ್ಥೆಗೆ ಭೇಟಿ ನೀಡಿ ಕುದ್ಮುಲರ ಮಾನವೀಯ ಸೇವೆಯನ್ನು ಕಣ್ಣಾರೆ ಕಂಡು ಅಭಿನಂದಿಸಿದರು.

ದಿನಾಂಕ ೨೪–೨–೧೯೩೪ರಂದು ಗಾಂಧೀಜಿ ಮಂಗಳೂರಿಗೆ ಬಂದಾಗ ಸಂಜೆ ೭ಕ್ಕೆ ಡಿ.ಸಿ.ಎಂ. ಸಂಸ್ಥೆಗೆ ಭೇಟಿ ನೀಡಿ, ರಂಗರಾಯರು ಮಾಡಿದ ಮಾನವೀಯ ಸೇವಾ ಕಾರ್ಯಗಳನ್ನು ಕಣ್ಣಾರೆ ಕಂಡು ಅತ್ಯಂತ ಸಂತಸಗೊಂಡರು. ನಂತರ ನಡೆದ ಬೃಹತ್ ಸಾರ್ವಜನಿಕ ಸಭೆಯಲ್ಲಿ ಇಂದು ನಾನು ಕೆಲವೊಂದು ವಿಚಾರಗಳನ್ನು ಪೂಜ್ಯ ರಂಗರಾಯರಿಂದ ಅರಿತುಕೊಂಡೆ. ಅವರು ನಮಗೆ ಒಂದು ಉತ್ತಮ ಮೇಲ್ಪಂಕ್ತಿಯನ್ನು ತೋರಿಸಿದ್ದಾರೆ. ಅಸ್ಪೃಶ್ಯ ಜನಾಂಗದ ಪುನರುದ್ಧಾರ ಕಾರ್ಯದಲ್ಲಿ ಇಂದು ಆ ದಾರಿಯಲ್ಲಿ ಮುನ್ನಡೆಯುವ ರಂಗರಾಯರು ನನಗೆ ಮಾರ್ಗದರ್ಶನ ಮತ್ತು ಸ್ಫೂರ್ತಿಯನ್ನಿತ್ತಿದ್ದಾರೆ. ಅಸ್ಪೃಶ್ಯತಾ ನಿವಾರಣಾ ಕಾರ್ಯದಲ್ಲಿ ಕುದ್ಮುಲ ರಂಗರಾಯರು ನಿಜವಾಗಿಯೂ 'ನನ್ನ ಗುರುಗಳು' ಎಂಬುದಾಗಿ ಗಾಂಧೀಜಿ ಬೃಹತ್ ಸಾರ್ವಜನಿಕ ಸಭೆಯಲ್ಲಿ ಘೋಷಿಸಿದರು.

ಸಾರ್ವಜನಿಕ ಜೀವನದಲ್ಲಿ ಪ್ರಾಮಾಣಿಕತೆಯ ಹೆಗ್ಗುರುತೆನಿಸಿಕೊಂಡಿದ್ದ ರಂಗರಾಯರು ಅಧಿಕಾರ ಸ್ಥಾನಗಳನ್ನು ಧಿಕ್ಕರಿಸಿ ಸೇವಾ ಸ್ಥಾನಗಳನ್ನು ಆರಿಸಿಕೊಂಡವರು. ಆದರೂ ಆರ್ಥಿಕ ಸಂಕಷ್ಟದಿಂದ ಡಿ.ಸಿ.ಎಂ. ಸಂಸ್ಥೆಯನ್ನು ಮುನ್ನಡೆಸಲಾಗದೆ ೧೯೨೨ರಲ್ಲಿ ಭಾರತ ಸೇವಕ ಸಂಘಕ್ಕೆ ಒಪ್ಪಿಸಿದರು. ತಾವೂ ಬ್ರಹ್ಮಸಮಾಜ ಸೇರಿ ಈಶ್ವರಾನಂದ ಎಂಬ ಹೆಸರಿನಿಂದ ಸನ್ಯಾಸ ಸ್ವೀಕಾರ ಮಾಡಿದರು. ತಮಗೆ ಸರಕಾರವು ಕೊಟ್ಟಿದ್ದ 'ರಾವ್ ಸಾಹೇಬ್' ಎಂಬ ಬಿರುದಿನ ಪದಕ ಮತ್ತು ನೂರಾರು ಸೇವಾ ಪದಕಗಳು ಜತೆಯಲ್ಲಿದ್ದರೆ ಒಂದು ರೀತಿಯ ಹೆಮ್ಮೆ, ಅಹಂಕಾರ ಸದಾ ಕಾಡುವುದೆಂದು ಭಾವಿಸಿ ಸನ್ಯಾಸ ಸ್ವೀಕಾರದ ಪೂಜಾ ಸಮಾರಂಭದ ಹೋಮಕುಂಡದಲ್ಲಿ ಉರಿಯುತ್ತಿದ್ದ ಅಗ್ನಿಗೆ ಎಲ್ಲಾ ಬಿರುದು, ಪದಕ, ಪ್ರಶಸ್ತಿ ಪತ್ರಗಳನ್ನು ಸಮರ್ಪಿಸಿದರು. ಇಳಿ ವಯಸ್ಸಿನಲ್ಲಿ ಹೃದಯ ಬೇನೆ ಖಾಯಿಲೆಗೆ ತುತ್ತಾದ ರಂಗರಾಯರು ೧೯೨೮ ಜನವರಿ ೩೦ರಂದು ಸ್ವರ್ಗಸ್ಥರಾದರು. ಮುಂದೆ ಅದೇ ದಿನ ಉದ್ದೇಶ, ಗುರಿ, ಸಂಕಲ್ಪ ಒಂದೇ ಆಗಿದ್ದ ಗಾಂಧೀಜಿಯವರು ಸಹ ೧೯೪೮ ಜನವರಿ ೩೦ರಂದು ದೈವಾಧೀನರಾದದ್ದನ್ನು ಸ್ಮರಿಸಬಹುದಾಗಿದೆ.

ರಂಗರಾಯರು ತಮ್ಮ ಕಡೆಯ ಆಸೆ ಎಂದರೆ 'ಅಸ್ಪೃಶ್ಯ ಜನಾಂಗದಲ್ಲೇ ಅತೀ ಹಿಂದುಳಿದ ಜಾಡುಮಾಲಿಗಳು ಮಾತ್ರ ನನ್ನ ಪಾರ್ಥಿವ ಶರೀರವನ್ನು ಮುಟ್ಟಿ ಶವಸಂಸ್ಕಾರ ಮಾಡಬೇಕು. ಆಗ ಮಾತ್ರ ನನಗೆ ಚಿರಶಾಂತಿ ದೊರೆಯುವುದೆಂದು' ವೀಲುನಾಮೆಯಲ್ಲಿ ಬರೆದಿದ್ದರೆಂದು ತಿಳಿದಾಗ, ಅಂಥವರೊಬ್ಬರು ಇದ್ದರೆನ್ನುವುದನ್ನು ಈಗ ಊಹಿಸುವುದೂ ಕಷ್ಟ. ಭಾರತದ ಬೇರೆ ರಾಜ್ಯಗಳಲ್ಲೂ ಕೂಡ ಅವರಂಥ ದಲಿತ ಬಂಧು ಮತ್ತೊಬ್ಬರು ನಮಗೆ ಸಿಗಲಾರರು.

ಕಾರ್ತಿಕದ ಕಗ್ಗತ್ತಲಲ್ಲಿ ಆಕಾಶದೀಪವಾಗಿ ಬಂದ ಕುದ್ಮುಲ್ ರಂಗರಾವ್ ಅವರ ರಚನಾತ್ಮಕ ಮಾನವೀಯ ಸೇವಾ ಕಾರ್ಯಗಳಿಂದ ಸಾವಿರಾರು ದಲಿತರು ವಿದ್ಯಾವಂತರಾಗಿದ್ದಾರೆ. ಅದಕ್ಕಾಗಿ ಕುದ್ಮುಲರನ್ನು ಸ್ಮರಣೆ ಮಾಡಿದರೆ ಸಾಲದು, ಅಂದು ಅವರು ಗುಡಿಸಲುಗಳಲ್ಲಿ ಹಚ್ಚಿದ ಸ್ವಾಭಿಮಾನದ ಹಣತೆ ಆರದಂತೆ ಕಾಪಾಡಿ, ಇನ್ನೂ ಕಗ್ಗತ್ತಲಲ್ಲಿ ಬೆಳಕಿಗಾಗಿ ಕಾದಿರುವ ಸಾವಿರಾರು ಹಣತೆಗಳನ್ನು ದಲಿತ ವಿದ್ಯಾವಂತರು ಹಚ್ಚಿ ಬೆಳಗಿಸಿದರೆ ಕುದ್ಮುಲ್‌ರಂಗರಾಯರ ಸ್ಮರಣೆ ಸಾರ್ಥಕ ಆದೀತು. □

---

ಮುಗುಳವಳ್ಳಿ ಕೇಶವ ಧರಣಿ
ಸೀನಿಯರ್ ವೆಹಿಕಲ್ ಇನ್ಸ್‌ಪೆಕ್ಟರ್, ಆರ್.ಟಿ.ಓ.
ಹಂಪನಕಟ್ಟೆ
ಮಂಗಳೂರು

# ಸುಭಾಷ್ ಪಾಳೇಕರರ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ : ಒಂದು ವಿವೇಚನೆ

ಡಾ. ಅಪ್ಪಗೆರೆ ಸೋಮಶೇಖರ

ಮನುಷ್ಯ ವೈಜ್ಞಾನಿಕವಾಗಿ ಎಷ್ಟೆಲ್ಲ ಮುಂದುವರಿದಿದ್ದಾಗ್ಯೂ ಕೂಡ ನೆಮ್ಮದಿಯ ಬದುಕನ್ನಂತು ಕಳೆದುಕೊಂಡಿದ್ದಾನೆ. ಸಂಬಂಧಗಳ ಅರಿವಿಲ್ಲದೆ ಯಾಂತ್ರಿಕವಾಗಿರುವ ಇವತ್ತಿನ ಜೀವನ ಕ್ರಮ ಜಡವಾಗಿ ಹೋಗಿದೆ. ಹಾಗಾಗಿ ಮಾನವ ಸಮುದಾಯ ಕರಾಳ ಭವಿಷ್ಯದ ಆತಂಕದೊಂದಿಗೆ ಕನಸುಗಳನ್ನು ಕಳೆದುಕೊಂಡು ಬರಡಾಗಿದೆ. ಈ ಎಲ್ಲ ಬಗೆಯ ಅವನತಿಗೆ ಮೂಲ, ಮನುಷ್ಯ ತನ್ನ ಸುತ್ತಲ ಪ್ರಕೃತಿಯೊಟ್ಟಿಗೆ ಇರಿಸಿಕೊಳ್ಳಬೇಕಾಗಿದ್ದ ಕರುಳು ಬಳ್ಳಿಯ ಸಂಬಂಧವನ್ನು ಕಡಿದುಕೊಂಡಿರುವುದು. ಆದಿಮ ಸಂಸ್ಕೃತಿಯಲ್ಲಿ ಪ್ರಕೃತಿ ಮತ್ತು ಮಾನವನ ನಡುವೆ ತಾಯಿ–ಮಗುವಿನ ಒಡನಾಟವಿತ್ತು. ಆದ ಕಾರಣ ಅಲ್ಲಿ ಸಮಚಿತ್ತದ, ಸಮಾಧಾನದ ಬಾಳಿತ್ತು. ಆದರೆ ಇಂದು ಮನುಷ್ಯ ತನ್ನ ವೈಜ್ಞಾನಿಕ ಅಹಂ ಹಾಗೂ ವೈಚಾರಿಕ ಅರಿವಿನ ಕೊರತೆಯಿಂದಾಗಿ ಪ್ರಕೃತಿಯನ್ನು ಮೀರಿ ಬದುಕುವ ಜೀವವಿರೋಧಿ ವ್ಯರ್ಥ ಪ್ರಯತ್ನದಲ್ಲಿದ್ದಾನೆ. ಇದು ಆತನ ವಿನಾಶದ ಪ್ರತೀಕವೆ ಸರಿ. ಪ್ರಕೃತಿಯದು ಸಹಬಾಳ್ವೆ. ಸಹಕಾರ ತತ್ತ್ವಮೀಮಾಂಸೆ. ಈ ವಿವೇಕಯುಕ್ತ ಎಚ್ಚರದ ಪ್ರಜ್ಞೆಯಿಂದ ಮನುಷ್ಯ ಪ್ರಕೃತಿಯೊಟ್ಟಿಗೆ ಅವಿಭಾಜ್ಯವಾಗಿ ಬದುಕಿದಾಗ ಮಾತ್ರ ನೆಮ್ಮದಿಯ ಜೀವ ಪರಂಪರೆಯನ್ನು ಕಟ್ಟಿಕೊಳ್ಳಲು ಸಾಧ್ಯ. ಸ್ವಾಮಿ ಆನಂದ್ ಅವರ "ಸುಭಾಷ್ ಪಾಳೇಕರರ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ" ಪುಸ್ತಕವು ಇದಕ್ಕೆ ಪೂರಕ ಕೈಪಿಡಿಯಾಗಿದೆ. ಜೊತೆಗೆ ನೈಜ ಕೃಷಿ ಸಂಬಂಧಿಯಾದ ಅತ್ಯಮೂಲ್ಯ ಮಾಹಿತಿ ಸಂಗ್ರಹ ಕೃತಿಯಾಗಿದೆ.

೨೦೦೫ ಸೆಪ್ಟೆಂಬರ್‌ನಲ್ಲಿ ಪ್ರಕಟಣೆಗೊಂಡಿರುವ ಸ್ವಾಮಿ ಆನಂದರ ಈ ಕೃತಿಯು ಈವರೆಗೆ

ಐದು ಮುದ್ರಣಗಳನ್ನು ಕಂಡಿರುವುದೇ ಅದರ ಮಹತ್ವವನ್ನು ಸಾಬೀತುಪಡಿಸುತ್ತದೆ. ಸುಭಾಷ್ ಪಾಳೇಕರ್ ನಮ್ಮ ನಡುವೆ ಇರುವಂತಹ ಮಹತ್ವದ ವೈಚಾರಿಕ, ವೈಜ್ಞಾನಿಕ ಕೃಷಿ ವಿಜ್ಞಾನಿ. ಪಾಳೇಕಾರರ ಮೂಲ ಉದ್ದೇಶ ಕೃಷಿಗಾಗಿ ಕೃಷಿ ಎಂಬ ಸೀಮಿತ ಪರಿಧಿಯುಳ್ಳದ್ದಲ್ಲ; ಬದಲಾಗಿ ತಮ್ಮ 'ಕೃಷಿ ಸಂಸ್ಕೃತಿ'ಯ ತತ್ತ್ವದ ಮುಖೇನ ಮನುಷ್ಯ ಮತ್ತು ಭೂಮಿ ನಡುವಿನ ಸಂಬಂಧವನ್ನು ನಿಕಟವಾಗಿ ಬೆಸೆಯುವುದಾಗಿದೆ. ಸುತ್ತಲ ಪ್ರಕೃತಿಯನ್ನು ಪ್ರೀತಿಸುವ, ಆ ಮೂಲಕ ಮನುಷ್ಯನನ್ನು ಒಳಗೊಂಡಂತೆ ಎಲ್ಲ ಬಗೆಯ ಜೀವ ಸಂಕುಲಗಳನ್ನು ಉಳಿಸಿ–ಬೆಳೆಸುವುದಾಗಿದೆ. ವ್ಯವಸಾಯದ ಹಲವು ತಾತ್ವಿಕ ವಿಚಾರಗಳನ್ನೊಳಗೊಂಡ ಈ ಪುಸ್ತಕವು ರೈತರ ಬದುಕಿನ ಕೈಪಿಡಿಯೂ ; ಜನಸಾಮಾನ್ಯರ ಆರೋಗ್ಯದ ಮುನ್ನುಡಿಯೂ ಆಗಿದೆ. ಜೊತೆಗೆ ಪಾಳೇಕರರಿಗಿರುವ ಆಳವಾದ ಕೃಷಿಜ್ಞಾನದ ವಿದ್ವತ್ತನ್ನು ಪರಿಚಯಿಸುವ ಆಕರ ಗ್ರಂಥವಾಗಿದೆ.

ಆರ್ಯರು ಭಾರತಕ್ಕೆ ಬರುವ ಮುನ್ನ ಸಿಂಧೂ ಬಯಲಿನ ಹರಪ್ಪ, ಮೊಹೆಂಜೊದಾರೋ ನಾಗರೀಕತೆಯ ದ್ರಾವಿಡ ಸಂಸ್ಕೃತಿಯಲ್ಲಿದ್ದ ನೈಸರ್ಗಿಕ ಕೃಷಿ ಪದ್ಧತಿಯ ಶ್ರೀಮಂತಿಕೆಯನ್ನು ಕೃತಿಯ ಆರಂಭದಲ್ಲಿ ಸೂಕ್ಷ್ಮವಾಗಿ ನಿರೂಪಿಸಲಾಗಿದೆ. ಮುಂದುವರಿದ ಹಾಗೆ ಜೆಬು ಕುಲಕ್ಕೆ ಸೇರಿದ ನಾಡಹಸುಗಳ ತೊಪ್ಪೆ ಗಂಜಳದಲ್ಲಿರುವ ನಿಸರ್ಗ ಸ್ನೇಹಿ ಜೀವಾಣುಗಳು ಮತ್ತು ಅವುಗಳಲ್ಲಿರುವ ರೋಗನಿರೋಧಕ ಶಕ್ತಿ ; ಜೆರ್ಸಿ, ಹೋಲ್‌ಸ್ಟಿನ್‌ಗಳಂತಹ ಮಿಶ್ರತಳಿ ಹಸುಗಳ ಸಗಣಿ, ಗಂಜಳ, ಹಾಲು ಮನುಷ್ಯನ ಆರೋಗ್ಯ ಮತ್ತು ಪ್ರಕೃತಿಯ ಮೇಲೆ ಬೀರುವ ದುಷ್ಪರಿಣಾಮಗಳು ; ಪಾಳೇಕರರು ನೈಸರ್ಗಿಕ ಕೃಷಿಗಾಗಿ ಸಂಶೋಧಿಸಲ್ಪಟ್ಟಿರುವ 'ಬೀಜಾಮೃತ, ಜೀವಾಮೃತ, ಹೊದಿಕೆ (ಆಚ್ಛಾದನ), ಆರ್ದ್ರತೆ' ಎಂಬ ನಾಲ್ಕು ಪ್ರಮುಖ ಅಂಶಗಳ ಸಮಗ್ರ ವಿವರಣೆ, ನಿರ್ವಹಣೆ; ಬೆಳೆಗೆ ಬೇಕಾಗಿರುವ ಜೀವಸತ್ವಗಳ ವಿವರ; ಕೃಷಿಯಲ್ಲಿ ಎರೆಹುಳು, ಹಾವು, ಇಲಿ, ಗೆದ್ದಲು, ಕಪ್ಪೆ, ಜೇಡ, ದುಂಬಿ, ಜೇನು, ಪತಂಗ, ಹಕ್ಕಿಗಳ ಪಾತ್ರ; ವೈವಿಧ್ಯಮಯ ಬೆಳೆಗಳ ಮಹತ್ವ; ಮಣ್ಣಿನ  ಸವಕಳಿಯನ್ನು ಕಾಯ್ದುಕೊಳ್ಳುವ ಪರಿ ; ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವ, ಅದನ್ನು ಜತನದಿಂದ ಕಾಪಾಡಿಕೊಳ್ಳುವ ರೀತಿ ; ಹಸಿರುಕ್ರಾಂತಿ ತಂದೊಡ್ಡಿರುವ ಸಮಸ್ಯೆಗಳ ಅನಾಹುತ; ಬಿ.ಟಿ. ಹತ್ತಿ, ಜಟ್ರೋಪ ಬೆಳೆಗಳಿಂದಾಗುವ ಅಪಾಯಗಳು; ವಿಷಕಾರಿ ರಾಸಾಯನಿಕ ಗೊಬ್ಬರ, ಕೀಟನಾಶಕಗಳು ಉಂಟುಮಾಡುವ ಕೆಡುಕು ಮತ್ತು ನೈಸರ್ಗಿಕ ಕೀಟನಾಶಕಗಳ ಪ್ರಯೋಜನ; ಜಾಗತೀಕರಣದ ಹುನ್ನಾರ—ಈ ಎಲ್ಲವುಗಳನ್ನು ಈ ಪುಸ್ತಕದಲ್ಲಿ ಆಮೂಲಾಗ್ರವಾಗಿ ಸಂಶೋಧಿಸಿ, ವಿವರಣಾತ್ಮಕವಾಗಿ ನಿರೂಪಿಸಲಾಗಿದೆ. ಜೊತೆಗೆ ನೈಸರ್ಗಿಕ ಕೃಷಿ ಪದ್ಧತಿಯ ಬಗೆಯನ್ನು ಕಬ್ಬು, ಭತ್ತ, ಬಾಳೆ ಬೆಳೆಯುವ ವಿಧಾನದ ಮೂಲಕ ಸೋದಾಹರಣವಾಗಿ ಕೊಡಲಾಗಿದೆ. ದೇವನೂರ ಮಹಾದೇವ ಅವರೆ ಹೇಳಿರುವ ಹಾಗೆ : "ಪಾಳೇಕರ್  ಪ್ರಕೃತಿ ಪವಾಡ ಬೇಸಾಯ ಸದ್ದಿಲ್ಲದ ಕ್ರಾಂತಿ....ಬೇಸಾಯ ಅಂದ್ರೆ ನಾಸಾಯ, ನೀಸಾಯ, ಮನೆಮಂದಿಯೆಲ್ಲ ಸಾಯ ಅಂತ. ಈ ಗಾದೇನ ಈ ನೈಸರ್ಗಿಕ ಕೃಷಿ ಸುಳ್ಳು ಮಾಡುತ್ತೆ....ನಾವಿದನ್ನ ವ್ಯಾಪಕಗೊಳಿಸಿದ್ರೆ ಸಾಯುವವನು ಅಥವಾ ಆತ್ಮಹತ್ಯೆ ಮಾಡಿಕೊಳ್ಳುವವನು ರೈತ ಅಲ್ಲ. ಬದಲಿಗೆ ಇಲ್ಲಿ ರಸಗೊಬ್ಬರ

ಆತ್ಮಹತ್ಯೆ ಮಾಡಿಕೊಳ್ಳುತ್ತೆ. ಕ್ರಿಮಿನಾಶಕಗಳ ಬಹುರಾಷ್ಟ್ರೀಯ ಕಂಪನಿಗಳು ಆತ್ಮಹತ್ಯೆ ಮಾಡಿಕೊಳ್ಳುತ್ತವೆ. ಸಾವಯುವ ಗೊಬ್ಬರಗಳು, ಹೈಬ್ರಿಡ್ ಬೀಜಗಳು, ಸಾಲಗಳು ಆತ್ಮಹತ್ಯೆ ಮಾಡಿಕೊಳ್ಳುತ್ತವೆ." (ಪು. ix)

ಜಾಗತೀಕರಣ ತಂದೊಡ್ಡಿರುವ ಹಲವು ಸಮಸ್ಯೆಗಳಿಗೆ ಸ್ವಾಮಿ ಆನಂದರ ಈ ಪುಸ್ತಕ ದಿಟ್ಟ ಉತ್ತರವಾಗಬಲ್ಲದು. ಅದರಲ್ಲೂ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ಕೃಷಿ ಕ್ಷೇತ್ರದ ಮೇಲೆ ಎಸಗುತ್ತಿರುವ ದ್ರೋಹಕ್ಕೆ ಇದು ಬಂಡಾಯದ ಸಂಜೀವಿನಿಯೆ ಸರಿ. ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ನೆಪದಲ್ಲಿ ಅಮೇರಿಕಾದಂತಹ ರೈತ ವಿರೋಧಿ ಬಂಡವಾಳಶಾಹಿ ಪೋಷಕ ರಾಷ್ಟ್ರಗಳು, ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳ ಕೃಷಿ ಸಂಬಂಧಿ ಸ್ವಾವಲಂಬಿ ಶಕ್ತಿಗಳನ್ನು ಕುಂದಿಸತೊಡಗಿವೆ. ಹಾಗೆಯೇ ಆಯಾ ದೇಶಗಳ ಮೂಲತಳಿ ಬಿತ್ತನೆ ಬೀಜಗಳನ್ನು ವಿನಾಶಗೊಳಿಸುತ್ತ ತಮ್ಮದೇ ಆದ ಕೃತಕ ಹೈಬ್ರಿಡ್ ತಳಿ ಬಿತ್ತನೆ ಬೀಜಗಳನ್ನು ಬಲವಂತವಾಗಿ ಬಡರಾಷ್ಟ್ರಗಳ ಮೇಲೆ ಏರಲಾಗುತ್ತಿದೆ. ಆ ಮುಖೇನ ಹಿಂದುಳಿದ ರಾಷ್ಟ್ರಗಳ ಆಹಾರ ಸ್ವಾವಲಂಬನೆಯನ್ನು ಕಸಿದುಕೊಳ್ಳುವುದರ ಜೊತೆಗೆ ಬಡ ರಾಷ್ಟ್ರಗಳನ್ನು ಶಾಶ್ವತ ಗುಲಾಮ ರಾಷ್ಟ್ರಗಳನ್ನಾಗಿ ಪರಿವರ್ತಿಸುವ ಹುನ್ನಾರವಿದೆ. ಹಾಗು ಬಹುರಾಷ್ಟ್ರೀಯ ಕಂಪನಿಗಳು ತಯಾರಿಸುವ ಜೀವ ವಿರೋಧಿ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ, ಬಿತ್ತನೆ ಬೀಜಗಳಿಗೆ ತೃತೀಯ ರಾಷ್ಟ್ರಗಳನ್ನು ಮಾರುಕಟ್ಟೆಗಳನ್ನಾಗಿ ನಿರ್ಮಿಸಿಕೊಳ್ಳುವುದಾಗಿದೆ. ಅಂದರೆ ರೋಗಗಳನ್ನು ತಾನೇ ಸೃಷ್ಟಿಸಿ, ಆ ರೋಗಗಳಿಗೆ ತಾನೇ ಔಷಧಗಳನ್ನು ಕಂಡುಹಿಡಿದು ಹಂಚುವ ಮೋಸದ ಮುಖವಾಡತನವಾಗಿದೆ. ಪಾಳೇಕರರ ನೈಸರ್ಗಿಕ ಕೃಷಿ ಪದ್ಧತಿಯು ಈ ಎಲ್ಲ ಆತುಂಕಗಳ ನಿವಾರಕ ಶಕ್ತಿಯಾಗಿದೆ. ಪಾಳೇಕರರೆ ಹೇಳುವ ಹಾಗೆ : "ಅಮೇರಿಕಾದವರ ಬಳಿ ಕೋಟ್ಯಾನುಕೋಟಿ ರೂ. ಬೆಲೆಬಾಳುವ ಕ್ಷಿಪಣಿಗಳಿರಬಹುದು. ನಮ್ಮ ಬಳಿ ಅವರಲ್ಲಿಲ್ಲದ ಅದ್ಭುತ ಶಕ್ತಿಯ ಕ್ಷಿಪಣಿ ಇದೆ. ಅದು ಸ್ವಾವಲಂಬನೆ. ದೇಶಿ ಆಕಳ ಸಗಣಿ ಮತ್ತು ಗಂಜಳ ಇಷ್ಟು ಮಾತ್ರದಿಂದಲೇ ನಾವು ಜಾಗತಿಕ ಮಟ್ಟದ ಕ್ರಾಂತಿ ಮಾಡಬಹುದು. ಈ ಕ್ರಾಂತಿ ರೂಪುರೇಷೆ ಅಹಿಂಸಾತ್ಮಕ. ಈ ಕ್ರಾಂತಿಗಿರುವ ಜಾಗತಿಕ ಹೆಸರು, 'ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ ಕ್ರಾಂತಿ." (ಪು. ೯೮–೯೯)

ಈ ನೈಸರ್ಗಿಕ ಸಹಜ ಕೃಷಿ ನಮ್ಮ ದೇಶೀತನದ ಸತ್ವದ್ದಾಗಿದೆ. ಲೇಖಕರೆ ದಾಖಲಿಸಿರುವ ಹಾಗೆ, ಡಾ. ಸರ್ ಆಲ್ಬರ್ಟ್ ವಿಲಿಯಂ ಎಂಬ ಬ್ರಿಟನ್ನಿನ ಕೃಷಿ ವಿಜ್ಞಾನಿ ಭಾರತೀಯ ವ್ಯವಸಾಯ ಸಂಸ್ಕೃತಿಯ ಇತಿಹಾಸವನ್ನು ಸಂಶೋಧನಾತ್ಮಕವಾಗಿ ಅಧ್ಯಯನ ಮಾಡಿ : "ನಮ್ಮ ಮುಂದುವರಿದ ರಾಷ್ಟ್ರಗಳಿಂದ ಭಾರತೀಯ ರೈತರು ಏನನ್ನೂ ಕಲಿಯಬೇಕಾಗಿಲ್ಲ. ಬದಲಾಗಿ ಅವರಿಂದಲೇ ನಾವು ಕಲಿಯುವಂಥದ್ದು ಬಹಳಷ್ಟಿದೆ. ಆ ಮಟ್ಟಿಗೆ ಭಾರತೀಯ ಕೃಷಿ ಪದ್ಧತಿ ಸ್ವಯಂ ಪರಿಪೂರ್ಣವಾಗಿದೆ." (ಪು. ೧) ಎಂದು ಹೇಳಿರುವ ಮಾತುಗಳು ಮೌಲ್ಯಯುತವಾಗಿವೆ.

ವ್ಯವಸಾಯ ಕೂಡ ಜ್ಞಾನದ ಮೂಲ ಎಂಬುದನ್ನು ಈ ಕೃತಿ ಸ್ಪಷ್ಟಪಡಿಸುತ್ತದೆ. ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿಯಿಂದಾಗಿ ದೇಶವನ್ನು ಕಾಡುತ್ತಿರುವ ಬಡತನ, ಆಹಾರದ ಕೊರತೆ,

ಅಪೌಷ್ಟಿಕತೆ, ಸಾಲ, ನಿರುದ್ಯೋಗ, ಪ್ರಕೃತಿ ವಿನಾಶ ಹಾಗು ರೈತರ ಆತ್ಮಹತ್ಯೆಗಳಂತಹ ಭೀಕರ ಸಮಸ್ಯೆಗಳಿಗೆ ಶಾಶ್ವತ ಪರಿಹಾರಗಳನ್ನು ಕಂಡುಕೊಳ್ಳಬಹುದಾಗಿದೆ. ಈವರೆಗೆ ನಮ್ಮ ವ್ಯವಸಾಯ ಪದ್ಧತಿಯಲ್ಲಿ ನಾವು ರೂಢಿಸಿಕೊಂಡು ಬಂದಿರುವ ಮಿತಿಗಳು ; ಆ ದೋಷ ನಿವಾರಣೆಗಾಗಿ ಕಾರ್ಯಪ್ರವೃತ್ತರಾಗಬೇಕಿರುವ ಬಗೆಯನ್ನು ಈ ಕೃತಿ ತಿಳಿಸಿಕೊಡುತ್ತದೆ. ನೈಸರ್ಗಿಕ ಕೃಷಿಯನ್ನು ಅನುಷ್ಠಾನಗೊಳಿಸಿದ್ದೇ ಆದಲ್ಲಿ, ದೇವನೂರ ಮಹಾದೇವ ಅವರು ಹೇಳುವ ಹಾಗೆ, 'ರೈತರನ್ನು ಆತ್ಮಹತ್ಯೆಯಿಂದ ಜೀವಾಮೃತದೆಡೆಗೆ ಕೊಂಡೊಯ್ಯುಬಹುದಾಗಿದೆ.' ಭೂಮಿಯನ್ನು ಫಲವತ್ತುಗೊಳಿಸುವ ಬಗೆ; ಫಲವತ್ತಾದ ಭೂಮಿಯ ಒಡಲಾಳದ ಜೀವಾಣುಗಳನ್ನು ವ್ಯವಸಾಯಕ್ಕೆ ಪೂರಕವಾಗಿ ಬಳಸಿಕೊಂಡು ಸ್ವಸ್ಥ ಬದುಕನ್ನು ಕಟ್ಟಿಕೊಳ್ಳುವ ಪರಿಯನ್ನು ಇಲ್ಲಿ ಕಾಣಬಹುದು. ಪಾಳೇಕರರ ನೈಸರ್ಗಿಕ ಕೃಷಿಯ ಮೂಲ ಉದ್ದೇಶ ಲೇಖಕರೆ ಗುರುತಿಸಿರುವ ಹಾಗೆ : "ವಿಷಮುಕ್ತ ಮಣ್ಣು, ವಿಷಮುಕ್ತ ಅನ್ನ, ವಿಷಮುಕ್ತ ಪರಿಸರ, ವಿಷಮುಕ್ತ ಸಮಾಜ" ನಿರ್ಮಿತಿಯಾಗಿದೆ.

ಕರ್ನಾಟಕದ ಸಂದರ್ಭದಲ್ಲಿ ನೈಸರ್ಗಿಕ ಸಹಜ ಕೃಷಿ ; ದೇಶೀಯ ಮೂಲ ತಳಿಯ ಬಿತ್ತನೆ ಬೀಜಗಳ ಸಂರಕ್ಷಣೆ ಹಾಗು ರಾಸಾಯನಿಕ ಬೇಸಾಯ ಪದ್ಧತಿಯಿಂದಾಗುವ ಅನಾಹುತ; ಬಹುರಾಷ್ಟ್ರೀಯ ಕಂಪನಿಗಳ ಅಪಾಯ ಕುರಿತು ರೈತರಲ್ಲಿ ಎಚ್ಚರ ಮೂಡಿಸುತ್ತಿದ್ದವರು ರೈತ ಚಳವಳಿಯ ನೇತಾರ ಪ್ರೊ. ನಂಜುಂಡಸ್ವಾಮಿ. ಜೀವಿತದುದ್ದಕ್ಕೂ ಈ ಕಾಯಕವನ್ನು ಹೋರಾಟವೆಂಬಂತೆ ರೂಢಿಸಿಕೊಂಡು ಬಂದವರು. ದೇಶೀ ವ್ಯವಸಾಯದ ಬಗ್ಗೆ ನಂಜುಂಡಸ್ವಾಮಿ ಅವರಿಗಿದ್ದ ಸ್ಪಷ್ಟ ತಿಳುವಳಿಕೆ ಹಾಗು ಅರಿವನ್ನು ಪಾಳೇಕರರ ನೈಸರ್ಗಿಕ ಕೃಷಿ ಪದ್ಧತಿಯಲ್ಲಿ ಕಾಣಬಹುದು. ನಂಜುಂಡಸ್ವಾಮಿ ಅವರ ಕನಸನ್ನು ನನಸುಗೊಳಿಸುವ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಪಾಳೇಕರರ ನೈಸರ್ಗಿಕ ಕೃಷಿ ಪದ್ಧತಿಯ ಬಗ್ಗೆ ರೈತರಲ್ಲಿ ಪ್ರಜ್ಞೆ ಮೂಡಿಸಬೇಕಿದೆ.

ಪಾಳೇಕರರಿಗೆ ಈ ಭೂಮಿ, ಕೃಷಿಯ ಬಗೆಗೆ ಇರುವ ಕಾಳಜಿಯಷ್ಟೆ ಈ ಸಮಾಜದ ಯುವಶಕ್ತಿಯ ಬಗೆಗೆ ಅದಮ್ಯವಾದ ಭರವಸೆಯಿದೆ. ಹಾಗಾಗಿ ಇವರು ಕೃಷಿವಿಜ್ಞಾನಿ ಹೇಗೋ ಹಾಗೆಯೇ ಸಮಾಜವಿಜ್ಞಾನಿಯೂ ಹೌದು. ಕೋಮುವಾದಿ ವ್ಯಾದಿಯ ಅಪಾಯದ ಅರಿವಿರುವ ಪಾಳೇಕರರು : "ಕೈಯಲ್ಲಿ ತ್ರಿಶೂಲ ಹಿಡಿದು ಆರ್ಭಟಿಸುವುದರಿಂದಾಗಲಿ, ಕೇಸರಿ ಬಾವುಟ ಹಿಡಿದು ಕೂಗಾಡುವುದರಿಂದಾಗಲಿ ಕ್ರಾಂತಿ ಆಗುವುದಿಲ್ಲ. ಇಂಥ ಹುಡುಗರನ್ನು ಕಂಡು ನನಗೆ ದಿಗಿಲಾಗುತ್ತದೆ. ನಮ್ಮ ಯುವಕರಲ್ಲಿ ಅದೆಂಥ ಶಕ್ತಿ ಅಡಗಿದೆ ? ಅದೂ ಜಗತ್ತಿನ ಬದಲಾವಣೆಗೆ ಪೂರಕವಾಗಬಲ್ಲ ಶಕ್ತಿ ! ಅಂತಹ ಶಕ್ತಿವಂತ, ತಾಖತ್ತುಳ್ಳ ಯುವಕರ ಕೈಯಲ್ಲಿ ತ್ರಿಶೂಲಗಳನ್ನು ನೀಡುವುದು ಎಷ್ಟು ಸರಿ? ಅವರ ಕೈಗಳಿಗೆ ಹಾರೆ, ಗುದ್ದಲಿಗಳನ್ನು ಕೊಡಿ. ಅವರ ಮುಷ್ಟಿಯಲ್ಲೊಂದಿಷ್ಟು ಬೀಜಗಳನ್ನು ತುಂಬಿ. ಅವರು ನಿರ್ಮಿತಿ ಮತ್ತು ಸೃಷ್ಟಿ ಕ್ರಿಯೆಗಳಲ್ಲಿ ತಲ್ಲೀನರಾಗಲಿ. ನಿರ್ಮಿತಿ ಮತ್ತು ಸೃಷ್ಟಿಕ್ರಿಯೆಗಳಲ್ಲಿ ತೊಡಗುವ ಹುಡುಗರಲ್ಲಿ ವಿಕಾರಗಳಿರುವುದಿಲ್ಲ." (ಪು-೯೭) ಪಾಳೇಕರರ ಈ ಮಾತುಗಳ ಆಂತರ್ಯದಲ್ಲಿರುವ ಮೌಲ್ಯಗಳನ್ನು ಕೋಮುವಾದಿ ಶಕ್ತಿಗಳು ಅರಿತು ನಡೆಯಬೇಕಿದೆ. ಜೊತೆಗೆ ಈ ಮಾತುಗಳಲ್ಲಿರುವ ಸಾಮಾಜಿಕ ಬದ್ಧತೆಯನ್ನು

ಯುವಸಮುದಾಯ ಚಿಂತಿಸಬೇಕಿದೆ. ಕಿಶೋರ್ ಮುಖರ್ಜಿ ಅವರು ಹೇಳಿರುವ ಹಾಗೆ : "ಪಾಳೇಕರ್ ಕೇವಲ ರೈತರಲ್ಲ. ಕೃಷಿ ವಿಜ್ಞಾನಿಯೂ ಅಲ್ಲ. ಆತನೊಬ್ಬ ಅಪ್ಪಟ ದಾರ್ಶನಿಕ. ಅದೊಂದು ಮೇರೆಯೇ ಇಲ್ಲದ ಮೇರು ಕೃತಿ. ಆತನಿಗೆ ಒಳ್ಳೆಯವರಿರಲಿ, ಕೆಟ್ಟವರಿರಲಿ ಎಲ್ಲರ ಕುರಿತೂ ಕಾಳಜಿ ಇದೆ. ಗಾಂಧಿ, ಬುದ್ಧ, ಅಂಬೇಡ್ಕರ್, ಲೋಹಿಯಾ, ವಿನೋಬಾ....ಈ ಯಾರೂ ಆದರ್ಶ ಮಾದರಿಯ ಕೊನೆ ಬಿಂದುಗಳಲ್ಲ. ಅವರು ತೋರಿದ ಬೆಳಕಲ್ಲಿ ಬೆಳಕಿರುವವರೆಗೆ ನಡೆಯೋಣ. ಆಮೇಲೆ ನಾವೇ ಬೆಳಕಾಗೋಣ. ಪ್ರತಿಯೊಬ್ಬರೂ ಇಲ್ಲಿ ಸ್ವಯಂ ಪ್ರಕಾಶಿಸಬೇಕು. ಆಗ ಮಾತ್ರ ಒಟ್ಟು ಸಮಾಜದ ನಡಿಗೆ ಸುಗಮ ಅನ್ನುವುದು ಪಾಳೇಕರರ ತಿಳುವಳಿಕೆ." (ಪು–೯೬). ಪಾಳೇಕರರ ಚಿಂತನೆಯ ಹಿನ್ನೆಲೆಯಲ್ಲಿ ಗಾಂಧೀಜಿ ಅಪೇಕ್ಷೆಪಟ್ಟ ಗ್ರಾಮ ಸ್ವರಾಜ್ಯದ ಆಶಯವಿದೆ.

ಪ್ರಸ್ತುತ ಸಾಮಾಜಿಕ ಕಾಳಜಿಯಿಂದ ವಿಮುಖರಾಗಿರುವ ಬಹುತೇಕ ಪತ್ರಕರ್ತರಿಗೆ ಅಪವಾದವೆಂಬಂತೆ ಸ್ವಾಮಿ ಆನಂದ್ ನಮ್ಮ ನಡುವಿನ ಅಪರೂಪದ ಕ್ರಿಯಾಶೀಲ ಪತ್ರಕರ್ತರಾಗಿದ್ದಾರೆ. ಇಂತಹ ಮಹತ್ವದ ಕೃತಿಯನ್ನು ಕೊಡುವ ಮುಖೇನ ಪತ್ರಕರ್ತರಿಗಿರಬೇಕಾದ ಕನಿಷ್ಠ ಸಾಮಾಜಿಕ ಜವಾಬ್ದಾರಿಯ ಹೊಣೆಗಾರಿಕೆಯನ್ನು ಸ್ವಾಮಿ ಆನಂದ್ ಅವರು ತೋರಿಸಿಕೊಟ್ಟಿದ್ದಾರೆ. ಇದೇ ಕೃತಿ ಹಾಗು ಕೃತಿಕಾರರನ್ನು ಕುರಿತ ಹಾಗೆ ಅಗ್ನಿಶ್ರೀಧರ್ ಪುಸ್ತಕದ ಬೆನ್ನುಡಿಯಲ್ಲಿ ಬರೆದಿರುವ ಮಾತುಗಳು ಹೆಚ್ಚು ಅರ್ಥಪೂರ್ಣವಾಗಿವೆ : "ಕೃಷಿಯ ಬಗ್ಗೆ ಯಾರಿಗೆ ತಿಳಿದಿಲ್ಲ ? ಅದರ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದೇವೆಂಬ ಭ್ರಮೆ ನಮಗಿದೆ. ಆ ಭ್ರಮೆಯ ಗುಳ್ಳೆಯನ್ನು ಸಮರ್ಥವಾಗಿ ಹೊಡೆಯುತ್ತಾರೆ ಸ್ವಾಮಿ ಆನಂದ್ ತಮ್ಮ ಈ ಕೃತಿಯ ಮೂಲಕ. ಅತ್ಯಂತ ಸಾಮಾನ್ಯ, ಸಹಜವೆನಿಸುವ ವ್ಯವಸಾಯ ಕ್ರಿಯೆಯ ಹಿಂದಿರುವ ಅದ್ಭುತಗಳನ್ನು ನಮ್ಮ ಮುಂದೆ ದಕ್ಷವಾಗಿ ತೆರೆದಿಟ್ಟಿದ್ದಾರೆ. ನಾವು ಕಡೆಗಣಿಸಿರುವ ನಾಟಿ ಹಸುವಿನ ಸಗಣಿ ಮತ್ತು ಗಂಜಲಗಳನ್ನು ಮಾತ್ರ ಬಳಸಿ ಬೆಳೆ ಬೆಳೆಯಬಹುದಾದ ಪರಿಯನ್ನು ಮನಸ್ಸಿಗೆ ನಾಟುವಂತೆ ದಾಖಲಿಸಿದ್ದಾರೆ. ಕನಿಷ್ಠತೆಯಿಂದ ಉತ್ಕೃಷ್ಟವೆನ್ನುವ ತತ್ವವನ್ನು ನಿರೂಪಿಸಿದ್ದಾರೆ....

ನಮ್ಮ ನಡುವಿನ ಬಹಳಷ್ಟು ಪುಸ್ತಕಗಳು ಚರ್ಚೆಗೆ, ವಿಶ್ಲೇಷಣೆಗೆ, ಬೌದ್ಧಿಕ ಬೆಳವಣಿಗೆಗೆ ಮತ್ತು ಆಲೋಚನಾ ಕ್ರಿಯೆಗಳನ್ನು ವಿಸ್ತರಿಸಿಕೊಳ್ಳಲು ನೆರವಾಗುವಂಥವು. ಆದರೆ ಎಲ್ಲೋ ಒಮ್ಮೊಮ್ಮೆ ಅಪರೂಪಕ್ಕೆ ಬದುಕಲು ಕಲಿಸುವ, ಬದುಕನ್ನು ರೂಢಿಸುವ, ಗಳಿಕೆಗೆ ಮಾರ್ಗವನ್ನು ಸೂಚಿಸುವ ಪುಸ್ತಕಗಳು ಸೃಷ್ಟಿಯಾಗುತ್ತವೆ. ಅಂತಹ ಒಂದು ಪುಸ್ತಕ ಇದು." ಲೇಖಕರು ಈ ಕೃತಿಯಲ್ಲಿ ಬಳಸಿರುವ ಸರಳವಾದ ಕನ್ನಡ ಎಲ್ಲಿಯೂ ಗೊಂದಲಕ್ಕೀಡು ಮಾಡದೆ ಸರಾಗವಾಗಿ ಓದಿಸಿಕೊಂಡು ಹೋಗುವುದರ ಜೊತೆಗೆ ಓದುಗರನ್ನು ಚಿಂತನೆಗೆ ಒಳಗು ಮಾಡುತ್ತದೆ. ಲೇಖಕರು ಕಲೆ ಹಾಕಿರುವ ಮೌಲಿಕ ವಿಷಯವನ್ನು ಬಿಡಿಬಿಡಿ ಅಧ್ಯಾಯಗಳನ್ನಾಗಿ ವಿಂಗಡಿಸಿಕೊಟ್ಟಿದ್ದ ಆಗಿದ್ದರೆ ಇಡೀ ಪುಸ್ತಕ ಮತ್ತಷ್ಟು ಅರ್ಥಪೂರ್ಣವೆನಿಸುತ್ತಿತ್ತು.

ವಿಶ್ವವಿದ್ಯಾನಿಲಯಗಳು ಮಾಡಬೇಕಾದ ಕೃಷಿ ಸಂಬಂಧಿ ಸಕಾರಾತ್ಮಕ, ಕ್ರಿಯಾತ್ಮಕ ಸಂಶೋಧನೆಯನ್ನು ಪಾಳೇಕರರು ಒಬ್ಬ ವ್ಯಕ್ತಿಯಾಗಿ ಮಾಡಿ ತೋರಿಸುವ ಮುಖೇನ ಒಂದು

ಶಕ್ತಿಯಾಗಿ ಬೆಳೆದಿದ್ದಾರೆ. ಹಾಗಾಗಿ ಪಾಳೇಕರರು ಕೇವಲ ವ್ಯಕ್ತಿ ಮಾತ್ರವಲ್ಲ ಬದಲಾಗಿ ಜ್ಞಾನಪೂರಿತ ಕೃಷಿ ವಿಶ್ವವಿದ್ಯಾನಿಲಯವೇ ಸರಿ. ಇಂತಹ ಜ್ಞಾನ ತವನಿಧಿಯ ಸದ್ಬಳಕೆ ನಮ್ಮ ದೇಶದ ಜವಾಬ್ದಾರಿಯಾಗಬೇಕಿದೆ. ಆ ಮುಖೇನ ನೆಮ್ಮದಿಯ ಸಮಾಜವನ್ನು ಕಂಡುಕೊಳ್ಳಬಹುದಾಗಿದೆ. ಕೃಷಿತತ್ತ್ವಜ್ಞಾನಿ ಪಾಳೇಕರರ ಸಾಧನೆಯನ್ನು ಪರಿಗಣಿಸಿ ಕರ್ನಾಟಕ ರಾಜ್ಯ ರೈತ ಸಂಘವು ಅವರಿಗೆ ''ಭಾರತ ಕೃಷಿರತ್ನ'' ಪ್ರಶಸ್ತಿ ನೀಡಿ ಗೌರವಿಸಿದೆ. ಹಾಗೆಯೇ ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರ ಮಠವು 'ಬಸವಶ್ರೀ' ಪ್ರಶಸ್ತಿ ನೀಡಿರುವುದು ಹೆಮ್ಮೆಯ ವಿಷಯವಾಗಿದೆ.

ಇವತ್ತಿನ ವಿದ್ಯಾವಂತ ಯುವ ಸಮುದಾಯವನ್ನು ಗಂಭೀರವಾಗಿ ಕಾಡುತ್ತಿರುವ ನಿರುದ್ಯೋಗ ಸಮಸ್ಯೆ ಸ್ವಲ್ಪಮಟ್ಟಿಗಾದರೂ ನಿವಾರಣೆಯಾಗಬೇಕಾದರೆ, ಅವರಲ್ಲಿ ಪಾಳೇಕರರ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿಯ ಬಗೆಗಿನ ಪರಿಜ್ಞಾನದ ಅಗತ್ಯವಿದೆ. ಇಂತಹ ಕೃಷಿ-ಭೂಮಿ ಸಂಬಂಧಿ ಕೃತಿಗಳು ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕಗಳಾಗಬೇಕಿದೆ. ಆ ಮೂಲಕ ವಿದ್ಯಾರ್ಥಿಗಳಲ್ಲಿ ಭೂಮಿ-ಕೃಷಿ ಸಂಸ್ಕೃತಿಯ ಬಗೆಗೆ ಒಲವು ಮೂಡಿಸುವ ಹಾಗು ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳುವ ನಿಟ್ಟಿನಲ್ಲಿ ಸಹಕರಿಸಬೇಕಿದೆ. ಇದು ನಮ್ಮೆಲ್ಲರ ಜವಾಬ್ದಾರಿ ಕೂಡ ಹೌದು.

□

---

ಡಾ. ಅಪ್ಪಗೆರೆ ಸೋಮಶೇಖರ
ಕನ್ನಡ ಉಪನ್ಯಾಸಕ
ಸರ್. ಎಂ. ವಿಶ್ವೇಶ್ವರಯ್ಯ ಸ್ನಾತಕೋತ್ತರ ಕೇಂದ್ರ
ಮೈಸೂರು ವಿಶ್ವವಿದ್ಯಾನಿಲಯ
ತೂಬಿನಕೆರೆ, ಮಂಡ್ಯ

# ದರ್ಜಿಯಾಗಿದ್ದರೆ ನಾ....!

ಮುಳ್ಳೂರು ಶಿವಮಲ್ಲು

ದರ್ಜಿಯಾಗಿದ್ದರೆ ನಾ....
ಹಾಕುತಿದ್ದೆ ಹೊಲಿಗೆಯ
ಚೂರಾದ ಮಡಿಕೆ-ಕುಡಿಕೆ ಗುಡಾಣಗಳಿಗೆ
ಕಿತ್ತು ಪಟಡಿಯಾದ ಬಿದುರಿನ ಪುಟ್ಟಿ-ಮೊರ, ತಟ್ಟೆಗಳಿಗೆ
ಗಾಜಿನ ಲೋಟಗಳಿಗೆ,
ಹರಿದ ಮನಕೆ, ಮುರಿದ ಮನೆಗೆ.

ಬಿರುಕು ಬಿಟ್ಟ ಗೋಡೆಗಳ
ಬಿರಿದು ಬಾಯ್ಬಿಟ್ಟ ಭೂಮಿಯ
ಛಿದ್ರಗೊಂಡ ಮನಸುಗಳ
ಸೇರಿಸುತಿದ್ದೆ ನನ್ನ ಬಿಗಿ ಹೊಲಿಗೆಯಿಂದ.

ಚೂರಾದ ಸಂಸಾರಗಳ
ನುಚ್ಚು ನೂರಾದ ಕನಸುಗಳ
ಎಳೆದು ಸೇರಿಸುತಿದ್ದೆ
ಸೂಜಿ ಮೊನೆಯ ದಾರಕ್ಕೆ
ಒಡೆದು ರಕ್ತ ಕಾರುವ

ಹಸಿಹೃದಯಕ್ಕೆ
ಬಿಸಿಮಂತ್ರಗಳ ತೇಪೆಹಾಕಿ
ಶಾಂತಿಯಿಂದ ಹೊಲಿಯುತಿದ್ದೆ.

ಚದುರಿದ ಜನಗಳ
ಕಿತ್ತು ಜೋತಾಡುವ ಸೀಮೆಗಳ
ಕೂಡಿಸುತಿದ್ದೆ
ನನ್ನ ಕರುಳಿನ ದಾರದಿಂದ
ಸೊರಗಿ ಬಿದ್ದ ಜೀವಗಳಿಗೆ
ಮೃತವಾಗದಂತೆ
ಗುಂಡಿಗೆಯ ಪೋಣಿಸಿ
ಜೀವ ಕೊಡುತಿದ್ದೆ.

ಬಿಸಿ ರಕ್ತದ ಕೀಲೆಣ್ಣೆ ಹಾಕಿ
ರಭಸದಿಂದ ಹೊಲಿಯದೆ
ಮೃಧುವಾದ ಮನಸುಗಳ ಮೇಲೆ
ಮೆಲ್ಲಗೆ ಕೆತ್ತುತ್ತಿದ್ದೆ ಸತ್ಯದ ನಿಲುವುಗಳ

ಚಿತ್ರವಿಚಿತ್ರವಾದ ಕುಲ–ಜಾತಿ
ಮತ–ಧರ್ಮಗಳ
ಹೆಣೆಯುತ್ತಿದ್ದೆ
ನನ್ನ ನಿಮಿರಿದ ನರಗಳ ನೂಲಿನಿಂದ
ಮನುಷ್ಯತ್ವದೆಡೆಗೆ.

□

---

ಮುಳ್ಳೂರು ಶಿವಮಲ್ಲು
ಹೊಸ ಬಡಾವಣೆ, ೬ನೇ ಅಡ್ಡರಸ್ತೆ
ಮುಳ್ಳೂರು, ಕೊಳ್ಳೇಗಾಲ ತಾಲ್ಲೂಕು
ಚಾಮರಾಜನಗರ ಜಿಲ್ಲೆ

# ಕುಸುಮಬಾಲೆ : ಒಂದು ಹೊಸ ಓದು

ರಘುನಾಥ ಬಿ.ಎಸ್.

ದೇವನೂರು ಮಹಾದೇವ ಅವರ 'ಕುಸುಮಬಾಲೆ' ಕಾದುಬರಿಯು ಇಂದಿಗೂ ಹೊಸದನ್ನು ಹೊಳೆಯಿಸುವ ಕಾದಂಬರಿಯಾಗಿದೆ. ಭೂತ–ವರ್ತಮಾನದಲ್ಲಿ ಕೇಂದ್ರವಾಗಿದ್ದುಕೊಂಡು ವರ್ತಮಾನದಾಚೆಯ ಸಮಸ್ಯೆಗೂ ಬೆಳಕು ಚೆಲ್ಲುತ್ತವೆ. ಇಲ್ಲಿ ಬರುವ ಜೋತಮ್ಮದೀರು ಲೌಕಿಕ–ಅಲೌಕಿಕ ನೆಲೆಯಲ್ಲೂ ಗುರುತಿಸಿಕೊಳ್ಳುತ್ತಾರೆ. ಒಂದೆಡೆ ಬೇರೆ ಬೇರೆ ಕೇರಿಗಳನ್ನು ಪ್ರತಿನಿಧಿಸುತ್ತಾ ಇನ್ನೊಂದೆಡೆ ಮಾನವರಹಿತ ಸಮಾಜದ ವಿಭಿನ್ನ ಸುಬಂಧಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಕಡೆಗಣಿಸಲ್ಪಟ್ಟ ಸಮುದಾಯವನ್ನು ಪ್ರತಿನಿಧಿಸುವ ಈ ಪಾತ್ರಗಳು ಕಲ್ಲು ಕರಗುವ ಸಮಯದಲ್ಲಿ, ಮಂಚ ಸಕಲ ಜೀವಿಗಳಿಗೆ ನಿದ್ದೆ ಆವರಿಸಿದ ಸಂದರ್ಭದಲ್ಲಿ ಕಥೆ ಬರುತ್ತದೆ. ಆ ಸಮಯವೇ ಸೂಕ್ತವಾದ ವೇದಿಕೆಯಾಗಿದೆ. ಚನ್ನ, ಮಂಚ, ಈರಿ ಮತ್ತು ಅವಳ ಚಿಕ್ಕವ್ವ, ಅಮಾಸ ಮತ್ತು ಗಾರಸಿದ್ದಾವ, ಕುರಿಯಯ್ಯನ ಪ್ರಸಂಗಗಳನ್ನು ಹಲವು ಹೊಸ ತಲೆಮಾರಿನ ಧೋರಣೆಯಲ್ಲಿಟ್ಟು ನೋಡುವ ಪ್ರಯತ್ನವಾಗಿದೆ.

ಚನ್ನ ವಿದ್ಯಾವಂತ ಆದರೂ ಅವನ ಸಮಸ್ಯೆ ಇರುವುದು ಇಂಗ್ಲೀಷ್‌ನೊಂದಿಗಿನ ಹೋರಾಟದಲ್ಲಿ. ಆದ್ದರಿಂದ ಬಿ.ಎ. ಪಾಸಾಗದೆ ಸರ್ಕಾರಿ ನೌಕರಿಯೂ ಇಲ್ಲದೆ, ಜೀತಗಾರಿಕೆಗೂ ಹೊಂದಿಕೊಳ್ಳದ ಅತುಂತ್ರ ಸ್ಥಿತಿಯ ಬದುಕು ಅವನದು. ಇದು ಇವತ್ತಿಗೂ ಚನ್ನನಂತಹ ಲಕ್ಷಾಂತರ ಯುವ ದಲಿತರ ಸಮಸ್ಯೆಯೂ ಹೌದು. ನಿರುದ್ಯೋಗಿಯಾದರೂ ಸ್ವಾಭಿಮಾನಿಯಾದ ಚನ್ನ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಅವರ ನಿಲುವಾದ 'ನನಗೆ ರೊಟ್ಟಿಗಿಂತ ಮರ್ಯಾದೆ ಮುಖ್ಯ'

ಎಂಬುದನ್ನು ಕೇರಿಯ ಜನರೊಟ್ಟಿಗೆ ಕಾಯ್ದುಕೊಳ್ಳುತ್ತಾನೆ. ಅವನು 'ನಿಮ್ಮ ಜಗಳ್ವ ನಿಮ್ಮ ಹಟ್ಟಲಿ ಮಾಡ್ಕಳಕೆ ಏನಾಗಿದ್ದು ಮ್ಯಾಗಲ ಕೇರಿಯವ್ರೂ ನೋಡ್ತ ಇಲ್ಲೋಡು ಈ ಹೊಲಬಡ್ಡೆತ್ತವಗಳ ಬಾಳಾಟ್ವ ಅನ್ನಂಗ ಆಡಗ್ಗತಿ ಮಾಡೀ ಮಾಡಿ ಊರ್‍ಲುವ ಸಮಾಧಾನವಾಗಿ ಇರಗೊಡ್ತಲ್ಲಪ್ಪ' ಎಂದು ಈರಿ, ಕೆಂಪಿ, ಕಿಟ್ಟಯ್ಯನವರ ಜಗಳದ ಸಂದರ್ಭದಲ್ಲಿ ಪ್ರತಿಕ್ರಿಯಿಸುವುದು ಸಮುದಾಯದ ಸಾಂಸ್ಕೃತಿಕ-ಸಾಮಾಜಿಕ ಬದುಕಿನ ಮೇಲೆ ಹೊಸ ಬೆಳಕನ್ನು ಬೀರುತ್ತದೆ.

ಮಂಚ ಜಡತ್ವದಿಂದ ಜೀವಂತ ರೂಪ ತಾಳುತ್ತದೆ. ಭೋಗ ಸಂಸ್ಕೃತಿಯ ಅಡಿಯಾಳಾಗಿ ಇಡೀ ಸ್ತ್ರೀ ಸಮೂಹದ ಶೋಷಣಾತ್ಮಕ ಬದುಕಿನ ಆತ್ಮಕಥೆಯನ್ನು ಹೇಳಿಕೊಳ್ಳುತ್ತದೆ. ಇವತ್ತಿನ ವೇಶ್ಯಾವೃತ್ತಿಯನ್ನು, ರಾಜ್ಯ ಸಾಮ್ರಾಜ್ಯಗಳ ಕಾಲದಲ್ಲಿ ಅದಕ್ಕಿದ್ದ ಐಭೋಗದ ಮಾನ್ಯತೆಯನ್ನು ಹೇಳುತ್ತ, ನಂತರದಲ್ಲಿ ಹೆಣ್ಣನ್ನು ಭೋಗದ, ಮಾರಾಟದ ಸರಕಿನಂತೆ ಕಂಡದ್ದನ್ನು ಕುರಿತು 'ನೋಡಿ ಅಣ್ಣಯ್ಯ' ಮೊದಲ ನನ್ನ ವಚಾನ ವಸ ರೇಸ್ಮೆ ಬಟ್ಟಯಲಿಯ ನಂಗ ಒರಸ್ತ ಇದ್ದೊರು' ನಂತರ ಬಂದ ದೇವದಾಸಿ, ಬೆತ್ತಲೆ ಸೇವೆಯ ಕ್ರೂರತೆಯ ಬಗ್ಗೆಯೂ ಈಗ ತಾನು ತಲುಪಿರುವ ಸ್ಥಿತಿಯಾದ್ರು ನೋಡಿ ಅಂದುಕೊಳ್ಳುತ್ತದೆ. ಇನ್ನೊಂದರ್ಥದಲ್ಲಿ ಬಿಳಿಯರು ಕರಿಯರನ್ನು ತಮ್ಮ ತೋಟದಲ್ಲಿ ದುಡಿಸಿಕೊಳ್ಳಲು ಕೊಂಡುಕೊಳ್ಳುತ್ತಿದ್ದ ವ್ಯವಸ್ಥೆಯನ್ನು ಹೇಳುತ್ತದೆ. ದ್ರಾವಿಡ ಸಂಸ್ಕೃತಿಯನ್ನು ದಾಖಲಿಸುತ್ತ, ಆರ್ಯ ಸಂಸ್ಕೃತಿಯ ಶ್ರೇಣೀಕೃತ ವರ್ಣವ್ಯವಸ್ಥೆಯ ಒಡೆದು ಆಳುವ ನೀತಿಯನ್ನು ; ರಾಗಿ, ಭತ್ತ, ಜೋಳ, ಸಂಕೇತಗಳ ಮೂಲಕ ಎಲ್ಲ ಧಾನ್ಯಗಳ ಕಸಕಡ್ಡಿಗಳ ಅಡಿಯಿರುವ ಜಾತಿಯ ಕಟ್ಟಕಡೆಯ ದಲಿತರ ಸ್ಥಿತಿಯನ್ನು ಧ್ವನಿಸುತ್ತದೆ. ಮಂಚ ಯಾಡೇಗೌಡನ ಮಗನ ವಶದಲ್ಲಿದ್ದಾಗ ಮಾತ್ರ ಸಂವಾದ ನಡೆಸಿದೆ. ಯಾಕೆಂದರೆ ಯಾಡ ಗಂಡ ಸತ್ತ ಹನ್ನೆರಡು ತಿಂಗಳಿಗೆ ಹಟ್ಟಿಯ ಜೀತಗಾರನಿಗೆ ಹುಟ್ಟಿದವನೆಂಬ ಅಪವಾದವಿದೆ. ಮೇಲ್ಜಾತಿ ಕೆಳಜಾತಿ ಎರಡು ಲಕ್ಷಣಗಳಿರುವ ವರ್ಣಸಂಕರದ ನೋವು ಅನುಭವಿಸಿರುವುದರಿಂದ ತನ್ನ ಸಮಸ್ಯೆ ಅರ್ಥ ಮಾಡಿಕೊಳ್ಳುತ್ತಾನೆಂದು ವರ್ಣಿಸುತ್ತದೆ. 'ಅಣ್ಣಯ್ಯ ಕೇಳಿಯೆಂದು' ನಮ್ರತೆ ಮತ್ತು ಹಕ್ಕೊತಾಯದ ಮಾತುಗಳನ್ನಿಲ್ಲಿ ಕಾಣುತ್ತೇವೆ.

ಈರಿ ಮತ್ತು ಅವಳ ಚಿಕ್ಕಮ್ಮನ ನಂಬಿಕೆಗಳು ಅವರ ಬದುಕಿನ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದಾಗಿದೆ. ಈರಿ ಸಕ್ರಾಂತಿಯ ಹಬ್ಬದಲ್ಲಿ ಕೋಳಿಯನ್ನು ದೇವರಿಗೆ ಅರ್ಪಿಸುವುದರಿಂದ ತನ್ನ ಮಗ ಕಾಯಿಲೆಯಿಂದ ಗುಣಮುಖನಾಗುತ್ತಾನೆಂದು ನಂಬಿಕೆಯುಳ್ಳವಳು. ಕೆಂಪಿಯ ಅವ್ವ ಮಗಳಿಗೆ ಹುಟ್ಟಿದ ಮಕ್ಕಳ ಕಾಪಾಡಲು ಮತ್ತು ಹೆರಿಗೆ ರಾತ್ರಿಯಲ್ಲಿ ಇದೆಲ್ಲ ಇದಿಯಮ್ಮ ಮತ್ತು ಮಗಳು ಇದಿದೇವಿದೆಯ ಮಾಟ ಮಂತ್ರದ ಕಥೆಯೆಂದು ಬೈಯುತ್ತಾಳೆ. ಇವತ್ತಿಗೂ ಇಂತಹವು ದಲಿತರ ಬದುಕಿನಲ್ಲಿ ಬಿಡಿಸಲಾರದ ಆಚರಣೆಗಳಾಗಿಯೇ ಮುಂದುವರಿಯುತ್ತಿವೆ.

ಇಲ್ಲಿ ತಾಯ್ತತನದ ಸ್ತ್ರೀವಾದಿ ಧೋರಣೆಯನ್ನು ಲಿಂಗತಾರತಮ್ಯವಿಲ್ಲದೆ ಸ್ಪಷ್ಟವಾಗಿ ಗುರುತಿಸಬಹುದು. ಪರಂಪರೆಯೊಳಗೆ ಸ್ತ್ರೀಶೋಷಣೆ ನಿಜವಾದರೂ, ಅದು ಒಂದೇ ಮಟ್ಟದೆಂದು

ಕೇಳಲಾಗುವುದಿಲ್ಲ. ದಲಿತ ಮಹಿಳೆ ಕುಟುಂಬದ ಶೋಷಣೆಯ ನಡುವೆಯೂ ಪುಟಿದೇಳುವ ಮನಸ್ಥಿತಿಯವಳು. ಕುಟುಂಬದಾಚೆಗಿನ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿರುವ ಜಾತೀಯತೆ, ಸಾಮಾಜಿಕ, ಆರ್ಥಿಕ ಶೋಷಣೆಯಿಂದ ಬಾಧಿತಳು. ಇದನ್ನು ಕೆಂಪಿ "ನಾನು ಸತ್ತಾಗ ಸೊರ್ಗಕ್ಕೆ ಸೇರ್ಕಳ್ಲಿ ನಂ ಅಪ್ಪ ಅಂತ ಹಿಂದುಸ್ತಾನಕ್ಕ ಒಂದು ಗುಡ್ಡೂಸ. ಆಗೋದು ಬ್ಯಾಡ ಬೇಕಾರ ನಂಗೆ ಬೆನ್ನುಜ್ಜಿ ಕೊಡಕ ಅಂತ ಹೆಣ್ಣುಗೂಸ ಅಂತಾದೂ ಆಗದು ಬ್ಯಾಡವಪ್ಪ ಎಂಬುದಾಗಿ 'ಗಂಡಾದ್ರೂ ಒಂದು ಮನೆ ಹೆಣ್ಣಾದ್ರೂ ಒಂದು ಮನೆಯೆಂಬುದು' ಅವಳ ಹಂಬಲವಾಗಿದೆ. ಆದರೆ ಬಸಪ್ಪ ಸೋಮಪ್ಪ ಹೆಂಡತಿಗೆ ಹೇಳುವ ಮಾತು ಈ ರೀತಿಯದಲ್ಲ. ಹೆಂಡತಿಗೆ 'ನನಗೆ ಹೇಳ ಬರಲು ಮೂರು ಕಾಸಿನ ಹೆಣ್ಣಾದ ನೀನು ಎಷ್ಟು ಮಾತ್ರದವಳು' ಎಂದು ಬೈಯುತ್ತಾನೆ. ಕೆಂಪಿಯನ್ನು ಕಿಟ್ಟಯ್ಯ ಕರೆಯುವಾಗ 'ಅಮ್ಮಿ ಬಮ್ಮಿ ಹೆಣ್ಣಾ' ಅಂದಾಗ, ಅವಳು 'ಏ ಬತ್ತೀನಿಕಸ ನಡಾ' ಎಂಬುದಾಗಿ ಹೇಳುತ್ತಲೇ ಲೈಂಗಿಕ ಆಸಕ್ತಿಯನ್ನು ಧೈರ್ಯವಾಗಿ ಗಂಡ ಮತ್ತು ಅಪ್ಪನೆದುರು ವ್ಯಕ್ತಪಡಿಸುತ್ತಾಳೆ. ಆದರೆ ಅದೇ ಮೇಲ್ಜಾತಿ ಹೆಣ್ಣು ಪ್ರತಿಭಟಿಸಲಾರದೆ ಸಂಪ್ರದಾಯವನ್ನು ಒಪ್ಪಿಕೊಂಡೇ ಬದುಕುವ ಸ್ಥಿತಿ ಇದೆ.

ಗಾರೆಸಿದ್ಧಾವ ಎಳಸೇರು ಕದಿಯುವುದು ಲೈಂಗಿಕ ಸಹಜ ಆಸಕ್ತಿಯಷ್ಟೆ ಸಹಜವಾದೆಂಬುದು ಚನ್ನನ ಅಭಿಮತ. ಗಾರೆಸಿದ್ಧಾವಗೆ ಅದರಲ್ಲಿ ಯಾವ ಪಾಪ ಪ್ರಜ್ಞೆಯೂ ಇಲ್ಲ. 'ಅಂಬೇಡ್ಕರ್ ಫೋಟ ಕಂಡಾಗ' ತೆಂಗಿನಕಾಯಿ ಹೊಡೆದು 'ಮಾದೇಶ್ವರಗೆ ಉಘೆ ಅನ್ನೋರಪ್ಪೊ' ಎನ್ನುತ್ತಾನೆ. ಇದು ಹಾಸ್ಯಕ್ಕಿಂತ ಅದರ ಹಿಂದಿನ ಮುಗ್ಧ ಅಮಾಯಕತೆ ವಿಶೇಷವಾದುದ್ದಾಗಿದೆ. ಕಂಬಕ್ಕೆ ಕಟ್ಟಿ ಹೊಡೆಯುವ ಪ್ರಸಂಗ ಕಾನೂನು ಅರಿವು ಮೂಡಿಸುತ್ತದೆ. ನಾಗರಾಜು ಬರುವುದಕ್ಕೆ ಮುಂಚೆ 'ಇವರವ್ವನ ಮಿಂಡ ನಾನು ಅಪ್ಪ' ಎಂದು ಬೈಯುತ್ತ ಹೊಡೆಯುತ್ತಿರುತ್ತಾರೆ; ನಾಗರಾಜು ಬಂದಾಗ ನಿಲ್ಲಿಸುತ್ತಾರೆ. ಆ ಗುಂಪಿಗೆ ಹೊಡೆಯುವ ಶಕ್ತಿ ಬರುವುದಿಲ್ಲ. ಪೋಲಿಸರಿಗೆ ಒಪ್ಪಿಸಬೇಕಿತ್ತು ಎಂದಾಗ ದಿಗ್ಭ್ರಮೆಗೆ ಒಳಗಾಗುತ್ತಾರೆ.

ಚನ್ನನ ಗುರುಗಳಾದ ಮಧ್ವಾಚಾರ್ಯರು ಕೂದಲೆಳೆಯಲ್ಲಿ ಕತ್ತು ಕೂಯುವಂತೆ ಬ್ರಾಹ್ಮಣ್ಯವನ್ನು ಸಮರ್ಥಿಸಿಕೊಳ್ಳುವ ಗುಣವುಳ್ಳವರು. ಆದ್ದರಿಂದ 'ಆತ ಹೊಲೆಯನಾದರೂ ಅತ್ಯಂತ ಯೋಗ್ಯನಲ್ಲವೆ? ಆತ ಆ ಹೊಲ ಜಾತೀಲಿ ಹುಟ್ಟಬಾರದಿತ್ತಲ್ಲವೆ?' ಅಂದುಕೊಳ್ಳುತ್ತಾರೆ. ಹಿಂದಿನಿಂದಲೂ ಬ್ರಾಹ್ಮಣಶಾಹಿ ವ್ಯವಸ್ಥೆ ಅತ್ಯುತ್ತಮವಾದುದ್ದನ್ನೆಲ್ಲ ಬುದ್ಧನನ್ನು ಒಳಗೊಂಡಂತೆ ಎಲ್ಲ ಪ್ರಗತಿಪರತೆಯನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಕುತಂತ್ರ ತೋರಿದೆ. ತನ್ನೊಳಿತಿನ ಬಂಧದಲ್ಲಿ ಪಳಗಿಸಿಕೊಳ್ಳುವ ಹುನ್ನಾರವನ್ನು ಹೇಳುವ ಮನಸ್ಸಿನದು. ಬದಲಾಗಿ ಆಚಾರ್ಯರಿಗೆ ನಾನೇಕೆ ಹೊಲರ ಜಾತೀಲಿ ಹುಟ್ಟಬಾರದಿತ್ತು ಎನಿಸುವುದಿಲ್ಲ!

ಯಾದ ತನ್ನ ಚಾಣಾಕ್ಷತನದಿಂದ ಹೋಟೆಲು ನಡಸಬಹುದು. ಮೋಸ ಮಾಡಿ ಬದುಕಬಹುದು ಅದಕ್ಕೆ ಆ ಜಾತಿಯ ಅನುಕಂಪವಿದೆ. ಜೀತಗಾರರ ಮಕ್ಕಳಿಗೆ ಈ ಬಗೆಯ ಯಾವ ಆಯ್ಕೆಯೂ ಇಲ್ಲ. ಒಂದು ಕೆಲಸದಿಂದ ಇನ್ನೊಂದಕ್ಕೆ ಹೊರಳಲು ಸಾಧ್ಯವಿಲ್ಲ. ಬಹುದೊಡ್ಡ ಅಡ್ಡಿಯಾಗಿ

ಜಾತಿ, ಸಾಮಾಜಿಕತೆ ನಿಯಂತ್ರಿಸಿರುತ್ತದೆ. ಹಾಗೆ ಶಾಸ್ತ್ರೀಯವರ ಮಗಳು ಮೈಸೂರಿನಲ್ಲಿ ದಲಿತನೊಬ್ಬನನ್ನು ಮದುವೆಯಾದ್ರು ಯಾವ ಅಡ್ಡಿಯಿಲ್ಲ. ಆದರೆ ಹಳ್ಳಿಯಲ್ಲಿ ಹೀಗಾಗದೆ ಚನ್ನನ ನಮ್ರತೆಯನ್ನ ಹೊಗಳುವ ಜನಸಮುದಾಯವೇ ಚನ್ನನ ಬಲಿ ತೆಗೆದುಕೊಳ್ಳುತ್ತದೆ.

ಚನ್ನನ ಕೊಲೆ ಅಮಾಯಕ ತಂದೆ ತಾಯಿಗೆ ಮಾತ್ರವಲ್ಲ, ಆ ಕೇರಿಗೂ ಗೊತ್ತಿಲ್ಲ. ಆದರೆ ಅವನ ಸುತ್ತ ಬೆಳೆದಿರುವ ಕಥೆಗಳು ಕುತೂಹಲಕಾರಿಯಾಗಿವೆ. ಸಾಬಿಯು 'ಚನ್ನ ಇಡೀ ಬೊಂಬಾಯ್ ಮೇಲೆನೆ ಅವ್ನು ಎ ಒನ್ ದಿಲ್‌ದಾರ್ ಅವ್ನೆ'. ಗಾರಸಿದ್ದ್ಮಾವ ಅಯ್ ಕೇಳೀ ಬಡ್ಡತ್ತವೇ....ಚನ್ನರಸ ಅಂತ ತಾನಿಯಪ್ಪ ಅವ ಹೆಸ್ರ ಚೆಂಜ್ ಮಾಡ್ಕಂಡಿದ್ದೂದು?....'ಆ ಬೊಂಬಾಯ್ ದೊರೆ ಅವ್ನಲ್ಲಾ, ಅವ ವಾರಕ್ಕ ಒಂದ್ಸಲ ಮಾತ್ರ ದರ್ಬಾರ್ ನಡ್ಸದು....' ಆ ನೂರ್ ನೂರ್‍ನ ರೂಪಾಯ್ ನೋಟ್ಗಳ ಒಲಗ ಹಾಕಿ ಉರ್ಸಿ ತಾನಿಯಪ್ಪ ಆ ಇಂದ್ರಗಾಂದಿ ಅನ್ನೌಳು ಟೀ ಕಾಯ್ಸಗಂಡು ಕುಡಿಯೋದು?.... ಕೇಳೀ ಅವಳ್ನಿಯಸುದ ಅಲ್ಲಿ ನೀ ಯಾರ ? ನೀ ಯಾವ್ರೂರ ? ಅನ್ನೌರು ಇಲ್ವಂತ. ಅಲ್ಲಗ್ಯ ತಿಳ್ಕಳ್ಳೀ....ಇನ್ನೆಂಗಿದ್ದಾದು ಅಂತ ! ಇನ್ನೆಂಗಿರಬೌದು?" ಇಲ್ಲಿ ಗಾರಸಿದ್ದ್ಮಾವನ ಈ ಮಾತುಗಳು ಮುಗ್ಧ ತನ್ನ ಕರುಳುಬಳ್ಳಿಗಳಿಗೆ ಬಿತ್ತುವ ವಿಸ್ಮಯಕರ ಕನಸುಗಳೀವಿಯಲ್ಲಾ ! ಇದು ಬದುಕನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯಲ್ಲಿ ಅಗಾಧ ಜೀವಪ್ರೇಮವಿರುವುದು ತುಂಬ ಮಹತ್ವದ್ದು ಎನ್ನಿಸುತ್ತದೆ. ಅಭದ್ರತೆಯ ನಡುವೆಯೇ ಸೃಜನಶೀಲ ಕನಸುಗಳನ್ನು ಕಟ್ಟುವ ಗಾರಸಿದ್ದ್ಮಾವನ ಪಾತ್ರ ದೇವನೂರು ಚಿತ್ರಿಸಿರುವ ಅಪ್ರತಿಮ ಪಾತ್ರವೇ ಆಗಿದೆ.

ಜೀತ ವಿಮೋಚನ ರ್‍ಯಾಲಿಯಲ್ಲಿ ಸೂಕ್ಷ್ಮಾತಿ ಸೂಕ್ಷ್ಮ ಸಂಗತಿಗಳು ದಾಖಲಾಗುತ್ತಲೇ ಕುರಿಯಯ್ಯನ ನನ್ನಿ ಮುಖ್ಯವಾಗುತ್ತದೆ. ಕುರಿಯಯ್ಯನ ಮೈದುಂಬುವ ತೂರಾರ ಜೋತಮ್ಮ ಯಾವ ಜಾತಿ ಪ್ರತಿನಿಧಿಸುತ್ತಾಳೆಂಬುದು ಪ್ರಮುಖವಾದದ್ದು. ಇಲ್ಲಿ ಸುಳ್ಳಿನ ನಾಟಕೀಯ ಗಂಭೀರತೆಯ ಸತ್ಯದ ಸಹಜ ನಡತೆಯನ್ನು ಸುಲಭವಾಗಿ ಗೆದ್ದುಬಿಡುತ್ತದೆ. ಬದುಕಿಗೆ ಬೇಕಾಗಿಯೇ ಇಲ್ಲದ ಸುಳ್ಳನ್ನು ಅನಿವಾರ್ಯ ಸತ್ಯವೆಂದು ಪರಂಪರೆಯ ಮೂಲಕ ಅಭಿವ್ಯಕ್ತಿಸುವ ಪ್ರಯತ್ನವಾಗಿದೆ. ಆ ಮೂಲಕ ಒಂದು ಸಮುದಾಯದ ಆಲೋಚನ ಕ್ರಮವನ್ನು ಬದಲಾಯಿಸುವ ತಂತ್ರವೇ ಹೊರತು ಇನ್ನೇನು ಅಲ್ಲ.

ಚನ್ನನ ಅಪ್ಪ ಶಿವಚಾರದ ಅಂಗಡಿ ಮುಂದೆ ಬಂದಾಗ "ನಿಂ ಜಾತ್ಯವರೆಲ್ಲಾ ನಾಳಕೆಂದ್ಲಿಯ ಜೀತ ಬುಟ್‌ಬುಟ್ಟರಂತಲ್ಲಾ...." ಪ್ರತಿಯಾಗಿ ಚನ್ನನ ಅಪ್ಪ 'ಬುದ್ಯೆ ಇದು ಯಾವ್ ಥರಪ್ಪಾ ಅಂದ್ರ, ಗುಳ್ಳನರಿ ಲಿಂಗ ಕಟ್ಟಸ್ಗಂಡ ಥರಾ....' ಇದು ಮೇಲ್ಜಾತಿಯವರ ದರ್ಪ, ದಲಿತರು ಆರ್ಥಿಕ ಹೀನ ಸ್ಥಿತಿಯಿಂದಾಗಿ ಹೊಟ್ಟೆಪಾಡಿನ ಕಾರಣಕ್ಕಾಗಿ ಅವರನ್ನೇ ಅವಲಂಬಿಸಬೇಕಾದ ದುಸ್ಥಿತಿಯನ್ನು ಹೇಳುತ್ತದೆ. ಮೂಲಭೂತವಾಗಿ ಯಾವ ಬಗೆಯ ಬದಲಾವಣೆ ದಲಿತ ಕೇರಿಗಳಲ್ಲಿ ಆಗಬೇಕಿದೆ ಎಂಬುದನ್ನು ಕಾದಂಬರಿ ತನ್ನ ಒಡಲಿನಲ್ಲಿ ಹಿಡಿದಿಟ್ಟಿದೆ.

ದೇವನೂರು ಮಹಾದೇವರವರ ಕುಸುಮಬಾಲೆ ಕಾದಂಬರಿಯ ಮುಖ್ಯ ಚೈತನ್ಯವಿರುವುದೇ ಆ ನೆಲದೊಡಲಿನ ಭಾಷೆಯಲ್ಲಿ. ಇಡೀ ಕಾದಂಬರಿ ಕಟ್ಟಿಕೊಡುವ ಭಾಷೆ ಈಗಾಗಲೇ ವಿಮರ್ಶಕರು ಅಭಿಪ್ರಾಯಪಟ್ಟಿರುವಂತೆ ವಿಮರ್ಶೆಯ ಮಾನದಂಡಕ್ಕೆ ಸವಾಲಿನಂತಿದೆ.

□

---

ರಘುನಾಥ ಬಿ.ಎನ್.
ಕನ್ನಡ ಸಂಶೋಧಕ
ಬೆಂಗಳೂರು ವಿಶ್ವವಿದ್ಯಾನಿಲಯ

# ಗೊರೂರರ 'ವೈಯ್ಯಾರಿ' ಕಥಾಸಂಕಲನ ಒಂದು ವಿವೇಚನೆ

ಶರತ್‌ಕುಮಾರ್ ಬಿ.

ಕನ್ನಡ ಕಥಾಸಾಹಿತ್ಯ ಎಂದಾಕ್ಷಣ ಮಾಸ್ತಿ ಅವರ ಹೆಸರು ಎಲ್ಲೆಡೆ ಕೇಳಿಬರುವುದು ಸಹಜ. ಕನ್ನಡ ಕಥಾ ಸಾಹಿತ್ಯದ ಸಮೃದ್ಧಿಗೆ, ಈ ಕ್ಷೇತ್ರದ ಕೃಷಿಯಲ್ಲಿ ತೊಡಗಿದವರು ಹಲವಾರು ಸಾಹಿತಿಗಳು. ಬಿ.ಸಿ. ರಾಮಚಂದ್ರಶರ್ಮ, ಯು.ಆರ್. ಅನಂತಮೂರ್ತಿ, ಯಶವಂತಚಿತ್ತಾಲ, ಪಿ. ಲಂಕೇಶ್, ಶಾಂತಿನಾಥ ದೇಸಾಯಿ–ಹೀಗೆ ಹಲವರು ಪ್ರಮುಖರಾಗಿದ್ದಾರೆ. ಇವರೆಲ್ಲರಿಗಿಂತ ಭಿನ್ನವಾಗಿ, ವೈವಿಧ್ಯವಾಗಿ, ತಮ್ಮದೇ ಸ್ವಂತಿಕೆಯಲ್ಲಿ ಕಥಾಸಾಹಿತ್ಯ ರಚಿಸಿದವರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರೂ ಪ್ರಮುಖರಾಗಿದ್ದಾರೆ.

ಸಾಹಿತ್ಯದ ಹಲವು ಪ್ರಕಾರಗಳನ್ನು ರಚಿಸಿದ ಗೊರೂರು ತಮ್ಮ ಕಥೆಗಳಲ್ಲಿ ತಮ್ಮದೇ ಸ್ವಂತಿಕೆಯನ್ನು ಪ್ರತಿಬಿಂಬಿಸಿದ್ದಾರೆ.

ಗೊರೂರರ ಕಥಾಸಂಕಲನಗಳಲ್ಲಿ 'ವೈಯ್ಯಾರಿ' ತನ್ನದೇ ಆದ ವೈಶಿಷ್ಟ್ಯತೆ, ವೈವಿಧ್ಯತೆಯಿಂದ ಕೂಡಿದೆ. ಲೇಖಕರ ಎಲ್ಲಾ ಕಥೆಗಳಲ್ಲೂ ಗ್ರಾಮೀಣ ಪರಿಸರದ ದಟ್ಟ ಪ್ರಭಾವವನ್ನು ಗುರುತಿಸಬಹುದಾಗಿದೆ. ಗ್ರಾಮೀಣರ ಜೀವನದ ರೀತಿ–ನೀತಿಗಳನ್ನೂ, ಅವರ ವಿವಿಧ ಮನಸ್ಸುಗಳ ಮೇಲೆ ಗೊರೂರರ ಕಥೆಗಳು ಬೆಳಕು ಚೆಲ್ಲುತ್ತವೆ. 'ವೈಯ್ಯಾರಿ'ಯೂ ಇದರಿಂದ ಹೊರತಾಗಿಲ್ಲ.

'ವೈಯ್ಯಾರಿ' ಕಥಾಸಂಕಲನದಲ್ಲಿ 'ಭೂತಯ್ಯನ ಮಗ ಅಯ್ಯು', 'ದೊಳ್ಳನ ಹರಕೆ', 'ಗಂಡುಬೀರಿ ಹೊಸಬಿ', 'ಈಡಿಗರ ಹೆಣ್ಣು', 'ಪುಟ್ಟ ಮಲ್ಲಿಗೆ', 'ದೃಷ್ಟಿಲಾಭ', 'ಲಕ್ಕಿಯ ಗುಡುಂದಿರು',

'ಹಾವಿನ ಅಯ್ಯ', 'ಗ್ರಾಮ ಪಂಚಾಯಿತಿಯ ಅಧ್ಯಕ್ಷ ಗೌಡರು', 'ಸಫಲ ಜೀವನ', 'ಕಲಾವಿದನ ಸ್ಫೂರ್ತಿ', 'ಶೌರ್ಯ-ಔದಾರ್ಯ', 'ವೈಯ್ಯಾರಿ'-ಹೀಗೆ ಒಟ್ಟು ಹದಿಮೂರು ಕಥೆಗಳಿವೆ. ಈ ಎಲ್ಲಾ ಕಥೆಗಳೂ ವಸ್ತು-ತಂತ್ರ-ಶೈಲಿ; ಎಲ್ಲಾ ವಿಧದಲ್ಲೂ ಒಂದಕ್ಕಿಂತ ಒಂದು ವಿಭಿನ್ನವಾಗಿದ್ದು ಹಲವು ವೈಶಿಷ್ಟ್ಯಗಳಿಂದ ಕೂಡಿದವುಗಳಾಗಿವೆ.

'ವೈಯ್ಯಾರಿ' ಕಥಾ ಸಂಕಲನದ ಮೊದಲ ಕಥೆ ಎಂದರೆ 'ಭೂತಯ್ಯನ ಮಗ ಅಯ್ಯು'. ೧೯೩೨-೩೩ರಲ್ಲಿಯೇ ರಚನೆಗೊಂಡ ಈ ಕಥೆ 'ಪ್ರಬುದ್ಧ ಕರ್ಣಾಟಕ'ದಲ್ಲೂ ಪ್ರಕಟಗೊಂಡಿತ್ತು. ಚಲನಚಿತ್ರ ರೂಪಕವಾಗಿಯೂ ಬಹಳಷ್ಟು ಪ್ರಸಿದ್ಧಿಯಾಗಿದೆ. ಇದೊಂದು ದೀರ್ಘ ಕಥೆಯೂ ಆಗಿದೆ. ಗ್ರಾಮೀಣ ಪರಿಸರದ ದಟ್ಟ ಚಿತ್ರಣ, ಗ್ರಾಮೀಣರ ವಿವಿಧ ಮನಸ್ಸು; ಬದುಕಿನ ಚಿತ್ರಣ, ಗೇಣಿ ವ್ಯವಸ್ಥೆ, ಆಡಳಿತಶಾಹಿ ವ್ಯವಸ್ಥೆಯ ಅಂತ್ಯ, ಮನುಷ್ಯನ ದುಡುಕು ಬುದ್ಧಿಗಳ ಅನಾವರಣ ಈ ಕಥೆಯಲ್ಲಿ ಸೊಗಸಾಗಿ ಮೂಡಿಬಂದಿದೆ.

ಈ ಕಥೆಯ ಕೇಂದ್ರ ಬಿಂದು ಅಯ್ಯು ಮತ್ತು ಗುಳ್ಳ. ಈ ಇಬ್ಬರ ಮನಸ್ಥಿತಿಯ ಬದಲಾವಣೆಯ ಪ್ರಯತ್ನಗಳು; ಈ ಮಾರ್ಗದಲ್ಲಿನ ಸಂದರ್ಭ-ಸನ್ನಿವೇಶಗಳು ಸೊಗಸಾಗಿ ಮೂಡಿಬಂದಿವೆ. ಅಯ್ಯುವಿನ ತಂದೆ ಬೂತಯ್ಯನವರು; ಪಾಳೆಯಗಾರರು, ಸರ್ವಾಧಿಕಾರಿ ಮನೋಧೋರಣೆಯವರು. ಕಥೆಯ ಪ್ರಾರಂಭದುದ್ದಕ್ಕೂ ಇವರ ಇಂತಹ ಗುಣಗಳ ವರ್ಣನೆಯೇ ಸಾಗಿದೆ. ಇವರೆಷ್ಟು ದುಷ್ಟರಾಗಿದ್ದರು ಎಂದರೆ 'ಬೂತಯ್ಯನವರು ಹಸಿ ಆಡನ್ನೇ ತಿನ್ನುತ್ತಾರೆ' ಎಂದು ಜನರೆಲ್ಲಾ ಹೇಳುತ್ತಿದ್ದರು. ಇವರು 'ಜೀವಮಾನದಲ್ಲೆಲ್ಲಾ ಒಂದು ಪ್ರಾಣಿಗೂ ಒಂದು ತುತ್ತು ಅನ್ನವನ್ನು ಕೊಟ್ಟವರಲ್ಲ'. ಸುಳ್ಳು ಸಾಕ್ಷಿಯ ಮೂಲಕ ರೈತರ ಭೂಮಿಯನ್ನೆಲ್ಲ ವಶಪಡಿಸಿಕೊಂಡಿದ್ದರು. 'ರೈತರಿಗೆ ಅಯ್ಯೋ ಎಂದರೆ ಸಾಕು, ಆರು ತಿಂಗಳು ಪಾಪ ಸುತ್ತಿಕೊಳ್ಳತ್ತೆ' ಎನ್ನುತ್ತಿದ್ದರು. ಇಂತಹವರ ಮಗನೇ ಅಯ್ಯು. 'ಆ ಕೇಡಿಗನ ಮಗ ಈ ಕೇಡುಗ' ಎಂದು ಜನ ಅಯ್ಯುವನ್ನು ಬಯ್ಯುತ್ತಿದ್ದರು. ಅಯ್ಯುವಿನ ಸಮವಯಸ್ಕ ಗುಳ್ಳ. ಈತ ಜಗಳಗಂಟಿ ಸ್ವಭಾವದವನು. ಸದಾ ಮೆತ್ತಗಿರುವವರ ಮೇಲೆ ರೇಗುತ್ತಿದ್ದನು. ಅಯ್ಯುವಿನ ತಂಟೆಗೆ ಮಾತ್ರ ಹೋದವನಲ್ಲ. ಯಾವಾಗ ಅಯ್ಯು ಆಗಾಗ್ಗೆ ಮೃದುವಾಗುತ್ತಾನೆಂಬುದು ತಿಳಿಯಿತೋ 'ನಾನು ಅಯ್ಯನನ್ನು ನುಂಗಿ ನೀರು ಕುಡಿದೇ ಬಿಡುತ್ತೇನೆ' ಎಂದುಕೊಂಡ. ಹುಲ್ಲುಗಾವಲಿನ ಗುತ್ತಿಗೆಯ ವಿಚಾರದಲ್ಲಿ ಇಬ್ಬರಿಗೂ ಮನಸ್ತಾಪವಾಗಿ ಅಯ್ಯು ಗುಳ್ಳನ ಮೇಲೆ ಕ್ರಿಮಿನಲ್, ಸಿವಿಲ್ ಮೊಕದ್ದಮೆ ಹೂಡಿದನು. ಇಬ್ಬರೂ ಕೋರ್ಟಿಗೆ ಅಲೆಯಲಾರಂಭಿಸಿದರು. ಇಬ್ಬರ ಹಣವೂ ಕರಗುತ್ತಿದ್ದರೂ ಮೊಕದ್ದಮೆಗೆ ಅಂತ್ಯ ಕಾಣಲಿಲ್ಲ. ಅಯ್ಯುವಿಗೆ ಈ ವೆಚ್ಚ ಗಣನೀಯವಲ್ಲ ಆದರೆ ಗುಳ್ಳನಿಗೆ? ಹಣ ಸಹಿತವಾಗಿ ಹುಣಸೆ, ಬೇಳೆ, ಬೆಣ್ಣೆ ಎಲ್ಲವನ್ನೂ ತೆತ್ತುದಾಯಿತು. ಲಾಯರಿ ಮನೆಯ ಸೌದೆಯನ್ನೂ ಹೊಡೆದ. ಕೋರ್ಟು-ವ್ಯಾಜ್ಯ-ದುಡ: ಇವುಗಳ ಮಧ್ಯೆ ಸಾಮಾನ್ಯ ಮನುಷ್ಯ ಹೇಗೆ ನಲುಗುತ್ತಾನೆಂಬುದರ ನೈಜ ಚಿತ್ರಣ ಇಲ್ಲಿದೆ. ಗುಳ್ಳನ ಕೋಪ ಇಷ್ಟಾದರೂ ಕಡಿಮೆಯಾಗಲಿಲ್ಲ. ಕೋಪದ ಕೈಯಲ್ಲಿ ಬುದ್ಧಿ ನೀಡಿದ್ದರಿಂದ ಹೆಂಡತಿ ಮಾತು ಕೇಳುವ ವ್ಯವಧಾನವೂ ಇರಲಿಲ್ಲ. ಒಂದೇ ಛಲ-

ಅಯ್ಯುವಿನ ಕೊಲೆ. ಆದರೆ ಅಯ್ಯುವಿನ ಮನಸ್ಸು ಬದಲಾವಣೆಗೊಳ್ಳುತ್ತದೆ. ನದಿಯ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದ ಗುಳ್ಳನ ಹೆಂಡತಿಯನ್ನು ನಿಸ್ವಾರ್ಥತೆಯಿಂದ ರಕ್ಷಿಸುತ್ತಾನೆ. "ಹಾಳು ವ್ಯಾಜ್ಯಕ್ಕೆ ಬೆಂಕಿ ಹಾಕಲಿ....ನಾವು ಎರಡು ಕಾಲಿನ ದನಗಳು....ಎಲ್ಲಾ ಕೇಸುಗಳನ್ನೂ ಇಬ್ಬರೂ ವಾಪಸು ತೆಗೆದುಕೊಳ್ಳಬೇಕು" ಎಂಬ ತೀರ್ಮಾನಕ್ಕೆ ಬರುತ್ತಾನೆ. ಇಲ್ಲಿ ಅಯ್ಯುವಿನ ಮನಸ್ಸು ಪರಿವರ್ತನೆಯ ಹಾದಿಯಲ್ಲಿರುವುದನ್ನು ಗಮನಿಸಬಹುದು. ಆತನ ಹೃದಯ ವೈಶಾಲ್ಯತೆಯನ್ನು ತಿಳಿಯಬಹುದು. ಅಯ್ಯುವಿನ ಭಾಮೈಕ ಶಕುನಿ ಅಂತಹವನು. ಗುಳ್ಳನಲ್ಲಿ ಋಣಾತ್ಮಕ ಪ್ರಚೋದನೆಗೆ ಪ್ರಯತ್ನಿಸುತ್ತಾನೆ. ಅಯ್ಯು ತನ್ನ ಸ್ಥಿಮಿತತೆಯನ್ನು ಕಾಯ್ದುಕೊಳ್ಳುತ್ತಾನೆ. ಗುಳ್ಳನಿಗೆ ಸ್ವಲ್ಪವೂ ಪಶ್ಚಾತ್ತಾಪವಿಲ್ಲ. ಸಾಯಲು ಹೊರಟಿದ್ದ ಹೆಂಡತಿಯ ಮೇಲೇ ರೇಗುತ್ತಾನೆ. 'ಅಯ್ಯ ಇದರಲ್ಲೂ ನನ್ನ ಕೊಂದ' ಎಂಬಂತೆ ಕೋಪೋದ್ರಿಕ್ತನಾಗುತ್ತಾನೆ. ರಾಜಿಗಾಗಿ ಅಯ್ಯುವೇ ಹೇಳಿಕಳುಹಿಸಿದರೂ ಒಪ್ಪುವುದಿಲ್ಲ. ಇದರಲ್ಲೂ ದೋಷವನ್ನು ಹುಡುಕುತ್ತಾನೆ. 'ಮನಸ್ಸಿನಂತೆ ಬುದ್ಧಿ' ಅಲ್ಲವೆ! ಗುಳ್ಳ ಜೈಲಿಗೆ ಹೋಗುವುದನ್ನು ಅಯ್ಯುವೇ ತಪ್ಪಿಸುತ್ತಾನೆ. ಆದರೂ ಗುಳ್ಳನ ದ್ವೇಷ ಕರಗುವುದಿಲ್ಲ. ಹಳ್ಳಿಗರೆಲ್ಲರನ್ನೂ ಒಟ್ಟು ಮಾಡುತ್ತಾನೆ. '....ಐದಾಳು ಸತ್ತರೂ ಚಿಂತೆ ಇಲ್ಲ ನುಗ್ಗಿಯೇ ಬಿಡೋಣ' ಎಂದು ಅಯ್ಯುವಿನ ಮನೆಯನ್ನೇ ದೋಚುತ್ತಾನೆ. ಅಯ್ಯು ನಿರ್ಲಿಪ್ತನಾಗುತ್ತಾನೆ. ದನದ ಕೊಟ್ಟಿಗೆಯಲ್ಲಿ ಅಕಸ್ಮಾತ್ ಲಾಂಧ್ರ ಬಿದ್ದದ್ದರಿಂದ ಇಡಿ ಮನೆಯೇ ಭಸ್ಮವಾಗುತ್ತದೆ. 'ಇದೊಂದು ಸಲ ತಪ್ಪಿಸಿಕೊಂಡರೆ ಸಾಕು, ಮುಂದೆ ಪ್ರಾಣ ಹೋದರೂ ಇಂತಹ ಭಂಡ ಬಾಳನ್ನು ಬಾಳಬಾರದು, ದೇವರೇ!' ಎಂಬ ಭಯ ಎಲ್ಲ ರೈತರನ್ನೂ ಕಾಡುತ್ತದೆ. ಅಯ್ಯುವಿನ ವಿವೇಕ ಇಲ್ಲಿ ಪ್ರಕಟಗೊಳ್ಳುತ್ತದೆ. ಪೋಲೀಸರಲ್ಲಿ ಬಾಯಿ ಬಿಟ್ಟಿದ್ದರೆ ಯಾರಿಗೂ ಶಿಕ್ಷೆ ತಪ್ಪುತ್ತಿರಲಿಲ್ಲ. ಆದರೆ ಇದರಿಂದ ದ್ವೇಷ ಶಾಂತವಾಗುವುದಿಲ್ಲ ಎಂಬುದನ್ನು ಅಯ್ಯ ಅರಿತುಕೊಳ್ಳುತ್ತಾನೆ. 'ನಮ್ಮ ತಂದೆ ಅವತ್ತು ಎಸೆದಿದ್ದ ಕಲ್ಲು ಇವತ್ತು ಹಿಂದಿರುಗಿತು. ಇದನ್ನು ಹೂತುಬಿಡಬೇಕು. ಹಾಗಲ್ಲದೆ ನಾನು ಇದನ್ನು ಮತ್ತೆ ಎಸೆದರೆ ಇದರ ಎರಡರಷ್ಟು ಜೋರಾಗಿ ನನ್ನ ಮಕ್ಕಳಿಗೆ ತಿರುಗಿ ಹೊಡೆಯುವುದು. ಊರನ್ನೆಲ್ಲಾ ನನ್ನವರನ್ನಾಗಿ ಮಾಡಲು ಇದೇ ಸಮಯ. ನಾವು ಮನುಷ್ಯನಿಗೆ ಒಳ್ಳೆಯದನ್ನು ಮಾಡಿದರೆ ಅವನಲ್ಲಿರುವ ಒಳ್ಳೆಯ ಸ್ವಭಾವವೇ ಅಭಿವೃದ್ಧಿಯಾಗುತ್ತದೆ'. ಅಯ್ಯುವಿನ ಈ ವಿವೇಕ ಸಂದರ್ಭೋಚಿತವಾದುದು. ಪೋಲೀಸರಿಗೆ 'ನನ್ನ ಮನೆಗೆ ಯಾರೂ ನುಗ್ಗಿರಲಿಲ್ಲ' ಎನ್ನುತ್ತಾನೆ. ಎಲ್ಲರಿಗೂ ದಿಗ್ಭ್ರಮೆ. ಈ ಸಂದರ್ಭದಲ್ಲಿ ಎಂಥ ಕಟುಕನಿಗೂ ಮನಃ ಪರಿವರ್ತನೆಗೊಳ್ಳಲು ಸಾಧ್ಯವಿಲ್ಲದೇ ಇಲ್ಲ. ಗುಳ್ಳನಿಗೂ ಪಶ್ಚಾತ್ತಾಪವಾಗುತ್ತದೆ. ಆತನ ಮನಸ್ಸಿನ ದ್ವೇಷ ಕರಗುತ್ತದೆ. ಆಶ್ಚರ್ಯದ ಬದಲು ಕೃತಜ್ಞತೆಯ ದೈನ್ಯತೆ ತುಂಬುತ್ತದೆ. ಅಯ್ಯುವಿನ ಈ ವಿವೇಕದಿಂದ ನೂರು ವರ್ಷ ಸಜೆ ವಿಧಿಸಿದರೂ ಕರಗದ ದ್ವೇಷ 'ಮನುಷ್ಯ ಸ್ವಭಾವ ಕೊನೆಯಲ್ಲಿ ಒಳ್ಳೆಯದೇ' ಎಂಬಂತಾಗುತ್ತದೆ. ಹೆಚ್ಚಿನ ಮಳೆಯಿಂದಾಗಿ ಪ್ರವಾಹವೆರಗಿದಾಗ ಅಪಾಯಕ್ಕೆ ಸಿಲುಕಿದ ಅಯ್ಯುವಿನ ಹೆಂಡತಿ–ಮಕ್ಕಳ ರಕ್ಷಣೆಗೆ ಊರಿಗೆ ಊರೇ ನಿಲ್ಲುತ್ತದೆ. ಗುಳ್ಳನ ಹೊಸ ಮನಸ್ಸಿನ ಪ್ರದರ್ಶನಕ್ಕೆ ಈ ಸಂದರ್ಭ ಸೂಕ್ತ ವೇದಿಕೆಯಾಗಿದೆ. ತನ್ನ ಪ್ರಾಣಾಪಾಯವನ್ನೂ ಲೆಕ್ಕಿಸದೆ ಆ ಸರಿರಾತ್ರಿಯಲ್ಲಿ ಪ್ರವಾಹಕ್ಕೆ ಧುಮುಕಿ ಅವರನ್ನು ರಕ್ಷಿಸುತ್ತಾನೆ. ಅಯ್ಯು ಗುಳ್ಳನ ಹೆಂಡತಿಯನ್ನು ಉಳಿಸಿದ್ದು, ಗುಳ್ಳ ಅಯ್ಯನ ಹೆಂಡತಿ ಮಕ್ಕಳನ್ನು ಉಳಿಸಿದ್ದು

ಒಳ್ಳೆಯತನಕ್ಕೆ, ನ್ಯಾಯ–ನೀತಿಗೆ ಸಂದ ಮಾನ್ಯತೆಯಾಗಿದೆ. ಗ್ರಾಮೀಣರ ವೈವಿಧ್ಯ ಮನಸ್ಸುಗಳ ಪ್ರದರ್ಶನವನ್ನು ಲೇಖಕರು ಇಲ್ಲಿ ಸಂದರ್ಭೋಚಿತವಾಗಿ, ಸೂಕ್ತ ಸನ್ನಿವೇಶ ನಿರ್ಮಾಣದಲ್ಲಿ ಪ್ರಕಟಿಸಿದ್ದಾರೆ.

ಸುಗ್ಗಿಯ ಜಾತ್ರಾ ಮಹೋತ್ಸವದಲ್ಲಿ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಒಳಜಗಳ, ವರ್ಗ–ವರ್ಗಗಳ ಭಿನ್ನಾಭಿಪ್ರಾಯಗಳನ್ನು ಹಾಗೂ ಕೆಲವರ ಸಮಯ ಸಾಧಕತನವನ್ನು ಪ್ರತಿಬಿಂಬಿಸುವುದೇ 'ದೊಳ್ಳನ ಹರಕೆ'. ಹಬ್ಬದ ವಾತಾವರಣದಲ್ಲಿ ಗ್ರಾಮೀಣರ ವಿಲಾಸಿತನವನ್ನು (ಹೆಂಡ, ಬಾಡು) ಈ ಕಥೆ ಪ್ರತಿಬಿಂಬಿಸುತ್ತದೆ. ತನ್ನ ವೈಯುಕ್ತಿಕ ಹಿತಾಸಕ್ತಿಗೋಸ್ಕರ ಎರಡು ವರ್ಗಗಳ ನಡುವೆಯೇ ಭಿನ್ನಾಭಿಪ್ರಾಯ ಸೃಷ್ಟಿಸುವ ಜನರು ಇಂದೂ ನಮ್ಮಲ್ಲಿದ್ದಾರೆ. ಕೋಣ ಬಲಿ ಚಿತ್ರಣವನ್ನು ಈ ಕಥೆ ಸೊಗಸಾಗಿ ಕಟ್ಟಿಕೊಡುತ್ತದೆ. ಹಿಂದಿನ ಸಂಪ್ರದಾಯ, ಕಂದಾಚಾರಗಳಿಗೆ ಯಾವುದೇ ಮೂಲ ತಳಹದಿ ಎಂಬುದು ಇಲ್ಲವೆಂಬ ಅಭಿಪ್ರಾಯ ಈ ಕಥೆಯಲ್ಲಿ ವ್ಯಕ್ತಗೊಂಡಿದೆ. ಭೂತ ಶಾಂತಿಯ ಪರಿಕಲ್ಪನೆಯನ್ನು 'ದೊಳ್ಳನ ಹರಕೆ' ಕಥೆ ಪರಿಚಯಿಸಿದೆ. ಓದುಗರ ಆಸಕ್ತಿ, ಕುತೂಹಲವನ್ನು ಕೊನೆಯವರೆಗೂ ಉಳಿಸುವಲ್ಲಿ ಸ್ವಲ್ಪ ಮಟ್ಟಿಗೆ ವಿಫಲವಾಗಿದ್ದರೂ, ಗ್ರಾಮೀಣರ ಆಚರಣೆಗಳ ಚಿತ್ರಣ ಕಥೆಯಲ್ಲಿ ಸೊಗಸಾಗಿದೆ ಎನ್ನಬಹುದು.

ತಾಯಿಯಿಲ್ಲದ ತಬ್ಬಲಿ, ದುಡಿಯಲಾಗದ ಕುಡುಕ ತಂದೆಯೊಂದಿಗೆ ಇಬ್ಬರು ತಮ್ಮಂದಿರನ್ನು ಜವಾಬ್ದಾರಿಯುತವಾಗಿ ರಕ್ಷಿಸಿಕೊಂಡು ಎಲ್ಲಾ ರೀತಿಯ ಕಾರ್ಯಗಳಲ್ಲೂ ತನ್ನನ್ನು ತೊಡಗಿಸಿಕೊಂಡು ಸ್ವತಂತ್ರ ಜೀವನ ನಡೆಸಲು ಮುಂದಾದ ಬಾಲೆಯೊಬ್ಬಳ ಕಥೆಯೇ 'ಗಂಡು ಬೀರಿ ಹೊಸಬಿ' ಗಂಡಸಿಗೆ ಸರಿಸಮನಾಗಿ ಎಲ್ಲಾ ಕೆಲಸ ಕಾರ್ಯಗಳಲ್ಲೂ ಯಶಸ್ಸು ಕಂಡ ಹುಡುಗಿ ಹೊಸಬಿ. 'ಹೆಂಗಸಿಗೆ ಹೆಂಗಸೇ ಶತ್ರು' ಎಂಬುದನ್ನು ಬೋರಿ, ಕಾಳಿ ಪಾತ್ರಗಳು ರುಜುವಾತುಪಡಿಸಿವೆ. ಕುಡಿತಕ್ಕೆ ದಾಸನಾಗಿದ್ದ ಬೋರ ಮಗಳ ಬುದ್ಧಿ, ದುಡಿಮೆಯ ಶ್ರಮಕ್ಕೆ ಬೆರಗಾಗಿ ಕುಡಿಯುವುದನ್ನೂ ಬಿಡುತ್ತಾನೆ. ಎಲ್ಲಾ ಸಂಗತಿ, ಸನ್ನಿವೇಶಗಳೂ ಗ್ರಾಮೀಣ ಚಿತ್ರಣದ ಹಿನ್ನೆಲೆಯಲ್ಲಿಯೇ ಪ್ರತಿಬಿಂಬಿತಗೊಂಡಿವೆ.

ಸಂಕೀರ್ಣ ಬದುಕಿನ ಚಿತ್ರಣವನ್ನು ಪ್ರತಿಬಿಂಬಿಸುವ ಕಥೆ 'ಈಡಿಗರ ಹೆಣ್ಣು' ಪಟ್ಟಣ–ಗ್ರಾಮೀಣ ಪ್ರದೇಶಗಳ ವೈರುಧ್ಯಗಳನ್ನು ಲೇಖಕರು ಪರಿಣಾಮಕಾರಿಯಾಗಿ ಇಲ್ಲಿ ಚಿತ್ರಿಸಿದ್ದಾರೆ. ಮಾಧು ಹಾಗೂ ಶ್ಯಾಮ ಇಬ್ಬರೂ ಪ್ರಾಣ ಸ್ನೇಹಿತರು. ಮಾಧುವಿನ ಮನೆ ಹಣದ ಹುತ್ತವಾಗಿದೆ. ಶ್ಯಾಮ ವಿದ್ಯಾರ್ಜನೆಗಾಗಿ ಪಟ್ಟಣಕ್ಕೆ ಬಂದವನು. ಇವರಿಬ್ಬರ ಮನಸ್ಸುಗಳೂ ವೈರುಧ್ಯ. ಮಾಧುವಿಗೆ ಹಳ್ಳಿ ಎಂದರೆ ಆಗದು. ಈತನ ಪಾಲಿಗೆ ಇದೊಂದು ಹಾಳು ಕೊಂಪೆ. ಸನ್ಯಾಸಿಗಳು ಮತ್ತು ಮೈಗಳ್ಳರು ಮಾತ್ರ ಇಲ್ಲಿರಲು ಸಾಧ್ಯವೆಂದು ತಿಳಿದಿದ್ದನು. ಶ್ಯಾಮನಿಗಾದರೋ ಎಲ್ಲಾ ಸುಖವೂ ಹಳ್ಳಿಯೇ. ಈ ಸಂದರ್ಭಗಳಲ್ಲಿ ಹಳ್ಳಿಯ ವಾತಾವರಣಕ್ಕೆ ಮಾಧುವಿನ ಮನಸ್ಸು ಬದಲಾಗುವುದು ಕಳ್ಳಭಟ್ಟಿ ಇಳಿಸುವ 'ಈಡಿಗರ ಹೆಣ್ಣು' ಲಕ್ಷ್ಮಿಯಿಂದ. ಸಿವಿಲ್ ಪರೀಕ್ಷೆ ತೇರ್ಗಡೆಯಾಗಿ, ತಂದೆ ಬಂದು ಕರೆದರೂ ಮಾಧು ಹೋಗುವುದಿಲ್ಲ. ಆತನ ಪಾಲಿಗೆ ಲಕ್ಷ್ಮಿಯೇ ದೇವರು; ವಿಸ್ತಾರವಾಗಿ

ಹರಡಿದ್ದ ಭೂಮಿಯೇ ದೇವಾಲಯವಾಗುತ್ತದೆ. ಗ್ರಾಮೀಣ ಪರಿಸರದ ದಟ್ಟ ಪ್ರಭಾವದ ಚಿತ್ರಣವನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

ಕಥಾ ಸಂಕಲನದ ಉಳಿದ ಕಥೆಗಳೂ ಗ್ರಾಮೀಣ ಪರಿಸರದ ದಟ್ಟ ಪ್ರಭಾವದ ಹಿನ್ನೆಲೆಯಲ್ಲಿಯೇ ರಚನೆಗೊಂಡಿವೆ. ಗ್ರಾಮೀಣರ ಬದುಕಿನ ನೈಜ ಚಿತ್ರಣ, ಕೃಷಿಕನ ಸಮಸ್ಯೆಗಳು, ವಿವಾಹ ಪದ್ಧತಿ, ಕಂದಾಚಾರಗಳು, ಸಮಯ ಸಾಧಕತನ, ಸಾಮಾಜಿಕ ಪಿಡುಗುಗಳು, ಬ್ರಾಹ್ಮಣ ಸಮಾಜದಲ್ಲಿದ್ದ ತಳುಕು–ಇವಷ್ಟೇ ಅಲ್ಲದೆ ಕೃಷಿಕನ ಬಗ್ಗೆ ಗೊರೂರರಿಗಿದ್ದ ಪ್ರೀತಿ–ಗೌರವವನ್ನು ಅಭಿವ್ಯಕ್ತಿಸಿರುವುದೇ 'ಪುಟ್ಟ ಮಲ್ಲಿಗೆ' ಕಥೆ. ಈ ಎಲ್ಲಾ ಅಂಶಗಳನ್ನು ಸಣ್ಣ ಕಥೆಯಲ್ಲಿ ಹಿಡಿದಿಟ್ಟಿರುವ ಲೇಖಕರ ತಂತ್ರಗಾರಿಕೆ ಗಮನಾರ್ಹವಾದುದು. ಮನುಷ್ಯನ ಸಮಯ ಸಾಧಕತನ, ಆತನ ಕೃತಘ್ನತೆಗಳನ್ನು ವಸ್ತುವಾಗಿರಿಸಿಕೊಂಡು ರಚನೆಗೊಂಡ ಕಥೆ 'ದೃಷ್ಟಿಲಾಭ'. ಐಶ್ವರ್ಯದ ನಡುವೆಯೂ ಪ್ರೀತಿಯನ್ನು ಕಾಣಲಾಗದೆ ಮದುವೆಯಾದ ಎಂಟು ತಿಂಗಳೊಳಗೇ ವಿಧವೆ ಆದ ಹುಡುಗಿಯೊಬ್ಬಳ ಕಥೆ 'ಲಕ್ಕಿಯ ಗಂಡಂದಿರು'. ಆದರೆ ಲಕ್ಕಿಗೆ ಈ ಬಗ್ಗೆ ಯಾವ ದುಃಖವೂ ಇಲ್ಲ; ಕಾರಣ ಆತ ಮುದಿಗಂಡ. ಹೆಣ್ಣಿಗೆ ಇರುವ ಸಹಜ ಆಸೆ–ಆಕಾಂಕ್ಷೆಗಳು ಈ ಕಥೆಯಲ್ಲಿ ಪ್ರಕಟಗೊಂಡಿವೆ. ದೊಡ್ಡಬೋರನ ಮೊಮ್ಮಗನಾದ ಹನುಮ ಮತ್ತು ಲಕ್ಷ್ಮಿ ಇವರಿಬ್ಬರೂ ಪ್ರೀತಿಯ ಬಲೆಗೆ ಸಿಲುಕಿದರೂ ವಿಧವೆಯನ್ನು ಸೊಸೆಯಾಗಿ ಸ್ವೀಕರಿಸಲು ಹನುಮನ ಅಪ್ಪ ಕೆಂಗನಿಗೆ ಸುತಾರಾಂ ಇಚ್ಛೆಯಿಲ್ಲ. ದೊಡ್ಡ ಬೋರನೇ ಇದಕ್ಕೆ ಸಮ್ಮತಿ ನೀಡುತ್ತಾನೆ. ಲೇಖಕರ ಸಾಮಾಜಿಕ ಪ್ರಜ್ಞೆ ಇಲ್ಲಿ ವ್ಯಕ್ತಗೊಂಡಿದೆ.

'ವೈಯ್ಯಾರಿ' ಕಥಾ ಸಂಕಲನದಲ್ಲಿ ಐತಿಹಾಸಿಕ ಅಂಶಗಳ ಮೇಲೆ ಬೆಳಕು ಚೆಲ್ಲುವ ಎರಡು ಕಥೆಗಳೆಂದರೆ 'ಹಾವಿನ ಅಯ್ಯ' ಮತ್ತು 'ಶೌರ್ಯ–ಔದಾರ್ಯ'. 'ಹಾವಿನ ಅಯ್ಯ'ವು ಮೈಸೂರು ಅರಸರ ಕಾಲವನ್ನು ಪ್ರತಿಬಿಂಬಿಸಿದರೆ, 'ಶೌರ್ಯ–ಔದಾರ್ಯ'ವು ಹೊಯ್ಸಳರ ಸಾಮರ್ಥ್ಯ, ಇವರ ಔದಾರ್ಯವನ್ನು ಕುರಿತು ರಚನೆಗೊಂಡಿದೆ.

ರಾಜಕಾರಣಿಗಳ ಭ್ರಷ್ಟತೆಯನ್ನು ಕೆಳಹಂತದ ರಾಜಕಾರಣಿಗಳಾದ ಗ್ರಾಮಪಂಚಾಯ್ತಿ ಅಧ್ಯಕ್ಷರ ಮೂಲಕ ತಿಳಿಯಪಡಿಸಿರುವುದೇ 'ಗ್ರಾಮಪಂಚಾಯ್ತಿಯ ಅಧ್ಯಕ್ಷ ಗೌಡರು' ಎಂಬ ಕಥೆ. ಗ್ರಾಮಪಂಚಾಯ್ತಿಯಲ್ಲಿ ಅಧ್ಯಕ್ಷನಾದ ದಾಸೇಗೌಡ ಭ್ರಷ್ಟತೆಯಿಂದ ಗಳಿಸಿದ್ದೆಲ್ಲವನ್ನೂ ತನ್ನ ಅವಿವೇಕದಿಂದ ಕಳೆದುಕೊಂಡು ಪಶ್ಚಾತ್ತಾಪದಿಂದ ಪ್ರಜ್ಞಾವಂತನಾದ ಕಥೆಯೇ ಇದು. ಗ್ರಾಮೀಣ ಪ್ರದೇಶದ ದಿನನಿತ್ಯ ಚಟುವಟಿಕೆಗಳು ಪರಿಣಾಮಕಾರಿಯಾಗಿ ಇಲ್ಲಿ ಚಿತ್ರಿತಗೊಂಡಿರುವುದು ಗಮನಾರ್ಹ.

'ಕಾಯಕವೇ ಕೈಲಾಸ' ತತ್ತ್ವದಡಿ ರಚನೆಯಾದ ಕಥೆಯೇ 'ಸಫಲ ಜೀವನ'. ತಾನು ಮಾಡುವ ಕೆಲಸದಲ್ಲಿಯೇ ದೇವರನ್ನು ಕಾಣುವ ಮನೋಭಾವ ಈ ಕಥೆಯಲ್ಲಿ ಪ್ರಕಟಗೊಂಡಿವೆ. ಗಂಡ–ಹೆಂಡತಿಯರ ಮನಸ್ಸಿನಲ್ಲಿನ ಭಾವನೆಗಳು ಭಿನ್ನವಾಗಿದ್ದರೆ ದಾಂಪತ್ಯದ ಮೇಲೆ ಬೀರುವ

ಪರಿಣಾಮವನ್ನು ಲೇಖಕರು ಈ ಕಥೆಯಲ್ಲಿ ಗ್ರಾಮೀಣ ಹಿನ್ನೆಲೆಯೊಂದಿಗೆ ಬಹಳ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಎಲ್ಲಾ ಕಥೆಗಳೂ ಗ್ರಾಮೀಣ ಹಿನ್ನೆಲೆಯಲ್ಲಿಯೇ ರಚನೆಗೊಂಡಿದ್ದರೂ 'ಕಲಾವಿದನ ಸ್ಫೂರ್ತಿ' ಇದಕ್ಕೆ ಸ್ವಲ್ಪ ಅಪವಾದ ಎಂಬಂತಿದೆ. ಕಲಾವಿದನ ಜಾಣ್ಮೆ, ಪ್ರತಿಭೆ, ಆತನಿಗೆ ಒದಗಿದ ಪ್ರೇರಣೆ, ಸ್ನೇಹ–ವಿಶ್ವಾಸಗಳ ಧರ್ಮ ಸಂಕಟಗಳ ಚಿತ್ರಣ 'ಕಲಾವಿದನ ಸ್ಫೂರ್ತಿ'ಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿತಗೊಂಡಿದೆ.

ಕಥಾ ಸಂಕಲನದ ಕೊನೆಯ ಹಾಗೂ ಶೀರ್ಷಿಕೆ ಉಳ್ಳ ಕಥೆಯೇ 'ವೈಯ್ಯಾರಿ'. ಹೆಸರೇ ಸೂಚಿಸುವಂತೆ ಬಿಂಕದ ಹೆಣ್ಣೊಬ್ಬಳ ಕಥೆಯಿದು. ಕುಟುಂಬದಲ್ಲಿ ರೂಪವತಿಯಾದ ವಿಧವೆಯೊಬ್ಬಳಿದ್ದರೆ ಅದರ ಪರಿಣಾಮ ಇತರೆ ಸೋದರಿಯರ ಮೇಲೆ ಯಾವ ರೀತಿ ಉಂಟಾಗುತ್ತದೆ ಎಂಬುದನ್ನು ಲೇಖಕರು ಇಲ್ಲಿ ಚಿತ್ರಿಸಿದ್ದಾರೆ. ಗ್ರಾಮೀಣ ಆಚರಣೆಗಳ ಚಿತ್ರಣ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಬಾಲ್ಯವಿವಾಹ, ತೆರಪದ್ಧತಿ, ವಿವಾಹಾಚರಣೆ, ಸಂಪ್ರದಾಯ ಕಟ್ಟಳೆಗಳ ಸಂದರ್ಭೋಚಿತ ಬಳಕೆ ಇಲ್ಲಿ ಪ್ರಕಟಗೊಂಡಿದೆ. ವಿಧವೆ ಎಂಬುದರ ಅರ್ಥವನ್ನೇ ತಿಳಿಯದ ಬಾಲ ವಿಧವೆಯೊಬ್ಬಳ ಕಥೆ ಇದು. ಪುನರ್ವಿವಾಹದ ಮೂಲಕ ಸಮಾಜ ಬದಲಾವಣೆಗೆ ಮುನ್ನುಡಿ ಬರೆಯುವ ಮಹತ್ತರ ಕಾರ್ಯ ಈ ಕಥೆಯಲ್ಲಿದೆ.

ಹೀಗೆ, ಕಥಾಸಂಕಲನದ ಎಲ್ಲಾ ಕಥೆಗಳೂ ಹಲವು ವೈವಿಧ್ಯತೆಗಳಿಂದ ಕೂಡಿದ್ದು ಗ್ರಾಮೀಣ ಪರಿಸರದ ಹಿನ್ನೆಲೆಯಲ್ಲಿಯೇ ರಚನೆಗೊಂಡಿವೆ. "ಶ್ರೀ ಗೊರೂರ್ ಅವರು ಹಳ್ಳಿಯ ಅನೇಕ ಸಾಮಾನ್ಯ ವ್ಯಕ್ತಿಗಳನ್ನೇ ಇಲ್ಲಿ ಸುಂದರವಾಗಿ ಚಿತ್ರಿಸಿ ಜನಜೀವನದ ಚೆಲುವು–ನೋವುಗಳನ್ನು ವಾಚಕರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ" ಎಂಬ ಶಿವರಾಮ ಕಾರಂತರ ಅಭಿಪ್ರಾಯ 'ವೈಯ್ಯಾರಿ' ಸಂಕಲನದ ಕಥೆಗಳಿಗೆ ಅನುರೂಪವಾಗಿದೆ ಎನ್ನಬಹುದು.

□

ಶರತ್‌ಕುಮಾರ್ ಬಿ. S/o ಎನ್. ಬೈರೇಗೌಡ
'ನಿರೀಕ್ಷೆ', ಪೂರ್ಣಚಂದ್ರ ಕಾನ್ವೆಂಟ್ ರಸ್ತೆ, ಕುವೆಂಪುನಗರ, ಚನ್ನರಾಯಪಟ್ಟಣ
ಹಾಸನ ಜಿಲ್ಲೆ – ೫೭೩೧೧೬

# ಅಭಿಪ್ರಾಯಗಳು

ಹಿರಿಯರಾದ ಡಾ. ಎಂ.ಎಸ್. ಶೇಖರ್ ಅವರಿಗೆ, ತಾವು ಅನಿಕೇತನ ಅಕ್ಟೋಬರ್-ಡಿಸೆಂಬರ್ ಸಂಚಿಕೆಯನ್ನು ತುಂಬಾ ಅರ್ಥಪೂರ್ಣವಾಗಿ ರೂಪಿಸಿರುವಿರಿ. ಓದಬಹುದಾದ, ಪಠ್ಯಕ್ಕೆ ಆಕರವಾಗಬಹುದಾದ ಕೆಲಸ ಇದಾಗಿದ್ದು, ಇಲ್ಲದ ಭ್ರಮೆ, ಯಾರದೋ ಮೆಚ್ಚಿಗೆಯ ಕೆಲಸದಿಂದ ಹೊರಗುಳಿದು, ವಿದ್ಯಾರ್ಥಿ, ಅಧ್ಯಾಪಕ-ಅಧ್ಯಾಪನಕ್ಕೆ ಉಪಯುಕ್ತ ಲೇಖನ ಬಳಸಿಕೊಂಡಿರುವಿರಿ. ಲೇಖಕರ ಬಳಗವೂ ವೈವಿಧ್ಯವಾಗಿದೆ. ಹೊಸಬರು ಚಿಂತನಾಶೀಲತೆ ಹಾಗೂ ನೈಜ ಸಾಹಿತ್ಯಾಸಕ್ತಿಯಿಂದ ಬರೆದಿದ್ದಾರೆ. ತಮ್ಮ ಸಂಪಾದಕೀಯವೂ ಕ್ರಿಯಾಶೀಲ, ನೇರ, ಸ್ಪಷ್ಟವಾಗಿದೆ. ಸರಳವಾಗಿ ಓದಿ ಬರಬಹುದಾದ, ಸಂಗ್ರಹಯೋಗ್ಯ ಸಂಚಿಕೆ.

ಅಭಿನಂದನೆಗಳೊಂದಿಗೆ

ದಿನಾಂಕ : ೩೦-೪-೨೦೦೬

ಡಾ. ಚಿಕ್ಕಣ್ಣ ಯಣ್ಣೆಕಟ್ಟೆ
ಕನ್ನಡ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಸಿರಾ, ತುಮಕೂರು ಜಿಲ್ಲೆ

# ಅಭಿಪ್ರಾಯಗಳು

ಮಾನ್ಯರೆ,

ಅಕಾಡೆಮಿಯ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ವು ಒಳ್ಳೆಯ ವೈಚಾರಿಕ ಲೇಖನ, ಪ್ರಬಂಧಗಳು ಸುಂದರವಾಗಿ ಹೊರಬರುತ್ತಿದೆ. ನಾನು ಅನಿಕೇತನದಲ್ಲಿ ಓದಿದ ಹಲವಾರು ಲೇಖನ ಹಾಗೂ ವಿಮರ್ಶಾತ್ಮಕ ಬರಹಗಳನ್ನು ಓದಿ ನನ್ನ ಸ್ನೇಹಿತರ ಜೊತೆ ಚರ್ಚಿಸಿದ್ದೇನೆ.

ಈಗ ನಾನು ಅನಿಕೇತನದ ಚಂದಾದಾರನಾಗಬೇಕು ಎಂದುಕೊಂಡಿರುವೆ. ನನ್ನ ಸ್ನೇಹಿತರು ಚಂದಾದಾರಾಗಬೇಕೆಂದುಕೊಂಡಿರುವರು. ತಾವು ಈ ಬಗ್ಗೆ ಮಾಹಿತಿ ಕಳುಹಿಸಿ.

ಧನ್ಯವಾದಗಳೊಂದಿಗೆ

ದಿನಾಂಕ : ೨೭-೪-೨೦೦೬

ಗುರುರಾಜ್ S/o ಲಿಂಗಪ್ಪ
೫ನೇ ಕ್ರಾಸ್, ೧೧ನೇ ವಾರ್ಡ್,
ಎಸ್.ಎಲ್. ಚೌಕಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ

# ಲೇಖಕರಿಗೆ ವಿನಂತಿ

ಅಕಾಡೆಮಿಯ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ದ ಸ್ವರೂಪದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಬೇಕೆಂಬ ಹಂಬಲವನ್ನು ತಾವು ಇದುವರೆಗಿನ ಸಂಚಿಕೆಗಳ ಮೂಲಕ ಗಮನಿಸಬಹುದಾಗಿದೆ. ಕನ್ನಡದ ಶ್ರೇಷ್ಠ ಲೇಖಕರನ್ನೆಲ್ಲ ಒಳಗೊಳ್ಳುವಂತೆಯೂ ಹಾಗೂ ಹೊಸ ಸಂವಾದ, ಸಂವೇದನೆಗಳ ಶಕ್ತ ವೇದಿಕೆಯಾಗಿ ಪತ್ರಿಕೆ ಗಂಭೀರ ಸಾಹಿತ್ಯ ಚಿಂತನೆಗಳ ಅಭಿವ್ಯಕ್ತಿಯಾಗಿ ರೂಪುಗೊಳ್ಳಬೇಕೆಂದೂ ನಮ್ಮ ಆಶಯವಾಗಿದೆ. ಕನ್ನಡದ ಹಿರಿಯ ಹಾಗೂ ಭರವಸೆಯ ಹೊಸ ಪೀಳಿಗೆಯ ಲೇಖಕರೆಲ್ಲರ ಭಾಗವಹಿಸುವಿಕೆಯೇ ಪತ್ರಿಕೆಗೆ ಜೀವದ್ರವ್ಯವಾದ್ದರಿಂದ ತಮ್ಮ ಅಮೂಲ್ಯ ಸಹಕಾರ ಅತ್ಯಗತ್ಯ.

ಅನ್ಯಭಾಷೆಯ ಶ್ರೇಷ್ಠ ಬರಹಗಳ ಅನುವಾದದೊಂದಿಗೆ, ಸ್ವತಂತ್ರ ಬರಹಗಳನ್ನು ಆಹ್ವಾನಿಸುತ್ತಿದ್ದೇವೆ. 'ಅನಿಕೇತನ'ಕ್ಕಾಗಿ ಕವಿತೆ / ಕಥೆ / ಕಿರುನಾಟಕ / ವಿಮರ್ಶಾತ್ಮಕ / ವೈಚಾರಿಕ ಲೇಖನ / ಪ್ರಬಂಧ / ಸಾಂಸ್ಕೃತಿಕ ಚಿಂತನೆ ಹಾಗೂ ಅನುವಾದಗಳನ್ನು ಕಳುಹಿಸಿ ಕೊಡುವುದುರ ಮೂಲಕ ನಮ್ಮ ಪ್ರಯತ್ನಕ್ಕೆ ಸಹಕರಿಬೇಕೆಂದು ಕೋರುತ್ತಿದ್ದೇವೆ. ದಯವಿಟ್ಟು ಬರೆಯಿರಿ. ಪತ್ರಿಕೆಗೆ ಹೊಸ ರೂಪ ಕೊಡಬೇಕೆಂಬ ಪ್ರಯತ್ನಗಳ ನಮ್ಮೊಂದಿಗೆ ಸದಾ ನೀವಿರುತ್ತೀರೆಂಬುದೇ ನಮ್ಮ ಧೈರ್ಯ ಹಾಗೂ ವಿಶ್ವಾಸ.

ಅನುವಾದಗಳಾದರೆ ಮೂಲ ಲೇಖಕರ ಹೆಸರು, ವಿಳಾಸ, ಮೂಲ ಬರಹದ ಭಾಷೆಯ ವಿವರ ಅಗತ್ಯ. ಅನುಮತಿ ಪತ್ರದ ಜೆರಾಕ್ಸ್ ಪ್ರತಿ ಜೊತೆಯಲ್ಲಿರುವುದು ಅಪೇಕ್ಷಣೀಯ. ಬರವಣಿಗೆ ಹಾಳೆಯ ಒಂದೇ ಮಗ್ಗುಲಲ್ಲಿದ್ದು, ಸ್ಫುಟವಾಗಿ ಓದಲು ಅನುಕೂಲವಾಗುವಂತಿರಲಿ.

ಬರಹಗಳನ್ನು ಕಳುಹಿಸಬೇಕಾದ ವಿಳಾಸ :
ಸಂಪಾದಕರು, 'ಅನಿಕೇತನ', ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು – ೫೬೦ ೦೦೨

–ಸಂಪಾದಕರು

# ಕನ್ನಡಿ

ಲಕಲಕ ಕಂಗೊಳಿಸಲು ಕನ್ನಡಿ ಮುಂದೆ ನಿಂತೆ.
ಕನ್ನಡಿಯೊಳಗಿನ ನನ್ನ ಕಂಡು ಬೆಚ್ಚಿದೆ.
ಕಣ್ಣೊಳಗೆ ಇಣುಕುತ್ತಿದ್ದಾಳೆ ಲಕ್ವ ಹೊಡೆದ ಅಮ್ಮ
ನಾಲಗೆಯ ಮೇಲೆ ತೊತು ಬಾಯಿಯ ಅಪ್ಪ
ಕಿವಿಯೊಳಗೆಲ್ಲ ಅಂತೆ ಕಂತೆಯ ನೆರೆಹೊರೆಯ ಸಂತೆ
ಸೋದರ ಬಕಾಸುರನ ಸುಳಿದಾಟ ಹಲ್ಲುಗಳ ಸಂದಿಯಲ್ಲಿ
ಮನಸ್ಸಿನೊಳಗೆ ಒಲಿದು ನನ್ನಿಂದ ವದೆಸಿಕೊಂಡ ಕೀಚಕನ
ನಗು ; ಕಾಣದ ಮುತ್ತಜ್ಜಿ ಮುತ್ತಜ್ಜರ ಹೆಜ್ಜೆ
ಗುರುತು ಹಣೆಯ ಮೇಲೆ
ಕೈಯ ಒಂದೊಂದು ಬೆರಳಲ್ಲೂ ಯಾರ್‍ಯಾರೋ
ಕಾಲ ಒಂದೊಂದು ಬೆರಳಲ್ಲೂ ಮತ್ಯಾರೋ
ಒಲ್ಲದ ಸ್ಥಿತಿಯಲ್ಲಿರುವ ಒಲಿದವರು ; ಎಂದೆಂದೂ ಒಲ್ಲದವರು
ಅಂಗಾಲಿಂದ ನೆತ್ತಿತನಕ ನೆಲೆಯೂರಿದ್ದಾರೆ.
ಕನ್ನಡಿಯೊಳಗಿನ ವಿರಾಟ್‌ಸ್ವರೂಪ ನಾನಲ್ಲ
ನನ್ನೊಳಗೆ ನಾನಿಲ್ಲ ! ಕೂಡಲೆ ನನ್ನ ಕನ್ನಡಿ
ಅಡಗಿಸಿ ಬಳಸಿದೆ ಅಮ್ಮನ ಕನ್ನಡಿ
ಕಾಸಿನಗಲ ಕುಂಕುಮ ನಗೆಯ ಲೇಪನ
ಗೇಣಂಚಿನ ಜರಿಸೀರೆ – ಸಿದ್ಧಳಾದೆ ದುರ್ಗಾಷ್ಟಮಿಪೂಜೆಗೆ
ಅಜ್ಞಾತವಾದದ್ದು ಜ್ಞಾತವಾಗುವ ಈ ಹೊತ್ತಿನಲ್ಲಿ
ನನ್ನ ಅಡಗಿಸಿ ಅಕ್ಷರದೊಳಗೆ ಜ್ಞಾತಳಾದೆ

– ಚ. ಸರ್ವಮಂಗಳ

Reg. No. 45646/88 Price : 30/-